# ಅನುವಾದಗಳ ಮೂಲಕ ಹೊಸಗನ್ನಡ ಸಾಹಿತ್ಯಚಿಂತನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ(ಪಿಎಚ್.ಡಿ) ಪದವಿಗಾಗಿ
ಸಾದರ ಪಡಿಸಿದ ಮಹಾಪ್ರಬಂಧ)


ಸಂಶೋಧಕರು
**ಸವಿತ .ವಿ**

ಮಾರ್ಗದರ್ಶಕರು
**ಡಾ. ಎ. ಮೋಹನ ಕುಂಟಾರ್**
ಪ್ರಾಧ್ಯಾಪಕರು






**ಭಾಷಾಂತರ ಅಧ್ಯಯನ ವಿಭಾಗ**
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೮

# ಅನುವಾದಗಳ ಮೂಲಕ ಹೊಸಗನ್ನಡ ಸಾಹಿತ್ಯಚಿಂತನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ(ಪಿಎಚ್.ಡಿ) ಪದವಿಗಾಗಿ ಸಾದರ ಪಡಿಸಿದ ಮಹಾಪ್ರಬಂಧ)



ಸಂಶೋಧಕರು
ಸವಿತ.ವಿ

ಮಾರ್ಗದರ್ಶಕರು
ಡಾ. ಎ.ಮೋಹನ ಕುಂಟಾರ್
ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೮

# ಸಂಶೋಧಕರ ಘೋಷಣಾ ಪತ್ರ

**"ಅನುವಾದಗಳ ಮೂಲಕ ಹೊಸಗನ್ನಡ ಸಾಹಿತ್ಯಚಿಂತನೆ"** ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಡಾ. ಎ.ಮೋಹನ ಕುಂಟಾರ್, ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

(ಸವಿತ.ವಿ)

ಸಂಶೋಧನ ವಿದ್ಯಾರ್ಥಿನಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ದಿನಾಂಕ: 08/02/2018
ಸ್ಥಳ:ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

ಸವಿತ.ವಿ ಇವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಅನುವಾದಗಳ ಮೂಲಕ ಹೊಸಗನ್ನಡ ಸಾಹಿತ್ಯಚಿಂತನೆ"** ಎಂಬ ಸಂಶೋಧನ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲ ಬರವಣಿಗೆಯಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ದಿನಾಂಕ: ೦೯. ೦೨. ೨೦೧೮

ಸ್ಥಳ:ವಿದ್ಯಾರಣ್ಯ

(ಡಾ.ಎ.ಮೋಹನ ಕುಂಟಾರ್)
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

## ಪರಿವಿಡಿ

## ಅಧ್ಯಾಯ – ೧

# ಅನುವಾದಗಳ ಮೂಲಕ ಹೊಸಗನ್ನಡ ಸಾಹಿತ್ಯಚಿಂತನೆ

### ಪ್ರವೇಶ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸಗನ್ನಡ ಸಾಹಿತ್ಯ ಎಂಬುದು ಪ್ರಮುಖ ಕಾಲಘಟ್ಟ. ಇದು ಕೇವಲ ಭಾಷೆಯ ದೃಷ್ಟಿಯಿಂದ ಹೊಸತಾಗದೆ, ಸಾಹಿತ್ಯಕ್ಕೆ ಹೊಸ ಆಯಾಮವನ್ನು ನೀಡಿದ ಸಂದರ್ಭವಾಗಿದೆ. ಒಂದು ಹೊಸ ಚಿಂತನೆಯ ಮೂಲಕವೇ ಹೊಸಗನ್ನಡದಲಿಅದುವರೆಗಿನ ಭಾಷೆ, ವಸ್ತು, ಶೈಲಿ ಇವುಗಳನ್ನು ಬಿಟ್ಟು ಜನಸಾಮಾನ್ಯರಿಗೆ ಸಮೀಪವಾದ ಭಾಷೆಯಲ್ಲಿ ಸಾಹಿತ್ಯ ರಚನೆಯಾಯಿತು. ಸಾಹಿತ್ಯ ಕೃತಿಗಳಲ್ಲಿ ಪುರಾಣ, ಇತಿಹಾಸದಂತಹ ವಿಷಯಗಳಿಗಿಂತ ಭಿನ್ನವಾಗಿ ವಾಸ್ತವ ಹಾಗೂ ಸಮಕಾಲೀನ ಸಂಗತಿಗಳು ಸಾಹಿತ್ಯದ ವಸ್ತುವಾಗಿ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು.

ಈ ಹಿನ್ನೆಲೆಯಲ್ಲಿ ವಚನಸಾಹಿತ್ಯ ಹಾಗೂ ದಾಸಸಾಹಿತ್ಯವನ್ನು ಕಾಣಬಹುದಾದರೂ, ಇವು ಧಾರ್ಮಿಕ ಚೌಕಟ್ಟಿಗೆ ಒಳಪಟ್ಟಿದ್ದವು. ಅಲ್ಲದೆ ಹೆಚ್ಚು ಕಾಲ ಇದು ನೆಲೆಯೂರಲಿಲ್ಲ. ಸಾಹಿತ್ಯ ಸಾಮಾನ್ಯ ಜನರಿಂದ ದೂರ ಉಳಿದಿದ್ದು, ನಿರ್ದಿಷ್ಟ ಜನವರ್ಗವನ್ನು ಮಾತ್ರ ಕೇಂದ್ರೀಕರಿಸಿ ರಚನೆಗೊಳ್ಳುತ್ತಿದ್ದ ಸಂದರ್ಭದಲ್ಲಿ ಹೊಸಗನ್ನಡ ಸಾಹಿತ್ಯವು ಸರಳತೆಯ ಹೊಸ ಹಾದಿಯ ಮೂಲಕ ಜನಸಾಮಾನ್ಯರಿಗೆ ಪ್ರೇರಣೆ ನೀಡಿತು. ಇದಕ್ಕೆ ಹಿನ್ನೆಲೆಯಾಗಿ ಸಮಕಾಲೀನವಾಗಿ ಅನೇಕ ವಿದ್ಯಮಾನಗಳು ಪ್ರೇರಣೆ ನೀಡಿವೆ. ಬ್ರಿಟಿಷರ ವಸಾಹತುಶಾಹಿ ವ್ಯವಸ್ಥೆ, ಮಿಶನರಿಗಳ ಧರ್ಮ ಪ್ರಚಾರ, ಹೊಸ ಮಾಧರಿಯ ಶಿಕ್ಷಣ ವ್ಯವಸ್ಥೆ, ಮುದ್ರಣಾಲಯ, ಗ್ರಂಥೋದ್ಯಮ, ಪತ್ರಿಕೆಗಳ ಸ್ಥಾಪನೆ, ಸ್ಥಳೀಯವಾದ ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳಿಂದ ಕನ್ನಡ ಸಾಹಿತ್ಯ ಹೊಸ ನಿಲುವನ್ನು ಪಡೆಯಿತು. ಅಲ್ಲದೆ ಹೊಸ ಹೊಸ ಸಾಹಿತ್ಯ ಪ್ರಕಾರಗಳ ರೂಪದಲ್ಲಿ ಈ ಚಿಂತನೆಗಳು ಹೊರಹೊಮ್ಮಿದವು. ಸಣ್ಣಕಥೆ, ಕಾವ್ಯ, ಕಾದಂಬರಿ, ನಾಟಕ ಹೀಗೆ ಹೊಸ ಪ್ರಕಾರಗಳೆ ಹೊಸಗನ್ನಡ ಸಾಹಿತ್ಯದ ಪ್ರಮುಖ ಘಟಕಗಳು.

ವಸಾಹತುಶಾಹಿ ಆಡಳಿತ ವ್ಯವಸ್ಥೆಯಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಓದು–ಬರಹ ಕಲಿಯುವುದು ಸಾಧ್ಯವಾಯಿತು. ಶಿಕ್ಷಣ ಪಡೆದವರು ಇಂಗ್ಲಿಷ್ ಸಾಹಿತ್ಯವನ್ನು ಓದಿದರು. ಬಳಿಕ ಅವುಗಳನ್ನು ಕನ್ನಡಕ್ಕೆ ಅನುವಾದ ಮಾಡುವುದರ ಮೂಲಕ ಇಂಗ್ಲಿಷ್ ಓದಲಾಗದವರಿಗೂ ಅವುಗಳನ್ನು ತಲುಪಿಸಿದರು. ಅಲ್ಲದೆ ಅದೇ ಮಾದರಿಗಳಲ್ಲಿ ಕನ್ನಡದಲ್ಲಿ ಸಾಹಿತ್ಯ ರಚಿಸಲು ಯತ್ನಿಸಿದರು. ಅದುವರೆಗೆ ಕನ್ನಡ ಸಾಹಿತ್ಯದಲ್ಲಿದ್ದ ಪರಂಪರಾಗತವಾದ ಕಾವ್ಯ ಪರಂಪರೆಗೆ ಭಿನ್ನವಾಗಿ ಪಾಶ್ಚಾತ್ಯ ಸಾಹಿತ್ಯದ ಪ್ರಕಾರಗಳು ಅನೇಕ ಕಾರಣಗಳಿಂದಾಗಿ ಸ್ಥಳೀಯವಾಗಿ ಮಾನ್ಯತೆ

ಪಡೆದುವು. ವಿಶಿಷ್ಟವಾದ ಶೈಲಿ, ತಂತ್ರ, ಸ್ವರೂಪ ಇವುಗಳಿಂದಾಗಿ ಕನ್ನಡ ಸಾಹಿತ್ಯ ಹೊಸ ರೂಪವನ್ನು ಪಡೆಯಿತು. ಹೀಗೆ ಕನ್ನಡದಲ್ಲಿ ೧೯ನೇ ಶತಮಾನದಲ್ಲಿ ಹೊಸಗನ್ನಡ ಸಾಹಿತ್ಯ ಚಿಂತನೆ ರೂಪುಗೊಳ್ಳುವಲ್ಲಿ ಅನೇಕ ಸಂಗತಿಗಳು ಪ್ರೇರಣೆ ನೀಡಿವೆ.

ಈಗಾಗಲೇ ಗಮನಿಸಿದಂತೆ ಹೊಸಗನ್ನಡ ಸಾಹಿತ್ಯ ಚಿಂತನೆ ಹೊಸ ರೂಪವನ್ನು ಪಡೆಯುವಲ್ಲಿ ದೊರೆತ ಅನೇಕ ಪ್ರೇರಣೆಗಳಲ್ಲಿ ಅನುವಾದ ಪ್ರಕ್ರಿಯೆಯೂ ಒಂದು. ೧೯ನೇ ಶತಮಾನದ ಕೊನೆ ಹಾಗೂ ೨೦ನೇ ಶತಮಾನದ ಆರಂಭದ ದಶಕಗಳಲ್ಲಿ ಹೊಸ ಸಾಹಿತ್ಯ ಪ್ರಕಾರಗಳಲ್ಲಿ ಸ್ವತಂತ್ರ ಕೃತಿಗಳು ರಚನೆಯಾಗಲು ಅನುವಾದ ಕೃತಿಗಳ ಪ್ರೇರಣೆಗಳೂ ಮುಖ್ಯವಾಗಿವೆ. ಬರಹಗಾರರು ಸಾಮಾನ್ಯ ಜನರ ಸಮಕಾಲೀನ ಕನ್ನಡ ಭಾಷೆಯನ್ನು ಬಳಸಿ ವಾಸ್ತವ ಹಾಗೂ ಸಮಕಾಲೀನ ಸಂಗತಿಗಳನ್ನು ತಮ್ಮ ಸಾಹಿತ್ಯದ ವಸ್ತುವಾಗಿಸಿಕೊಂಡರು. ಗುಲ್ವಾಡಿ ವೆಂಕಟರಾಯರು, ಪಂಜೆಮಂಗೇಶರಾಯರು, ಹಟ್ಟಿಯಂಗಡಿ ನಾರಾಯಣರಾಯರು, ಎಂ.ಎನ್.ಕಾಮತ್ ಮೊದಲಾದವರು ಈ ಹಂತದಲ್ಲಿ ಪ್ರಮುಖರು. ಇವರು ಹೊಸಗನ್ನಡದಲ್ಲಿ ಪ್ರಕಾರ, ಆಶಯಗಳ ನೆಲೆಯಿಂದ ಚಿಂತನೆಗಳನ್ನು ಮಾಡಿ ಹೊಸತಾಗಿ ಪ್ರಯೋಗಗಳನ್ನು ಮಾಡಿದ ಆದ್ಯರು. ಈ ಹಿನ್ನೆಲೆಯಲ್ಲಿ ಹೊಸಗನ್ನಡ ಸಾಹಿತ್ಯ ಚಿಂತನೆಯನ್ನು ಒಂದು ಪರಿಭಾಷೆಯಾಗಿ ರೂಪಿಸಿ ವಿವರಿಸಿಕೊಳ್ಳುವುದಕ್ಕೆ ಅವಕಾಶಗಳಿವೆ.ಇದಕ್ಕೆ ಪ್ರೇರಕ ಶಕ್ತಿಯಾಗಿ ಅನುವಾದ ಕೃತಿಗಳು ಒದಗಿದ ಬಗೆಯೂ ಅಷ್ಟೇ ಕುತೂಹಲಕಾರಿ ಸಂಗತಿ. ಹಾಗಾಗಿ ಅನುವಾದ ಪ್ರಕ್ರಿಯೆಯ ಮೂಲಕ ಹೊಸಗನ್ನಡ ಸಾಹಿತ್ಯ ಚಿಂತನೆ ರೂಪುಗೊಂಡ ಬಗೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಉದ್ದೇಶ

ಹೊಸಗನ್ನಡ ಸಾಹಿತ್ಯ ಚಿಂತನೆ ರೂಪುಗೊಳ್ಳುವಲ್ಲಿ ಅನುವಾದ ಕೃತಿಗಳ ಪ್ರೇರಣೆಯೂ ಸಹ ಮುಖ್ಯವಾಗಿದೆ. ಅನುವಾದ ಕೃತಿಗಳ ಮೂಲಕ ಹೊಸಗನ್ನಡ ಸಾಹಿತ್ಯ ಚಿಂತನೆಯನ್ನು ಪರಿಭಾವಿಸುವ ಪ್ರಯತ್ನ ಸಾಂದರ್ಭಿಕವಾಗಿ ಬಿಡಿಬಿಡಿಯಾಗಿ ದಾಖಲಾಗಿವೆ. ಆದರೆ ಅನುವಾದಗಳ ಹಿನ್ನೆಲೆಯಲ್ಲಿ ಹೊಸಗನ್ನಡ ಸಾಹಿತ್ಯ ರಚನೆ ಕುರಿತು ಸಮಗ್ರವಾದ ಚಿಂತನೆಗಳನ್ನು ಮಾಡಲು ಆಸ್ಪದವಿದೆ.

ಅನುವಾದ ಕೃತಿಗಳ ಮೂಲಕ ಹೊಸಗನ್ನಡ ಚಿಂತನೆಗಳು ರೂಪುಗೊಳ್ಳುತ್ತಾ ಪಾಶ್ಚಾತ್ಯ ಸಾಹಿತ್ಯದೊಂದಿಗೆ ಅನುಸಂಧಾನ ಮಾಡಿಕೊಂಡು ವಿವಿಧ ಪ್ರಕಾರಗಳಲ್ಲಿ ಅನಾವರಣಗೊಂಡವು. ಈ ಹಂತದಲ್ಲಿ ಪಾಶ್ಚಾತ್ಯ ಸಾಹಿತ್ಯದ ಅಂತಃಸತ್ವವನ್ನು ಕನ್ನಡದಲ್ಲಿ ಕಸಿಮಾಡುವ ಪ್ರಯತ್ನಗಳು ನಡೆದವು. ಹೊಸ ಆಶಯ, ಲಕ್ಷಣಗಳೊಂದಿಗೆ ಸಾಹಿತ್ಯವು ವೈವಿಧ್ಯಮಯವಾಗಿ ಜನರಿಗೆ ತಲುಪಿದವು. ಸಾಮಾನ್ಯ ಜನರ ಭಾವನೆಗಳ ಅಭಿವ್ಯಕ್ತಿಗೆ ಉತ್ತಮ ಮಾಧ್ಯಮವಾಯಿತು. ಈ ನೆಲೆಯಲ್ಲಿ ಅನುವಾದ ಕೃತಿಗಳು ಮಾದರಿಯಾಗಿ ಒದಗಿ ಬಂದಿರುವುದು ವಾಸ್ತವ. ಆದರೆ ಅವು ಎಷ್ಟರ ಮಟ್ಟಿಗೆ

ಹೊಸಗನ್ನಡ ಸಾಹಿತ್ಯ ಸೃಷ್ಟಿಗೆ ಯಾವ ನೆಲೆಯಲ್ಲಿ ಹೇಗೆ ಕಾರಣವಾಗಿವೆ ಎಂಬುದನ್ನು ಶೋಧಿಸುವುದು ಈ ಅಧ್ಯಯನದ ಮುಖ್ಯ ಕಾಳಜಿಯಾಗಿದೆ.

## ಸ್ವರೂಪ

೧೯ನೇ ಶತಮಾನದಲ್ಲಿ ಭಾರತೀಯ ಸಮಾಜದ ಮೇಲೆ ಎರಡು ರೀತಿಯ ಪ್ರಭಾವ ಪ್ರಮುಖವಾಗಿ ಕೆಲಸ ಮಾಡಿದವು. ಒಂದು ವಸಾಹತುಶಾಹಿ ಆಡಳಿತ ಹಾಗೂ ಪಾಶ್ಚಾತ್ಯ ಸಾಹಿತ್ಯ ಅನುವಾದ. ವಸಾಹತುಶಾಹಿ ಆಡಳಿತ ವ್ಯವಸ್ಥೆ ಭಾರತವನ್ನು ಪ್ರವೇಶಿಸಿದ ನಂತರದಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಗಮನಾರ್ಹ ಬದಲಾವಣೆಗಳು ಉಂಟಾದವು. ಅದುವರೆಗಿನ ಪರಂಪರಾಗತವಾದ ವ್ಯವಸ್ಥೆ ಸಂಪೂರ್ಣವಾಗಿ ಛಿದ್ರಗೊಂಡಿತು. ಅದರ ಜೊತೆಗೆ ಪಾಶ್ಚಾತ್ಯ ಸಾಹಿತ್ಯ ಅನುವಾದದಿಂದಾಗಿ ಜನರ ಜೀವನ ಕ್ರಮ, ಆಲೋಚನಾ ವಿಧಾನಗಳು ಭಿನ್ನ ನೆಲೆಯತ್ತ ಹೊರಳಿಕೊಂಡವು. ಪಾಶ್ಚಾತ್ಯ ಸಾಹಿತ್ಯ ಅನುವಾದಗೊಳ್ಳುವುದರ ಮೂಲಕ ಅದುವರೆಗಿನ ಭಾರತೀಯ ಮತ್ತು ಕನ್ನಡ ಸಾಹಿತ್ಯದ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳು ಉಂಟಾದವು. ಕನ್ನಡ ತನ್ನ ಹಿಂದಿನ ಸಾಹಿತ್ಯ ಪರಂಪರೆಗೆ ಭಿನ್ನವಾದ, ಹಿಂದೆಂದೂ ಕಂಡರಿಯದ ಪ್ರಕಾರಗಳು ಒಮ್ಮಿಂದೊಮ್ಮೆಗೆ ಸಾಹಿತ್ಯದಲ್ಲಿ ಆವಿರ್ಭವಿಸಿದವು. ಕಾದಂಬರಿ, ಸಣ್ಣಕಥೆ, ಕಾವ್ಯ, ನಾಟಕ ಇವೇ ಮೊದಲಾದ ಸಾಹಿತ್ಯ ಪ್ರಕಾರಗಳು ಸಾಹಿತ್ಯಪ್ರಿಯರ ಆಸಕ್ತಿಯನ್ನು ಕೆರಳಿಸಿದವು. ಇದರ ಜೊತೆಗೆ ಕನ್ನಡ ಭಾಷೆ, ನಾಡು–ನುಡಿ ಇವುಗಳನ್ನು ಕುರಿತಂತೆ ಹೊಸ ಚಿಂತನೆಗಳು ಸಾಹಿತ್ಯದಲ್ಲಿ ಕಾಣಿಸಿಕೊಂಡವು. ಈ ಹಿನ್ನೆಲೆಯಲ್ಲಿ ಹೊಸನ್ನಡ ಸಾಹಿತ್ಯದ ಸಾಮಾನ್ಯ ಚಿಂತನೆ ವಿಶಿಷ್ಟ ರೀತಿಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಿದೆ. ಈ ಹಂತದಲ್ಲಿ ಹುಟ್ಟಿಕೊಂಡಂತಹ ಸಾಹಿತ್ಯ ಪ್ರಕಾರಗಳನ್ನು ಅವುಗಳ ಹುಟ್ಟು ಮತ್ತು ಬೆಳವಣಿಗೆಗಳ ಐತಿಹಾಸಿಕ ಸ್ವರೂಪವನ್ನು ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ.

ಕಾದಂಬರಿಯು ಪಾಶ್ಚಾತ್ಯ ಸಾಹಿತ್ಯದ 'Novel'ಗೆ ಪರ್ಯಾಯವಾಗಿ ಕಾಣಿಸಿಕೊಂಡ ಪ್ರಕಾರವಾಗಿದೆ. ನಾವೆಲ್ ಪ್ರಕಾರವು ೧೫ನೇ ಶತಮಾನದಲ್ಲಿ ಯೂರೋಪ್‌ನಲ್ಲಿ ಹುಟ್ಟಿಕೊಂಡಿತು. ಈ ಪ್ರಕಾರವು ಐರೋಪ್ಯ ರಾಷ್ಟ್ರದಲ್ಲಿ ಇದ್ದಂತಹ ಔದ್ಯೋಗಿಕ ಕ್ರಾಂತಿ ಹಾಗೂ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ನಡುವೆ ಹುಟ್ಟಿಕೊಂಡಿತು. ಭಾರತೀಯ ಸಂದರ್ಭದಲ್ಲೂ ಇಂತಹದೇ ಆದ ವ್ಯವಸ್ಥೆ ೧೯ನೇ ಶತಮಾನದಲ್ಲಿ ಕಾಣಿಸಿಕೊಂಡಿತು. ವಸಾಹತುಶಾಹಿ ವ್ಯವಸ್ಥೆ, ಮಿಶನರಿಗಳ ಧರ್ಮ ಪ್ರಚಾರ ಹಾಗೂ ಭಾರತೀಯರಲ್ಲಿ ರಾಷ್ಟ್ರೀಯತೆಯ ಮನೋಧರ್ಮದ ಹಿನ್ನೆಲೆಯಲ್ಲಿ ಕಾದಂಬರಿಯು ಮುಖ್ಯ ಭೂಮಿಕೆಯಾಯಿತು. ಅಂದಿನ ಆಡಳಿತ ವ್ಯವಸ್ಥೆಯನ್ನು ಧಿಕ್ಕರಿಸುವ ಸಲುವಾಗಿ ಈ ಪ್ರಕಾರ ಮಾನ್ಯತೆ ಪಡೆಯಿತು. ಮಿಶನರಿಗಳ ಆಡಳಿತ ಕೇಂದ್ರ ಬಂಗಾಳವಾದ್ದರಿಂದ ಹೆಚ್ಚು ಧರ್ಮ ಗ್ರಂಥಗಳು ಮತ್ತು ಪಾಶ್ಚಾತ್ಯ ಕೃತಿಗಳು ಅಲ್ಲೇ ಅನುವಾದಗೊಂಡವು. ಜೊತೆಗೆ ಹೆಚ್ಚು ಪ್ರಾಶಸ್ತ್ಯವನ್ನೂ ಪಡೆಯಿತು. ನಂತರದಲ್ಲಿ ಇತರೇ ಭಾರತೀಯ ಭಾಷೆಗಳಲ್ಲೂ ಈ ಪ್ರಕಾರದಲ್ಲಿ ಸಾಹಿತ್ಯ ಸೃಷ್ಟಿಯಾಯಿತು.

ಕನ್ನಡ ಸಾಹಿತ್ಯದಲ್ಲಿ ಈ ಪ್ರಕಾರ ಬಂಗಾಳಿ ಸಾಹಿತ್ಯದ ಅನುವಾದದೊಂದಿಗೆ ಪ್ರವೇಶಿಸಿತು. ಬಿ.ವೆಂಕಟಾಚಾರ್ಯರಂತಹವರಿಂದ ಈ ಪ್ರಕಾರ ಕನ್ನಡಿಗರಿಗೆ ಪರಿಚಯವಾಯಿತು. ಕಾದಂಬರಿಯಲ್ಲಿ ವ್ಯಕ್ತಿ ನೆಲೆಯಲ್ಲಿ ಮಾತ್ರ ಶೋಧನೆ ಮಾಡದೆ ಸಮಾಜಮುಖಿಯಾಗಿಯೂ ಚಿಂತನೆಗಳು ವ್ಯಕ್ತಗೊಂಡಿರುವುದನ್ನು ಕಾಣಬಹುದು.

ಆರಂಭದಲ್ಲಿ ಬಂಗಾಳಿ ಹಾಗೂ ಮರಾಠಿ ಭಾಷೆಗಳಿಂದ ಹೆಚ್ಚು ಅನುವಾದಗಳು ಆದುವು. ನಂತರ ಸ್ವತಂತ್ರ ಕಾದಂಬರಿಗಳು ರಚನೆಯಾದವು. ಕಾದಂಬರಿ ಎನ್ನುವ ಪದ ಪ್ರಪ್ರಥಮವಾಗಿ ಪ್ರಯೋಗವಾದದ್ದು ೧೮೯೨ರ ಲಕ್ಷ್ಮಣ ಭೀಮರಾವ್ ಗದಗಕರ ಅವರ 'ಸೂರ್ಯಕಾಂತ' ಕೃತಿಯಲ್ಲಿ. ಇದರಲ್ಲಿ ಐತಿಹಾಸಿಕ ಅಂಶವಿದ್ದರೂ ಸಾಮಾಜಿಕ ಕಾದಂಬರಿಯ ಅಂಶಗಳನ್ನು ಹೆಚ್ಚಾಗಿ ಒಳಗೊಂಡಿದೆ. ಇದರ ನಂತರ ಎಂದರೆ ೧೮೯೯ರಲ್ಲಿ ಸಾಮಾಜಿಕ ಕಾದಂಬರಿ ರಚನೆಯಾಯಿತು. ಆರಂಭದಲ್ಲಿ ಕಾದಂಬರಿ ಪದಕ್ಕೆ ಬದಲಾಗಿ 'ಉಪನ್ಯಾಸ್', 'ನಾವಲ' ಮುಂತಾಗಿ ಬಳಸಲಾಗುತ್ತಿತ್ತು. ಬಿ.ವೆಂಕಟಾಚಾರ್ಯ ಅವರ 'ದುರ್ಗೇಶ ನಂದಿನಿ'ಯಲ್ಲಿ ಈ ಪ್ರಕಾರಕ್ಕೆ 'ಉಪನ್ಯಾಸ್' ಎಂದು ಕರೆದಿದ್ದಾರೆ. 'ಸೂರ್ಯಕಾಂತ' ಕೃತಿಯ ನಂತರದಲ್ಲಿ ಕಾದಂಬರಿ ಎಂಬ ಹೆಸರಿನಿಂದ ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಮಹತ್ವದ ಸ್ಥಾನ ಪಡೆಯಿತು. ಹೀಗೆ ಕನ್ನಡ ಸಾಹಿತ್ಯದಲ್ಲಿ ಸ್ವತಂತ್ರವಾಗಿ ಕಾದಂಬರಿಗಳು ಹುಟ್ಟಿಕೊಂಡು ವೈವಿಧ್ಯಮಯಾಗಿ ಬೆಳೆಯಲು ಪ್ರೇರಣೆ ನೀಡುವಲ್ಲಿ ಅನುವಾದಗಳ ಪಾತ್ರವನ್ನು ಕುರಿತಂತೆ ಅಧ್ಯಯನದಲ್ಲಿ ಪರಾಮರ್ಶಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಇದ್ದಂತಹ ಕಾವ್ಯ ಪರಂಪರೆಯು ಪಾಶ್ಚಾತ್ಯ ಸಾಹಿತ್ಯದ ಅನುವಾದದೊಂದಿಗೆ ಹೊಸ ನೆಲೆಯನ್ನು ಕಂಡುಕೊಂಡಿತು. ಮೊದಲು ಅನುವಾದ ಪ್ರಕ್ರಿಯೆ ನಡೆದು ನಂತರದಲ್ಲಿ ಅದೇ ಮಾದರಿಯಲ್ಲಿ ಸ್ವತಂತ್ರ ಕಾವ್ಯಗಳು ರಚನೆಯಾದವು. ನಂತರದಲ್ಲಿ ಏಕ ಪ್ರಕಾರವಾಗಿದ್ದ ಕಾವ್ಯವು ಭಾವಗೀತೆ, ಸುನೀತ ಹೀಗೆ ಹಲವಾರು ಮಾದರಿಗಳಲ್ಲಿ ಹಾಗೂ ಸರಳ ರೂಪದಲ್ಲಿ ಜನಸಾಮಾನ್ಯರಿಗೆ ಸಮೀಪವಾದ ಭಾಷೆಯಲ್ಲಿ ರಚನೆಯಾಯಿತು. ಕಾವ್ಯದ ವಸ್ತು, ಜಟಿಲವಾದ ಭಾಷೆ, ಛಂದಸ್ಸಿನ ಬಿಗಿಬಂಧ ಇವುಗಳಿಂದ ಕೂಡಿದ್ದರಿಂದ ಸಾಹಿತ್ಯ ಬರವಣಿಗೆಯಿಂದ ದೂರ ಉಳಿದಿದ್ದ ಜನರು ಪಾಶ್ಚಾತ್ಯ ಕೃತಿಗಳ ಓದು ಹಾಗೂ ಅನುವಾದಗಳಿಂದಾಗಿ ಸಾಹಿತ್ಯ ರಚಿಸಲು ಆಸಕ್ತಿ ತಳೆದರು. ಹೀಗೆ ಹೊಸ ಕಾವ್ಯ ರಚನೆ ರೂಪುಗೊಂಡು ಹೊಸಗನ್ನಡ ಹೊಸ ಹಾದಿಯನ್ನು ಹಿಡಿಯಿತು. ಇದಕ್ಕೆ ಅನುವಾದ ಪ್ರಕ್ರಿಯೆ ಪ್ರೇರಣೆಯಾದ ಬಗೆಯನ್ನು ಅಧ್ಯಯನ ಮಾಡಲಾಗಿದೆ.

ಇಂಗ್ಲಿಷ್‌ನ 'Short Story' ಪದದ ನೇರ ಭಾಷಾಂತರವೇ ಸಣ್ಣಕಥೆ. ಭಾರತೀಯ ಹಾಗೂ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಥಾ ಪ್ರಕಾರ ಹೊಸತೇನಲ್ಲ. ಕನ್ನಡದ ಮೊದಲ ಉಪಲಬ್ಧ ಗದ್ಯಕೃತಿ 'ವಡ್ಡಾರಾಧನೆ'ಯು ಕಥೆಗಳ ಸಂಕಲನ. ಇದರಲ್ಲಿ ಕಥೆ, ಉಪಕಥೆ, ತಂತ್ರ ಹಾಗೂ ಸ್ವರೂಪವನ್ನು ಕಾಣಬಹುದು. ಇದಲ್ಲದೆ ಪಂಚತಂತ್ರ, ಕಥಾಸರಿತ್ಸಾಗರ ಹಾಗೂ ಜಾನಪದ ಕಥಾಪರಂಪರೆ ಸಹ ಇದ್ದವು. ಆದರೆ ಪಾಶ್ಚಾತ್ಯ ಸಾಹಿತ್ಯದ ಅನುವಾದದೊಂದಿಗೆ ಈ ಸಾಹಿತ್ಯ

ಪ್ರಕಾರ ಪ್ರವೇಶಗೊಂಡು ಹೊಸ ಆಲೋಚನೆಗಳಿಗೆ ಎಡೆಮಾಡಿಕೊಟ್ಟಿತು. ಸರಳವಾದ ಭಾಷೆ, ವಸ್ತು ಹಾಗೂ ಸಾಮಾನ್ಯರೂ ಅರ್ಥೈಸಿಕೊಳ್ಳಲು ಹಾಗೂ ರಚಿಸಲು ಉತ್ತಮ ಪ್ರಕಾರವೆನಿಸಿತು. ವಾಸ್ತವ ಸಂಗತಿಗಳು, ಸಾಮಾಜಿಕ ಮೌಲ್ಯಗಳು ಹಾಗೂ ಸಾಮಾನ್ಯ ಬದುಕಿನ ಚಿತ್ರಣ ಸಣ್ಣಕಥೆಗಳಲ್ಲಿ ಅನಾವರಣಗೊಂಡವು. ಪಾಶ್ಚಾತ್ಯ ಅನುವಾದ ಕಥೆಗಳ ತಂತ್ರ, ಶೈಲಿಯನ್ನು ಬಳಸಿಕೊಂಡು ಸ್ಥಳೀಯತೆಯನ್ನು ಅದರಲ್ಲಿ ತುಂಬುವ ಪ್ರಯತ್ನ ನಡೆದು ಕನ್ನಡದಲ್ಲಿ ಸ್ವತಂತ್ರ ಸಣ್ಣಕಥೆಗಳು ರಚನೆಯಾದವು. ಹೀಗೆ ಕನ್ನಡದಲ್ಲಿ ಸಣ್ಣಕಥೆಗಳ ಹುಟ್ಟಿನೊಂದಿಗೆ ಹೊಸ ಚಿಂತನೆಗೆ ಅನುವಾದ ಕೃತಿಗಳು ಹೇಗೆ ಪೂರಕವಾಗಿದೆ ಎಂಬುದನ್ನು ಪ್ರಸ್ತುತ ಅಧ್ಯಯನಲ್ಲಿ ಕಂಡುಕೊಳ್ಳಲಾಗಿದೆ.

ಇದಲ್ಲದೆ ನಾಟಕ, ಚರಿತ್ರೆಯಂತಹ ಸಾಹಿತ್ಯ ಪ್ರಕಾರಗಳೂ ಕೂಡ ಅನುವಾದ ಪ್ರಕ್ರಿಯೆಯ ಮೂಲಕ ಹೊಸಗನ್ನಡ ಸಾಹಿತ್ಯಕ್ಕೆ ಪ್ರವೇಶವನ್ನು ಪಡೆದುವು. ಅನುವಾದ ಮಾದರಿಯಲ್ಲೇ ಸ್ವತಂತ್ರ ಕೃತಿಗಳು ರಚನೆಯಾದುವು. ಹೀಗೆ ರಚನೆಗೊಂಡ ಸಾಹಿತ್ಯ ಪ್ರಕಾರಗಳಿಗೆ ಅನುವಾದ ಪ್ರಕ್ರಿಯೆ ಹೇಗೆ ಪೂರಕವಾಗಿದೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ಕಂಡುಕೊಳ್ಳಲು ಯತ್ನಿಸಲಾಗಿದೆ. ಹೀಗೆ ಹೊಸಗನ್ನಡ ಕಾಲಘಟ್ಟದಲ್ಲಿ ಹೊಸ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡ ರೀತಿ ಹಾಗೂ ಈ ಪ್ರಕಾರಗಳು ತಮ್ಮ ಖಚಿತ ಸ್ವರೂಪವನ್ನು ಅನುವಾದಗಳ ಮೂಲಕ ಹೇಗೆ ರೂಪಿಸಿಕೊಂಡು ನಂತರದಲ್ಲಿ ಸ್ವತಂತ್ರವಾದ ಬಗೆಯನ್ನು ಪ್ರತಿಯೊಂದು ಪ್ರಕಾರಗಳ ಮೂಲಕ ವ್ಯಾಖ್ಯಾನಿಸಲು ಯತ್ನಿಸಲಾಗಿದೆ.

ಇದರ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ಪಡಿನೆರಳಲ್ಲಿ ರೂಪುಗೊಂಡ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯು ಹೇಗೆ ಸ್ಥಳೀಯ ವಿಚಾರಗಳನ್ನು ತನ್ನೊಳಗೆ ಸೇರಿಸಿಕೊಂಡು ವಿಶಿಷ್ಟವಾಗಿ ಮೈತಳೆಯಿತು? ಅನುವಾದ ಪ್ರಕ್ರಿಯೆಯಿಂದಾಗಿ ಜನರ ಆಲೋಚನೆ ಹಾಗೂ ಜೀವನ ಕ್ರಮ ಭಿನ್ನಗೊಳ್ಳಲು ಕಾರಣವೇನು? ಅನುವಾದ ಸಾಹಿತ್ಯದ ಮೂಲಕ ಹರಿದು ಬಂದ ವಿಚಾರಧಾರೆ ಏನು? ಆ ವಿಚಾರಧಾರೆಯನ್ನು ಸ್ವೀಕರಿಸಲು ಸ್ಥಳೀಯವಾಗಿ ಇದ್ದಂತಹ ಸಮಸ್ಯೆಗಳು ಯಾವುವು? ಎಂಬ ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ. ಇವುಗಳ ಮೂಲಕ 'ಹೊಸಗನ್ನಡ ಚಿಂತನೆ' ಎಂಬ ಪರಿಭಾಷೆಯ ವ್ಯಾಪ್ತಿಯಲ್ಲಿ ಹೊಸತನವನ್ನು ಕಂಡುಕೊಂಡ ಪ್ರಕಾರ, ವಸ್ತು, ಆಶಯ, ತಂತ್ರ ಹಾಗೂ ಇನ್ನಿತರೆ ವಿಷಯಗಳನ್ನು ವಿಶ್ಲೇಷಣೆ ಮಾಡಲಾಗಿದೆ.

## ವ್ಯಾಪ್ತಿ

ಹೊಸಗನ್ನಡ ಸಾಹಿತ್ಯ ಪ್ರಕಾರಗಳು ಖಚಿತವಾಗಿ ರೂಪುಗೊಂಡು ಪ್ರಚಾರಕ್ಕೆ ಬರುವ ಪೂರ್ವದ ಅಂದರೆ ಸುಮಾರು ೧೮೪೭ರಿಂದ ೧೯೨೦ರ ಅವಧಿಯ ಸುಮಾರು ೭೦ ವರ್ಷಗಳಲ್ಲಿ ಕನ್ನಡದಲ್ಲಿ ಬಂದ ಪ್ರತಿಯೊಂದು ಪ್ರಕಾರಗಳ ಅನುವಾದ ಕೃತಿಗಳನ್ನು ಹಾಗೂ ಆರಂಭದ ಸ್ವತಂತ್ರ ಕೃತಿಗಳನ್ನು ಕೇಂದ್ರೀಕರಿಸಿ ಅಧ್ಯಯನವನ್ನು ರೂಪಿಸಲು ಯತ್ನಿಸಲಾಗಿದೆ. ಈ ಅವಧಿಯಲ್ಲಿ ಬಂದ ವಿಭಿನ್ನ ಪ್ರಕಾರದ ಮಾದರಿಯನ್ನು ಕಂಡುಕೊಳ್ಳುವುದು ಕೂಡ ಅಷ್ಟೇ ಮುಖ್ಯವಾಗಿದೆ. ಆ ಹಂತದಲ್ಲಿ

ಅನುವಾದ ಕೃತಿಗಳಿಗೆ ಬಂದ ಸಮಕಾಲೀನ ಪ್ರತಿಕ್ರಿಯೆಗಳನ್ನು, ಅನುವಾದಕರ ಕಾಳಜಿಗಳನ್ನು, ಆ ಕೃತಿಯ ಮುನ್ನುಡಿ ಹಾಗೂ ಬೆನ್ನುಡಿಗಳನ್ನು ಮುಖ್ಯ ಆಕರಗಳಾಗಿ ಲಕ್ಷ್ಯದಲ್ಲಿ ಇರಿಸಿಕೊಳ್ಳಲಾಗಿದೆ. ಅನುವಾದ ಎಂದರೆ ಕೇವಲ ಒಂದು ಕೃತಿಯ ಯಥಾವತ್ತಾದ ಅನುಕರಣೆಯಾಗಿರದೆ, ಆ ಕೃತಿಯ ವಸ್ತು, ಶೈಲಿ, ಆಲೋಚನೆ, ಆಶಯ, ಛಂದಸ್ಸು ಇವುಗಳಲ್ಲಿ ಯಾವುದೇ ಒಂದು ಅಂಶ ಸ್ವೀಕಾರವಾದರೂ ಅದು ಅನುವಾದವೇ ಆದ್ದರಿಂದ ಈ ಅಂಶಗಳನ್ನೂ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

* * * * *

ಅಧ್ಯಾಯ - ೨

# ಹೊಸಗನ್ನಡ ಸಾಹಿತ್ಯ – ಅನುವಾದದ ನೆಲೆಗಳು

ಹೊಸಗನ್ನಡ ಸಾಹಿತ್ಯದ ಉಗಮವು ಅನುವಾದ ಪ್ರಕ್ರಿಯೆಯೊಂದಿಗೆ ತಳುಕು ಹಾಕಿಕೊಂಡಿರುವುದು ಗಮನಾರ್ಹ. ಭಾರತೀಯ ಹಾಗು ಪಾಶ್ಚಾತ್ಯ ಸಾಹಿತ್ಯದ ಅನುವಾದ ಕೃತಿಗಳು ೨೦ನೇ ಶತಮಾನದ ಸಾಹಿತ್ಯ ಕೃತಿಗಳ ಮೇಲೆ ತನ್ನದೇ ಆದ ಪರಿಣಾಮವನ್ನು ಉಂಟುಮಾಡಿದುವು. ಹೊಸತು ಹಳತುಗಳ ನಡುವೆ ಯಾವಾಗಲೂ ಸಂಘರ್ಷಗಳು ನಡೆಯುತ್ತಲೇ ಇರುತ್ತವೆ. ಇಂತಹ ಸಂಘರ್ಷಗಳು ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೆಚ್ಚಾಗಿವೆ.

ಇಂಗ್ಲಿಷ್ ಸಾಹಿತ್ಯದ ಪ್ರಭಾವವು ಕನ್ನಡ ಕಾವ್ಯ ಪರಂಪರೆಯ ಮೇಲೆ ಉಂಟಾಗಿದ್ದು ೧೯ನೇ ಶತಮಾನದ ಉತ್ತರಾರ್ಧದಲ್ಲಿ. ಸಾಹಿತ್ಯದ ವ್ಯಾಪ್ತಿಯು ವಿಸ್ತಾರಗೊಂಡು ಸಾಮಾನ್ಯ ವಿಚಾರಗಳೂ ಕಾವ್ಯದ ಭಾಗವಾದವು. ಜೀವನಶೈಲಿಯು ಬದಲಾದಂತೆ ದೃಷ್ಟಿಕೋನ, ಚಿಂತನೆಗಳು ಬದಲಾದವು. ಇ.ಪಿ.ರೈಸ್‌ರವರು ಇದರ ಬಗ್ಗೆ "ಪಾಶ್ಚಾತ್ಯ ವಿಚಾರಗಳ ಮಹಾಪ್ರವಾಹದಿಂದ ಕನ್ನಡ ಸಾಹಿತ್ಯವಾಹಿನಿ ಬಹಳ ಬದಲಾಯಿಸಿವೆ ಮತ್ತು ವಿಶಾಲವಾಗಿವೆ' ಎಂದಿದ್ದಾರೆ. ಶ್ರೀಯವರು ಕೂಡ "ಈಗ ೧೯ನೆಯ ಶತಮಾನದಲ್ಲಿ ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ ಐಹಿಕ ಸಾಧನ ಸಂಪತ್ತು ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶ ಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ದೇಶಾಭಿಮಾನವನ್ನೂ, ಹೊಸ ರುಚಿಯನ್ನೂ ಕಲಿತು, ಹೊಸ ರೀತಿಗಳಲ್ಲಿ ಕಾವ್ಯ ಸೃಷ್ಟಿಯನ್ನು ಅಭ್ಯಾಸಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತ ಕವಿತೆಗಳೂ, ಹೊಸ ಕಾವ್ಯರೂಪಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು ಲಕ್ಷ್ಯಕ್ಕೆ ತಾರದೆ ಸ್ವತಂತ್ರ್ಯ ಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿವೆ."(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ–ಪು. ೫) ಎಂದಿದ್ದಾರೆ.

ಅನುವಾದ ಪ್ರಕ್ರಿಯೆ ಕನ್ನಡ ಸಾಹಿತ್ಯಕ್ಕೆ ಹೊಸತೇನಲ್ಲ. ಪಂಪನಾದಿಯಾಗಿ ಇದನ್ನು ಗುರುತಿಸಬಹುದು. ಸಂಸ್ಕೃತದಂತೆ ಭಾರತೀಯ ಇತರೆ ಭಾಷೆಗಳ ಸಾಹಿತ್ಯವನ್ನು ಅನುವಾದಿಸುವಾಗ ಎದುರಾಗುವ ಅಡಚಣೆಗಿಂತ ಪಾಶ್ಚಾತ್ಯ ಭಾಷೆಗಳ ಅನುವಾದ ಸಂದರ್ಭದಲ್ಲಿ ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತವೆ. ಎಸ್.ಎಲ್.ಭೈರಪ್ಪನವರ ಮಾತು ಇಲ್ಲಿ ಪ್ರಸ್ತುತವಾಗಿದೆ "ಭಾರತದ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾಹಿತ್ಯ ಕೃತಿಗಳನ್ನು ಅನುವಾದಿಸುವಾಗ ಪಾರಿಭಾಷಿಕ ಮತ್ತು ಸಾಂಸ್ಕೃತಿಕ ಶಬ್ದಗಳ ಅಡಚಣೆ ಹೆಚ್ಚಾಗಿ ಉಂಟಾಗಿಲ್ಲ. ನಮ್ಮ ಸಾಹಿತ್ಯ ಕೃತಿಗಳನ್ನು ಇಂಗ್ಲಿಷ್‌ಗೆ ಅನುವಾದಿಸುವುದು ನಿಜವಾಗಿಯೂ ಕಷ್ಟ. ಏಕೆಂದರೆ ಇದು ಒಂದು ಸಂಸ್ಕೃತಿಯಲ್ಲಿ

ಬೆಳೆದು ಅಭಿವ್ಯಕ್ತವಾದ ಅನುಭವವನ್ನು ಇನ್ನೊಂದು ಸಂಸ್ಕೃತಿ ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯಲ್ಲಿ ರೂಪ ಕೊಡುವ ಕ್ರಮ." (ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆ –ಪು. ೧೪೬)ಎಂದಿದ್ದಾರೆ. ಇಂಗ್ಲಿಷ್ ಸಾಹಿತ್ಯವು ಇಂತಹ ಭಿನ್ನವಾದ ಅನುಭವ ವ್ಯವಸ್ಥೆಯನ್ನು ಹೊಂದಿದ್ದರು ಭಾರತೀಯ ಮನಸ್ಸುಗಳಿಗೆ ಅದರ ಅನುವಾದ ಕೃತಿಗಳು ಹೊಸ ಆಲೋಚನೆಗಳಿಗೆ ಪೋಷಣೆ ನೀಡಿದುವು. ಅಲ್ಲದೆ ತಮ್ಮ ಆಲೋಚನೆ, ಬದುಕು ಇತರರಿಗಿಂತ ಹೇಗೆ ಭಿನ್ನವಾಗಿದೆ? ನಮ್ಮ ಕಾವ್ಯದ ಸ್ವರೂಪಕ್ಕಿಂತ ಹೊಸ ರೂಪದ ಕಾವ್ಯಗಳ ರಚನೆ ಹೇಗೆ ವೈಶಿಷ್ಟ್ಯದಿಂದ ಕೂಡಿದೆ? ಎಂಬುದರ ಅರಿವು ಇಂಗ್ಲಿಷ್ ಶಿಕ್ಷಣದ ಮಹತ್ವದ ಕೊಡುಗೆ. ಇದರಿಂದ ಹುಟ್ಟಿಕೊಂಡ ಹೊಸ ಸಾಹಿತ್ಯವೆ ಹೊಸ ಚಿಂತನೆಯ ಫಲ. ಸಾಹಿತ್ಯದ ಭಾಷೆ, ವಸ್ತು, ಛಂದಸ್ಸು, ಶೈಲಿ, ಪ್ರಕಾರ ಇವೆಲ್ಲವೂ ಹೊಸಗನ್ನಡ ಸಾಹಿತ್ಯದ ಚಿಂತನೆಗಳಾಗಿವೆ. ಇದಕ್ಕೆ ಮಾಸ್ತಿಯವರು "ಆಧುನಿಕ ಕಾವ್ಯವು ಈ ಶತಮಾನದ ಆರಂಭದಲ್ಲಿ ಪ್ರಾರಂಭವಾಯಿತು. ಜಾನಪದ ಛಂದಸ್ಸನ್ನು ಪ್ರೌಢವಾದ ವಸ್ತುವಿಗೆ ಬಳಸುವುದೂ, ಜನಬಳಕೆಯ ಮಾತಿನ ಹತ್ತಿರ ಹತ್ತಿರದ ಭಾಷೆಯನ್ನೇ ಸಾಹಿತ್ಯದಲ್ಲಿ ಬಳಸುವುದೂ ಈ ಹೊಸತನದ ಲಕ್ಷಣಗಳು" ಎಂದಿದ್ದಾರೆ. ಆದರೆ ಈ ಕಾರ್ಯ ಅಷ್ಟು ಸುಲಭವಾದದ್ದಾಗಿರಲಿಲ್ಲ. ಒಂದು ವ್ಯವಸ್ಥೆಗೆ ಏಕ ಕಾಲಕ್ಕೆ ಅಭಿಮುಖವಾಗುವುದು ಕಷ್ಟಕರವಾದ ಸಂಗತಿಯಾಗಿತ್ತು. ಏಕೆಂದರೆ ಸಾಹಿತ್ಯದ ರಚನೆ ಹಾಗೂ ಆಸ್ವಾದನೆಗೆ ತನ್ನದೆ ಆದ ಮಡಿವಂತಿಕೆ ಕನ್ನಡ ಪರಿಸರದಲ್ಲಿತ್ತು. ಇದನ್ನು ಮೀರಿ ಹೊಸದನ್ನು ಸ್ಥಾಪಿಸುವ ಕಾಯಕಕ್ಕೆ ಅನೇಕ ಎಡರು ತೊಡರುಗಳಿದ್ದವು. ಅವೆಲ್ಲವುಗಳನ್ನು ಮೀರಿ ಹೊಸಗನ್ನಡ ಸಾಹಿತ್ಯ ಹೊಸ ರೂಪವನ್ನು ಪಡೆಯಿತು. ಇದಕ್ಕೆ ಅನುವಾದ ಕೃತಿಗಳು ಮಾದರಿಯಾದವು.

### ಭಾಷಾಂತರ–ರೂಪಾಂತರ

ಅನುವಾದ ಪ್ರಕ್ರಿಯೆಯಲ್ಲಿ ಭಾಷಾಂತರ ಮತ್ತು ರೂಪಾಂತರ ಎಂದು ವಿಭಾಗಿಸಬಹುದು. ಭಾಷಾಂತರದ ಸಂದರ್ಭದಲ್ಲಿ ಪದ, ಪಡೆನುಡಿ, ಗಾದೆಯಂತಹ ಅನೇಕ ವಿಚಾರಗಳು ತೊಡಕನ್ನು ಉಂಟುಮಾಡಿದರೆ, ರೂಪಾಂತರದ ಸಂದರ್ಭದಲ್ಲಿ ಆಚಾರ ವಿಚಾರಗಳು, ಬದುಕಿನ ವಿಧಾನದಂತಹ ಸಾಂಸ್ಕೃತಿಕ ವಿಚಾರಗಳು ಸಮಸ್ಯೆಗಳನ್ನು ಸೃಷ್ಟಿಸುತ್ತವೆ. ಉದಾಹರಣೆಗೆ ರೋಮಿಯೋ–ಜೂಲಿಯಟ್ ಅನುವಾದ ಸಂದರ್ಭವನ್ನು ಗಮನಿಸಬಹುದು.

ಇದರ ಜೊತೆಗೆ ಪರಭಾಷೆಯ ಗ್ರಂಥಗಳನ್ನು ಇದ್ದಕ್ಕಿದ್ದ ಹಾಗೆ ಭಾಷಾಂತರಿಸುವುದು ಅತಿಶಯ ಶ್ರಮದ ಕೆಲಸ. ಗದ್ಯಕ್ಕಿಂತ ಪದ್ಯದ ಅನುವಾದ ಕಷ್ಟ. ಇದಕ್ಕೆ ಆ ಭಾಷೆಯ ವ್ಯಾಕರಣ, ಛಂದಸ್ಸು ತೊಡಕನ್ನು ಉಂಟುಮಾಡುತ್ತವೆ. ಒಂದು ಭಾಷೆಗೆ ತನ್ನದೇ ಆದ ಮರ್ಮವಿರುತ್ತದೆ. ಅನುವಾದಕನಿಗೆ ಇದರ ಒಳಹು ತಿಳಿದಿರಬೇಕು. ಇಲ್ಲವಾದಲ್ಲಿ ಆಶಯಕ್ಕೆ ಧಕ್ಕೆಯಾಗುತ್ತದೆ. ಭಾಷಾಂತರ ಸಮಸ್ಯೆ ಕುರಿತಂತೆ ಸರ್ ವಿಲಿಯಮ್ಸ್ ಜೋನ್ಸ್ 'ಒಂದು ಭಾಷೆಯ ಕವಿತೆಗಳನ್ನು ಮತ್ತೊಂದು ಭಾಷೆಯಲ್ಲಿ ಭಾಷಾಂತರಿಸುವವನು ಒಂದು ಸೀಸೆಯೊಳಗಿನ ಪನ್ನೀರನ್ನು ಮತ್ತೊಂದರಲ್ಲಿ ಸುರುವುವ ಗಂಧಿಗನಂತೆ

ಇರುತ್ತಾರೆ'. ಪನ್ನೀರಿನ ಕುಪ್ಪಿಯ ಬಾಯಿಯ ತೆರೆದು ಸುರುವುದರಲ್ಲಿ ಸುವಾಸನೆಯೆಲ್ಲಾ ಹಾರಿಹೋಗಿ ಬರಿಯ ನೀರು ಮಾತ್ರ ಮತ್ತೊಂದು ಸೀಸೆಯಲ್ಲಿ ನಿಲ್ಲುವುದು' (ತಟ್ಟಿಯವರ ಉದಾಹರಣೆ)ಎಂದಿದ್ದಾರೆ.

ಆದರೆ ತೊಂದರೆಗಳೇನೇ ಇದ್ದರೂ ಭಾಷಾಂತರದಿಂದ ಆ ಭಾಷೆಯ ಪರಿಸರ, ಚಿಂತನೆ, ಕವಿಗಳ ಮನೋಧರ್ಮ, ಆಚಾರ-ವಿಚಾರಗಳು ಇತರೆ ಭಾಷಿಕರಿಗೆ ತಲುಪುತ್ತವೆ. ಇದರಿಂದ ಹೊಸ ಚಿಂತನೆಗಳು ಸೃಜಿಸಲು ಕಾರಣವಾಗುತ್ತದೆ. ಇಂತಹ ಸಂದರ್ಭವನ್ನು ಭಾರತೀಯ ಪರಿಸರ ಹಾಗೂ ಸಾಹಿತ್ಯದಲ್ಲಿ ಕಾಣಬಹುದು.

ಒಂದು ಭಾಷೆ ಅಭಿವೃದ್ಧಿ ಹೊಂದಬೇಕಾದರೆ ಅದು ಭಾಷಾಂತರದಿಂದ ಸಾಧ್ಯ ಎಂಬುದನ್ನು ಎಂ.ಡಿ.ಅಳಸಿಂಗಾಚಾರ್ಯರು ತಮ್ಮ ಶ್ರೀಕೃಷ್ಣ ಸೂಕ್ತಿಯಲ್ಲಿ ಹೀಗೆ ತಿಳಿಸಿದ್ದಾರೆ "ಉಭಯ ಭಾಷೆಗಳನ್ನು ತಿಳಿದವರು ತಾವು ಭಾಷಾಂತರದಿಂದ ಸಂಗ್ರಹಿಸಿದ, ಸಾರವತ್ತಾಗಿಯೂ, ಜನರಂಜಕವಾಗಿಯೂ ಇರುವ ವಿಷಯಗಳನ್ನು ಸ್ವಭಾಷೆಯಲ್ಲಿ ಬರೆದಿಡುತ್ತಿದ್ದರೆ.... ಭಾಷಾಭಿವೃದ್ಧಿಗೆ ಹೇತುವಾಗುವುದು. ಸ್ವದೇಶೀಯ-ವಿದೇಶೀಯಗಳೆಂಬ ಭೇದವನ್ನಿಟ್ಟುಕೊಂಡು ಅತ್ಯಾದರವನ್ನಾಗಲಿ, ತಿರಸ್ಕಾರವನ್ನಾಗಲಿ ತೋರಿಸುವುದು ತಪ್ಪು ಎನ್ನುವ ಅವರು, ಎರಡನ್ನೂ ತಕ್ಕಮಟ್ಟಿಗೆ ಸಮಸ್ಥಿತಿಯಿಂದ ಆದರಿಸುತ್ತಿರಬೇಕು ಎನ್ನುವರು. ವಿದೇಶಿಯವೆಂಬ ಭಾವದಿಂದ ಭಾಷಾಂತರಗಳನ್ನು ತಿರಸ್ಕರಿಸಿ ಸ್ವದೇಶ ಭಾಷೆಯಲ್ಲಿಯೇ ಅತ್ಯಾದರವನ್ನು ತೋರಿಸಿದರೆ ಆ ಭಾಷಾಂತರಗಳಲ್ಲಿರುವ ಸಾರವಾದ ಅಂಶಗಳನ್ನು ಸಂಗ್ರಹಿಸಲು ಅವಕಾಶವಿಲ್ಲದೆ ಹೋಗುವುದು. ವಿದೇಶಿಯ ಭಾಷೆಯನ್ನು ಅತ್ಯಾದರದಿಂದ ಅಭ್ಯಸಿಸುತ್ತಾ ಸ್ವಭಾಷೆಯನ್ನು ತಿರಸ್ಕರಿಸಿದರೆ, ತಾವು ಅದರಿಂದ ಗ್ರಹಿಸಿದ ಸಾರಾಂಶಗಳನ್ನು ತಮ್ಮ ಭಾಷೆಯಲ್ಲಿ ಬರೆದು ಭಾಷೆಯನ್ನು ವೃದ್ಧಿಗೆ ತರುವಂತೆ ಮಾಡುವುದಕ್ಕೆ ತಕ್ಕ ವ್ಯುತ್ಪತ್ತಿಯನ್ನು ಸಂಪಾದಿಸಲು ಅವಕಾಶವಿಲ್ಲದೆ ಹೋಗುವುದು. ಅದ್ದರಿಂದ ಇವೆರಡನ್ನೂ ಸಮದೃಷ್ಟಿಯಿಂದ ಆದರಿಸುತ್ತಿದ್ದಷ್ಟೂ ಭಾಷಾಭಿವೃದ್ಧಿಗೆ ಹೇತುವಾಗುವುದು. ನದಿಗಳೆಲ್ಲವನ್ನೂ ತನ್ನೊಳಗೆ ಅಡಗಿಸಿಕೊಂಡು ತನ್ನಲ್ಲಿ ತಾನೇ ಉಕ್ಕಿ ಅಡಗುತ್ತಿರುವ ಸಮುದ್ರದಂತೆ ಅನೇಕ ಹೊಸ ವಿಷಯಗಳನ್ನು ತಿಳಿದುಕೊಂಡು ತಮ್ಮಲ್ಲಿ ತಾವೇ ಉಕ್ಕಿ ಆನಂದಪಡುವುದರಿಂದಲೇನು? ....ಆದುದರಿಂದ ಈಗಿನ ಆಂಗ್ಲೇಯ ವಿದ್ಯಾಭ್ಯಾಸದಲ್ಲಿ ಪ್ರವರ್ತಿಸಿ ವರ್ಧಿಷ್ಣುಗಳಾದ ವಿದ್ಯಾರ್ಥಿಗಳೆಲ್ಲರೂ... ತಮ್ಮ ಭಾಷೆಯನ್ನೂ ದೇಶವನ್ನೂ ವೃದ್ಧಿಸ್ಥಿತಿಗೆ ತರಬೇಕೆಂಬುದೊಂದುದ್ದೇಶವನ್ನು ಇಟ್ಟುಕೊಂಡಿರಬೇಕು. ಉಭಯ ಭಾಷಾಭಿಜ್ಞತೆ ಇದ್ದ ಹೊರತು ಇದು ಸಾಧ್ಯವಲ್ಲ' ಅನ್ಯ ಭಾಷೆ ಬಲ್ಲ ಕನ್ನಡಿಗರು ಭಾಷೆಯ ಅಭಿವೃದ್ಧಿಗೆ ತೊಡಗಬೇಕು. ಇದು ಕೇವಲ ಇಂಗ್ಲಿಷ್ ಭಾಷೆಗೆ ಮಾತ್ರ ಸೀಮಿತವಾಗಿರಲಿಲ್ಲ. ಜಗತ್ತಿನ ಎಲ್ಲಾ ಭಾಷೆಗಳ ಸಾಹಿತ್ಯವೂ ಕನ್ನಡಕ್ಕೆ ಲಭಿಸಬೇಕು ಎಂಬುದು ಇವರ ಆಶಯವಾಗಿದೆ.

ಇಂಗ್ಲಿಷ್ ಶಿಕ್ಷಣ ಪಡೆದವರಲ್ಲಿ ಕೆಲವರು ತಮ್ಮ ಭಾಷೆಗಾಗಿ, ಅದರ ಏಳಿಗೆಗಾಗಿ ಹೊಸ ಸಾಹಿತ್ಯ ಹಾಗೂ ಅದರ ಮೂಲಕ ಹೊಸ ಚಿಂತನೆಗಳನ್ನು ತಮ್ಮ ಜನರಲ್ಲಿ ಮೂಡಿಸುವ ಪ್ರಯತ್ನ ಮಾಡಿದರು. ಆದರೆ ಕೆಲವರು ತಮ್ಮ ಭಾಷೆಯನ್ನು ದೂಷಿಸುತ್ತಾ ಇಂಗ್ಲಿಷ್ ವ್ಯಾಮೋಹ

ಬೆಳೆಸಿಕೊಂಡಿದ್ದರು. ಇದನ್ನು ಅಂದಿನ ಅನೇಕರು ಖಂಡಿಸಿದ್ದರು. ಅಂತವರಲ್ಲಿ 'ಹಿತಬೋಧಿನಿ' ಪತ್ರಿಕೆಯ ಚಂದಾದಾರರೊಬ್ಬರು ಪತ್ರಿಕೆಗೆ ಪತ್ರವೊಂದನ್ನು ಬರೆದಿರುವುದು ಹೀಗೆ "ತಾವು ಇಂಗ್ಲಿಷ್ ಭಾಷೆಯೊಂದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡರೆ ಸ್ವಭಾಷೆಯು ತನ್ನಷ್ಟಕ್ಕೆ ತಾನೇ ಬರುವುದೆಂದು ಯೋಚಿಸಿಕೊಂಡು ಇಂಗ್ಲಿಷ್ ಭಾಷಾಭ್ಯಾಸಕ್ಕಾಗಿ ತಮ್ಮ ಶಕ್ತಿಯನ್ನೆಲ್ಲ ವಿನಿಯೋಗಿಸಿ, ಕರ್ನಾಟಕ ಭಾಷೆಯಲ್ಲಿ ಕೇವಲ ಜುಗುಪ್ಸಿತರಾಗಿದ್ದು....." (ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ – ೨೧). ಇಲ್ಲಿ ಇಂಗ್ಲಿಷ್ ಕಲಿತವರಿಂದ ಭಾಷೆ ಬೆಳೆಯಲು ಸಾಧ್ಯ. ಆದ್ದರಿಂದ ಇವರು ಭಾಷಾಭಿಮಾನಿಗಳಾಗಬೇಕು ಎಂದಿದ್ದಾರೆ. ಅವರ ಪ್ರಕಾರ ಅನುವಾದ ಪ್ರಕ್ರಿಯೆ ಒಳ್ಳೆಯದೆ. ಆದರೆ ಅದು ಒಂದು ಸಾಹಿತ್ಯದ ಪರಿಪುಷ್ಟಿಯಾಗುವಲ್ಲಿ ಸಹಾಯಕವಾಗಿರಬೇಕು. ಅದನ್ನು ಗಮನದಲ್ಲಿಟ್ಟುಕೊಂಡು ಭಾಷಾಂತರಕಾರ ಜವಾಬ್ದಾರಿಯಿಂದ ವರ್ತಿಸಬೇಕೆಂದು ವಿಮರ್ಶಕನೊಬ್ಬ ಜಯಕರ್ನಾಟಕ ಪತ್ರಿಕೆಯಲ್ಲಿ ಹೀಗೆ ಹೇಳುತ್ತಾ "ಅನುವಾದದಿಂದಲೇ ಕನ್ನಡ ಸಾಹಿತ್ಯವು ಪರಿಪುಷ್ಟವಾಗಬೇಕಾದಲ್ಲಿ ಇಂಗ್ಲೀಷ್–ಫ್ರೆಂಚ್–ಇಟಾಲಿಯನ್–ಸಂಸ್ಕೃತ ಮೊದಲಾದುವುಗಳಿಂದ ನಿಜವಾದ ಸಂಸ್ಕಾರ ದೊರೆಯಬಹುದೋ ಅಂತಹ ಸಂಸ್ಕಾರವು ಮರಾಠಿಯಿಂದ ದೊರೆಯಬಹುದೇ ಎಂಬ ಬಗ್ಗೆ ನಮಗೇಕೋ ಧೈರ್ಯವಿಲ್ಲ" ಎಂದಿದ್ದಾರೆ. ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ಸಾಹಿತ್ಯದ ಚಿಂತನೆಗಳು ಭಾರತೀಯ ಇತರೆ ಭಾಷೆಗಳ ಮೂಲಕ ಕನ್ನಡಕ್ಕೆ ಬಂದವು. ಈ ರೀತಿ ರೂಪಾಂತರ ಪಡೆದು ಬಂದಂತಹ ಕೃತಿಗಳಿಂದ ಹೊರಗಿನ ಆಚಾರ ವಿಚಾರಗಳು, ಚಿಂತನೆಗಳು ನಮಗೆ ಒಟ್ಟಾರೆಯಾಗಿ ಲಭ್ಯವಾಗುವುದಿಲ್ಲ. ಆದ್ದರಿಂದ ಅನುವಾದ ಪ್ರಕ್ರಿಯೆ ನೇರವಾಗಿ ನಡೆಯಬೇಕು ಎಂಬುದು ಇವರ ಆಶಯ.

ಈ ಬಗೆಗೆ ಬಿ.ಎಂ.ಶ್ರೀಯವರ ಮಾತು ಇಲ್ಲಿ ಪ್ರಸ್ತುತ. ಕನ್ನಡದಲ್ಲಿ ಭಾವ, ವಸ್ತು, ರೂಪ – ಇವುಗಳ ಬಗ್ಗೆ ಸಮಗ್ರವಾಗಿ ಬದಲಾವಣೆ ಇಂಗ್ಲಿಷ್ ಸಾಹಿತ್ಯ ಸ್ಫೂರ್ತಿಯಿಂದಲೇ ಸಾಧ್ಯವೆಂಬುದು ಇವರ ಅಭಿಮತ "ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ, ಸಂಸ್ಕೃತದ ಪೋಷಣೆಯಲ್ಲೂ ಕಾವ್ಯಮಾಲೆಯನ್ನು ಬೆಳೆಸಿದೆವು. ಹಾಗೆ ಈ ದೈವಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ, ಪೋಷಣೆಯಲ್ಲೂ ಅದನ್ನು ಬೆಳೆಸಬೇಕು. ಇಂಗ್ಲಿಷರ ಕಾವ್ಯಮಾಲೆ ಪರಮೋತ್ಕೃಷ್ಟವಾದುದು. ಗ್ರೀಕ್, ಲ್ಯಾಟೀನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು ಇದರ ಐಶ್ವರ್ಯದಲ್ಲಿ ಭಾಗಿಯಾಗಿ ಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ ಮುಂದೆ ಸ್ವದೇಶದ ಮಾರ್ಗವೂ, ವಿದೇಶದ ಮಾರ್ಗವೂ ಕಲೆತು ಒಂದಾಗಿ ಎರಡರಲ್ಲೂ ಒಗ್ಗದವು, ವಕ್ರವಾದವು ಒಟ್ಟು ಹೋಗಿ ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ." (ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆ –ಪು. ೩೨)ಎಂದು ಹೇಳಿ ಹೊಸ ಕವಿತೆಯ ಮಾರ್ಗವನ್ನು ತಿಳಿಸಿದರು.

ಕನ್ನಡ ಸಾಹಿತ್ಯದ ಅನುವಾದ ಪ್ರಕ್ರಿಯೆ ಸಂದರ್ಭದಲ್ಲಿ ಭಾಷಾಂತರ ಮತ್ತು ರೂಪಾಂತರದ ಬಗ್ಗೆ ಅನೇಕ ಚರ್ಚೆಗಳು ನಡೆದಿವೆ. ೧೯ನೇ ಶತಮಾನದ ಸಂದರ್ಭದಲ್ಲಿ ನಡೆದ ಅನುವಾದ

ಕೃತಿಗಳು ಹೆಚ್ಚು ರೂಪಾಂತರಗಳೆ ಆಗಿವೆ. ಅಪರಿಚಿತವಾದ ಹೊಸ ಚಿಂತನೆಗಳನ್ನು ಸ್ವೀಕರಿಸುವ ಇಲ್ಲವೆ ಸಾರ್ವತ್ರಿಕವಾಗಿ ತಿಳಿಸುವ ಸಂದರ್ಭದಲ್ಲಿ ಕೃತಿಕಾರ ಬಹಳ ಎಚ್ಚರಿಕೆಯನ್ನು ವಹಿಸುತ್ತಾನೆ. ಅಲ್ಲದೆ ಸ್ವಲ್ಪ ಪ್ರಮಾಣದಲ್ಲಿ ಸ್ವಾತಂತ್ರ್ಯವನ್ನು ಸಾಧಿಸುತ್ತಾನೆ. ಆದರೆ ಮೂಲ ಆಶಯಕ್ಕೆ ಧಕ್ಕೆಯಾಗದಂತೆ ಎಚ್ಚರಿಕೆ ವಹಿಸಬೇಕಾದದ್ದು ಮುಖ್ಯ ಎಂಬುದು ವಿದ್ವಾಂಸರ ಅಭಿಪ್ರಾಯ.

'ಷೇಕ್‌ಸಾದಿ'ಯ ವಚನಗಳ ಅನುವಾದ ಮಾಡಿರುವ ರವೀಂದ್ರನಾಥ ಠಾಕೂರರು "ಭಾಷಾಂತರವನ್ನು ಅಕ್ಷರಶಃ ಮಾಡಲು ಸಾಧ್ಯವಿಲ್ಲ. ಕೆಲವೊಮ್ಮೆ ಮೂಲಪಠ್ಯವನ್ನು ಸಂಕ್ಷೇಪಿಸಲಾಗಿರುತ್ತದೆ ಅಥವಾ ಅದರ ತಾತ್ಪರ್ಯವನ್ನು ಮಾತ್ರ ಅನುವಾದಿಸಲಾಗುತ್ತದೆ."[1] ಎಂದಿದ್ದಾರೆ. ಅವರ ದೃಷ್ಟಿಯಲ್ಲಿ ಅನುವಾದಕನಿಗೆ ರೂಪಾಂತರಿಸುವ ಹಿಗ್ಗಿಸುವ, ಕುಗ್ಗಿಸುವ ಸ್ವಾತಂತ್ರ್ಯವಿದೆ ಆದರೆ ಔಚಿತ್ಯ ಮೀರಬಾರದು"(ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ –ಪು. ೧೫೦)

ಆದರೆ ಅನೇಕರು ಈ ರೂಪಾಂತರ ಪ್ರಕ್ರಿಯೆಯನ್ನು ವಿರೋಧಿಸಿದ್ದರು. ಕಾರಣ ಇದರಿಂದ ಕನ್ನಡ ಭಾಷೆ ಹಾಗೂ ಸಾಹಿತ್ಯಕ್ಕೆ ಯಾವುದೇ ಪ್ರಯೋಜನವಿಲ್ಲವೆಂಬುದು. ನಂ.ಶಿವರಾಮ ಶಾಸ್ತ್ರಿಗಳು "ಈ ರೂಪಾಂತರ ಮಹಾಮೋಹಕ್ಕೆ ಸಿಕ್ಕಿ ದಿನದಿನಕ್ಕೆ ನಮ್ಮಲ್ಲಿ ಸ್ವಪ್ರಯತ್ನವೇ ಮಾಯವಾಗುತ್ತಿದೆ... ಈ ರೀತಿಯ ಸುಲಭಮಾರ್ಗವನ್ನು ಹಿಡಿಯುವುದು ಕನ್ನಡ ಭಾಷೆಗಾಗಲಿ, ಸಾಹಿತ್ಯಕ್ಕಾಗಲಿ ಶ್ರೇಯಸ್ಕರವಲ್ಲ. ಪರಸಾಹಿತ್ಯದ ಅನುಕರಣವೆಂದರೆ ಮೂಲ ಕಾವ್ಯದ ಮುಖ್ಯ ಭಾವವು ಅನುವಾದದಲ್ಲಿ ಪ್ರತಿಫಲಿಸಿದೆ ಎಂದು ತೃಪ್ತರಾಗಿ ಮಿಕ್ಕ ವಿಷಯಗಳನ್ನು ಅಲಕ್ಷ್ಯ ಮಾಡುವುದಲ್ಲ. ಫಲವು ನ್ಯಾಯವಾದರೆ ಸಾಧನವೂ ನ್ಯಾಯವೇ ಎಂಬ ತತ್ವವನ್ನು ನಂಬಿ, ಮೂಲವನ್ನು ರೂಪಾಂತರಿಸಿ ನಮ್ಮದಾಗಿ ಮಾಡಿಕೊಳ್ಳುವುದೂ ಅಲ್ಲ. ಅದನ್ನು ಭಾಷಾಂತರಿಸಿ ನಮ್ಮ ಜನರಿಗೆ ಅದರ ನಿಜ ರೂಪವನ್ನು ಮೇಲ್ಮೆಯನ್ನು ತೋರಿಸಿಕೊಟ್ಟು ಸ್ವಪ್ರತಿಭೆಯಿಂದ ಬರೆಯುವ ಕವಿಗಳಿಗೆ ಮಾದರಿಯನ್ನೊದಗಿಸುವುದು" ಎಂದು ಹೇಳಿದ್ದಾರೆ. "ಹೀಗೆ ಜನ್ಮಾಂತರವನ್ನು ಪಡೆದ ಕಾವ್ಯಗಳನ್ನು ಓದಿ ನಾವು ಆನಂದಪಡುವಾಗ, ಅದಕ್ಕೆಲ್ಲಾ ಕಾರಣ ಮೂಲ ಕವಿಯ ಮಹಿಮೆಯೆಂದಾಗಲಿ ಅವನ ಚಾತುರ್ಯವೆಂದಾಗಲಿ, ಪ್ರತಿಭೆಯೆಂದಾಗಲಿ ನಮಗೆ ಸ್ವಲ್ಪವಾದರೂ ಜ್ಞಾಪಕ ಬರುತ್ತದೆಯೇ? ನಮ್ಮ ಆನಂದದಲ್ಲಿ ಅದೆಲ್ಲಾ ನಮ್ಮ ಮನಸ್ಸಿಗೆ 'ಕನ್ನಡ' ಎಂದೇ ತೋರುತ್ತದೆ... ರೂಪಾಂತರಗಳು ಎಷ್ಟು ಮುದ್ದಾಗಿವೆ, ಮನೋಹರವಾಗಿವೆ; ಆದರೇನು? ಇವು ಹರಣಕ್ಕೆ ಸಮವಾಗುವುದಿಲ್ಲವೇ?" ಎಂದು ಶಿವರಾಮ ಶಾಸ್ತ್ರಿಗಳು ಪ್ರಶ್ನಿಸಿರುವರು. ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ರೂಪಾಂತರಕ್ಕೆ ಹೆಚ್ಚು ಒಲವು ತೋರಿದರು. ಇದು ಒಂದು ಸಾಹಿತ್ಯದ ಮೂಲ ಸ್ವರೂಪಕ್ಕೆ ಧಕ್ಕೆಯಾಗಬಹುದು ಎಂಬ ಆಲೋಚನೆ ಇವರದಾಗಿದೆ.

---

1 "The translations are not always literal. The originals being sometimes abridged and sometimes paraphrased"

ಮೇಲಿನ ಹೇಳಿಕೆಗೆ ಪೂರಕವಾಗಿ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಗಮನಿಸಿದರೆ ರೂಪಾಂತರ ಪ್ರಕ್ರಿಯೆ ಆರಂಭದಿಂದಲೂ ನಡೆದುಕೊಂಡೇ ಬಂದಿದೆ. ವಸ್ತು ಒಂದೆ. ಆದರೆ ಅದು ಅಭಿವ್ಯಕ್ತಗೊಂಡ ಬಗೆ ಮಾತ್ರ ಭಿನ್ನವಾಗಿದೆ. ಹೊಸ ಕೃತಿ ರಚನೆಗಿಂತ ಕೇವಲ ರೂಪಾಂತರ ಕಾರ್ಯದಲ್ಲೇ ಪಂಡಿತರು ಮುಳುಗಿದ್ದಾರೆ ಎಂದು ಶ್ರೀಕೃಷ್ಣ ಸೂಕ್ತಿಯಲ್ಲಿ ಹೀಗೆ ಹೇಳಿದ್ದಾರೆ. "ಹಿಂದೆ ಇದ್ದವುಗಳನ್ನೇ ಗದ್ಯರೂಪವಾದುದನ್ನು ಪದ್ಯರೂಪವಾಗಿಯೂ, ಪದ್ಯವನ್ನು ವಚನವಾಗಿಯೂ ಷಟ್ಪದಿಯನ್ನು ಚಂಪುವಾಗಿಯೂ, ಚಂಪುವನ್ನು ಷಟ್ಪದಿಯಾಗಿಯೂ ಬದಲಾಯಿಸಿ ಬರುವುದೇ ರೂಢಿಯಲ್ಲಿ ಬಂದಿರುವುದಲ್ಲೆ ಹೊಸ ವಿಷಯಗಳನ್ನು ತಿಳಿಸತಕ್ಕ ಗ್ರಂಥ ರಚನೆಯು ಕಡಿಮೆ" (೧೯೧೦ರ ಪತ್ರಿಕೆ)

ರೂಪಾಂತರಕ್ಕೆ ಸಂಬಂಧಿಸಿದಂತೆ ಶಾಸ್ತ್ರಿಗಳು ಎತ್ತಿದ ಪ್ರಶ್ನೆ ಭಾಷಾಂತರಕ್ಕೂ ಅನ್ವಯಿಸುತ್ತದೆ. ರಕ್ತಾಕ್ಷಿ ನಾಟಕ, ಕಿಂದರಿ ಜೋಗಿ ಕಾವ್ಯ, ಸೋಹ್ರಾಬ್ ಮತ್ತು ರುಸ್ತುಂ ಮೊದಲಾದವುಗಳನ್ನು ನೋಡಿದಾಗ ರೂಪಾಂತರವೂ ಭಾಷೆಗೆ ಅಗತ್ಯ ಎಂದು ಒಪ್ಪಿಕೊಳ್ಳುವುದು ಅನಿವಾರ್ಯ. ಆದರೆ ಒಂದು ಭಾಷೆಯ ನಿರ್ದಿಷ್ಟ ಸ್ವರೂಪ ಲಭ್ಯವಾಗುವುದು ಭಾಷಾಂತರದಿಂದಲೇ. ರೂಪಾಂತರಕ್ಕೆ ಆ ಸಾಮರ್ಥ್ಯವಿಲ್ಲ. ಆದರೆ ಒಂದು ಭಾಷೆಯ ಪರಿಸರಕ್ಕೆ ಒಗ್ಗದ ಕೆಲವು ಸಂಗತಿಗಳನ್ನು, ಪ್ರಸಂಗಗಳನ್ನು ರೂಪಾಂತರಕಾರರು ಕೈಬಿಡಬಹುದು. ಉದಾಹರಣೆ ಶೇಕ್ಸ್‌ಪಿಯರ್‌ನ ನಾಟಕಗಳನ್ನು ರೂಪಾಂತರಿಸುವಾಗ ಮಾಡಿಕೊಂಡಿರುವ ಮಾರ್ಪಾಡುಗಳನ್ನು ಇಲ್ಲಿ ಕಾಣಬಹುದು.

ಒಂದು ಭಾಷೆ ಅಥವಾ ಸಾಹಿತ್ಯವು ಉತ್ಕೃಷ್ಟವಾಗಿ ಬೆಳೆಯಬೇಕಾದರೆ ಅನ್ಯ ಭಾಷೆಯ ಮೂಲಕ ಸಾಧ್ಯವೆಂದು ಅನೇಕ ವಿದ್ವಾಂಸರ ಅಭಿಪ್ರಾಯ. ಜಗತ್ತಿನ ಅನೇಕ ಭಾಷೆಗಳು ಇತರೆ ಭಾಷೆಗಳಿಂದ ಎರವಲು ಪಡೆದು ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡಿವೆ. ಇಂತಹ ಕಾರ್ಯ ಕನ್ನಡಕ್ಕೂ ಅವಶ್ಯವಿದೆ ಎಂಬುದು ವಿದ್ವಾಂಸರ ವಾದ. ಶ್ರೀಕಂಠೇಶಗೌಡರು "ಇಂಗ್ಲಿಷ್ ಭಾಷೆಯು ಹಲವು ಭಾಷೆಯ ಪದಗಳನ್ನು ಲೀಲಾಜಾಲವಾಗಿ ಸೇರಿಸಿಕೊಂಡು ಶಬ್ದ ಸಂಪತ್ತನ್ನು ಹೆಚ್ಚಿಸಿಕೊಂಡಿದೆ. ಆದುದರಿಂದ ಶಬ್ದ ದಾರಿದ್ರ್ಯವಿಲ್ಲ. ಕನ್ನಡದಲ್ಲಿ ಶಬ್ದ ದಾರಿದ್ರ್ಯವಿದೆ" ಎಂದಿದ್ದಾರೆ. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೮೧). ಇದಲ್ಲದೆ ಅನುವಾದ ಸಂದರ್ಭದಲ್ಲಿ ಉಂಟಾದ ಸಮಸ್ಯೆಗಳಲ್ಲಿ ಕನ್ನಡದಲ್ಲಿರುವ ಶಬ್ದಗಳ ಕೊರತೆಯನ್ನು ಕುರಿತು "ಪ್ರಪಂಚದಲ್ಲಿ ರಸವತ್ತಾಗಿರುವ ವಿಶಿಷ್ಟ ಭಾಷೆಗಳನ್ನು ಸಂಧಿಸುತ್ತಿರುತ್ತಾ, ಆ ಭಾಷೆಗಳಲ್ಲಿ ರಸಕ್ಕೆ ಅಸಾಧಾರಣವಾದ ಶಬ್ದಗಳನ್ನು ಅವರ ಕಾವ್ಯರಚನಾ ಚಮತ್ಕಾರಗಳನ್ನು ತೆಗೆದುಕೊಂಡು ಮತ್ತು ತೆಗೆದುಕೊಳ್ಳುತ್ತಾ, ಸಮುದ್ರದಂತಾಗಿರುವ ಇಂಗ್ಲಿಷ್ ಭಾಷೆಯ ಶಬ್ದಗಳಿಗೆ ಸಾಮಾನ್ಯ ವಿಷಯವನ್ನು ಬರಿಯಬೇಕಾದರೂ ಹತ್ತು ಪಂಕ್ತಿಗೆ ಹದಿನಾರು ಕಡೆ ಪರಭಾಷೆಯನ್ನಪೇಕ್ಷಿಸುವ ಕನ್ನಡದಲ್ಲಿ ಸಮಾನಾರ್ಥವನ್ನು ಕೊಡುವ ಪ್ರತಿ ಶಬ್ದಗಳನ್ನೂ ದೊರಕಿಸಿಕೊಳ್ಳಬೇಕು, ಇಲ್ಲದಿದ್ದರೆ ಸಂಸ್ಕೃತದಲ್ಲಿ ಹುಡುಕಬೇಕು" ಎಂದಿದ್ದಾರೆ. ಅಲ್ಲದೆ "ಸಂಸ್ಕೃತದಿಂದ ಶಬ್ದಗಳನ್ನು ಪಡೆಯುವಂತೆ ಇಂಗ್ಲಿಷ್‌ನಿಂದಲೂ ಶಬ್ದಗಳನ್ನು ತೆಗೆದುಕೊಳ್ಳಬಹುದು" ಎಂದಿದ್ದಾರೆ. ಆದರೆ ಇದಕ್ಕೆ ವಿರೋಧ ಧ್ವನಿಗಳೂ ಬಂದುವು.(ಹೊಸಗನ್ನಡ

ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೮೧) ಅನ್ಯ ಭಾಷೆಗಳಂತೆ ಕನ್ನಡ ಭಾಷೆಯು ವಿಸ್ತಾರಗೊಳ್ಳಬೇಕಾದರೆ ಅವಶ್ಯವಿದ್ದ ಕಡೆ ಅನ್ಯ ಭಾಷೆಗಳಿಂದ ಪದ ಸ್ವೀಕೃತಿ ಮಾಡಿಕೊಳ್ಳಬೇಕು. ಕೆಲವೊಮ್ಮೆ ಅನುವಾದದ ಸಂದರ್ಭದಲ್ಲಿ ನಮ್ಮ ಅನುಭವಕ್ಕೆ ಬಾರದ ಕನ್ನಡ ಪರಿಸರಕ್ಕೆ ಹೊಸತಾದ ಸಂದರ್ಭ ಸನ್ನಿವೇಶಗಳನ್ನು ತರುವಾಗ ಅನ್ಯ ಭಾಷೆಯ ಪದಗಳನ್ನು ಯಥಾವತ್ತಾಗಿ ಸ್ವೀಕಾರ ಮಾಡಬೇಕಾಗುತ್ತದೆ. ಎಲ್ಲಾ ಪದಗಳಿಗೂ ಕನ್ನಡದಲ್ಲಿ ಹೊಸ ಪದಗಳನ್ನು ಟಂಕಿಸುವುದು ಅಸಾಧ್ಯ. ಕೆಲವೊಮ್ಮೆ ಅದರ ಮೂಲ ಅರ್ಥಕ್ಕೆ ಧಕ್ಕೆಯುಂಟಾಗುತ್ತದೆ.

ಕನ್ನಡ ಭಾಷೆಯಲ್ಲಿ ಸಂಸ್ಕೃತ, ಪ್ರಾಕೃತ ಪದಗಳು ಯಥೇಚ್ಛವಾಗಿಯೆ ಸೇರ್ಪಡೆಯಾಗಿವೆ. ಅಲ್ಲದೆ ಮೊಗಲ್ಲರ ಆಳ್ವಿಕೆಯ ಸಂದರ್ಭದಲ್ಲಿ ಅರೇಬಿಯನ್ ಭಾಷೆಯ ಪದಗಳೂ ಸೇರ್ಪಡೆಯಾದವು. ಆದ್ದರಿಂದ ಪ್ರಸ್ತುತ ಇಂಗ್ಲಿಷ್ ಇಲ್ಲವೆ ಅನ್ಯ ಭಾಷೆಗಳಿಂದ ಪದ ಸ್ವೀಕೃತಿ ಮಾಡುವುದರಿಂದ ಇನ್ನಷ್ಟು ಶ್ರೀಮಂತವಾಗುತ್ತದೆ ಎಂದು ಆಗಿನ ವಿದ್ಯಾವಂತರ ಆಲೋಚನೆಯಾಯಿತು. ಸಾಹಿತ್ಯದ ಜೊತೆಗೆ ಭಾಷೆಯ ಸ್ವೀಕೃತಿಯೂ ೧೯ನೇ ಶತಮಾನದಲ್ಲಿ ನಡೆಯಿತು. ಶ್ರೀಯವರ ಮನೋಭಾವ ಇಲ್ಲಿ ಮುಖ್ಯವಾದದ್ದು. "ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ, ಸಂಸ್ಕೃತದ ಪೋಷಣೆಯಲ್ಲೂ ಕಾವ್ಯಮಾಲೆಯನ್ನು ಬೆಳೆಸಿದೆವೋ, ಹಾಗೆ ಈಗ ದೈವಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ, ಇಂಗ್ಲಿಷ್‌ನ ಪೋಷಣೆಯಲ್ಲೂ ಅದನ್ನು ಬೆಳೆಸಬೇಕು." ಎಂದಿದ್ದಾರೆ.(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ–ಪು. ೨೮)

೧೯ನೇ ಶತಮಾನದಲ್ಲಿ ಇಂತಹ ಹೊಸ ಆಲೋಚನೆಗಳು ಕನ್ನಡ ಭಾಷೆ ಹಾಗೂ ಸಾಹಿತ್ಯವನ್ನು ಪ್ರವೇಶಿಸಲು ಅನೇಕ ಅಂಶಗಳು ಕಾರಣವಾದವು. ಅವುಗಳೆಂದರೆ ಮುದ್ರಣ ಯಂತ್ರ, ಇಂಗ್ಲಿಷ್ ಶಿಕ್ಷಣ, ಪತ್ರಿಕೆಗಳ ಆರಂಭ.

### ಮುದ್ರಣಯಂತ್ರ

೧೯ನೇ ಶತಮಾನದಲ್ಲಿ ಕನ್ನಡ ಸಾಹಿತ್ಯದಲ್ಲಿ ಆದ ಮಹತ್ವದ ಬದಲಾವಣೆಗಳಿಗೆ ಮೂಲ ಕಾರಣ ಮುದ್ರಣಯಂತ್ರ. ಕ್ರೈಸ್ತ ಧರ್ಮದ ಪ್ರಚಾರದ ಹಿನ್ನಲೆಯಲ್ಲಿ ಮಿಶನರಿಗಳು ಬೈಬಲ್‌ನ ಪ್ರತಿಗಳನ್ನು ಹಾಗೂ ತಮ್ಮ ವಿಚಾರಗಳನ್ನು ಮುದ್ರಣದ ರೂಪದಲ್ಲಿ ಜನರಿಗೆ ನೀಡಬೇಕೆಂದು ನಿರ್ಧರಿಸಿ ಮುದ್ರಣ ಯಂತ್ರವನ್ನು ತಂದರು. ಅವರಿಗಿದ್ದ ಗೊಂದಲಗಳೆಂದರೆ:

"ಇಲ್ಲಿಯವರೆಗೆ ನೀವು ಉಪದೇಶ ಮಾಡಿದ ವಿಷಯವನ್ನು ಎಲ್ಲಿಯಾದರೂ ಬರೆದದ್ದುಂಟೆ ಎಂದು ಮಿಶನರಿಗಳಾದ ನಮ್ಮನ್ನು ಜನ ಕೇಳುತ್ತಾರೆ. ಪ್ರವಚನ ಮಾಡಿಯಾದ ಮೇಲೆ ಆ ಮಾತುಗಳನ್ನು ನಿಧಾನವಾಗಿ ಓದಿ ಮನನ ಮಾಡಿಕೊಳ್ಳುವುದಕ್ಕೆಂದು ಪುಸ್ತಕಗಳನ್ನು ಕೊಡದೆ ಹೋದರೆ ಏನು ಪ್ರಯೋಜನ? ಅಂಥ ಪುಸ್ತಕ ಅವರ ಕೈಯಲ್ಲಿದ್ದರೆ ಇತರರನೇಕರು ಓದುವರು. ಅಲ್ಲಿಂದ ಅದು ಗ್ರಾಮಾಂತರವನ್ನೂ ಸೇರುವುದು, ಅಷ್ಟು ದೂರದಲ್ಲಿ ಮಿಶನರಿಗಳ ವಾಣಿಯು

ಕೇಳ ಬರುವುದು ಸಾಧ್ಯವಿಲ್ಲವಾದರೂ, ಪುಸ್ತಕವು ಆ ಕೆಲಸವನ್ನು ಮಾಡುತ್ತಲೇ ಇರುವುದು. ದೊಡ್ಡವರಿಗೂ ಎಳೆಯರಿಗೂ ಉಪಯೋಗ ಬೀಳಬಹುದಾದ ಇಂಥ ಪುಸ್ತಕಗಳ ಪ್ರಕಟನೆಗೆ ಮುದ್ರಣಾಲಯವು ಅತ್ಯಗತ್ಯ" (ಹೊಸಗನ್ನಡದ ಅರುಣೋದಯ–ಪು. ೩೩).

ಈ ರೀತಿಯ ಆಲೋಚನೆಯ ಜೊತೆಗೆ ಅವರಿಗೆ ಎದುರಾದ ಸಮಸ್ಯೆ ಭಾಷೆ. ವಿವಿಧ ಭಾಷೆಗಳಿರುವ ಭಾರತ ದೇಶದಲ್ಲಿ ಇಂತಹ ಸಂದರ್ಭದಲ್ಲಿ ಧರ್ಮ ಪ್ರಚಾರ ಹಾಗೂ ಕೃತಿಯ ಭಾಷೆಯ ಬಗ್ಗೆ ಆಲೋಚನೆಗಳು ಆರಂಭವಾದವು. ಪಾದ್ರಿಗಳು ಅಲ್ಲಿನ ಸ್ಥಳೀಯರ ನೆರವು ಪಡೆದು ಭಾಷೆಗಳನ್ನು ಕಲಿತು, ಬೈಬಲ್ ಅನ್ನು ಅನುವಾದ ಮಾಡಲು ತೊಡಗಿದ್ದು ಭಾರತೀಯರಲ್ಲಿ ಹೊಸ ಆಲೋಚನೆಗಳು ಹುಟ್ಟುವುದಕ್ಕೆ ನಾಂದಿಯಾಯಿತು. ಇವರು ಧರ್ಮ ಪ್ರಚಾರವನ್ನು ಮಾಡಲು ಸಾಹಿತ್ಯ ರೂಪವನ್ನು ಮಾಧ್ಯಮವನ್ನಾಗಿಸಿಕೊಂಡರು. ಅಲ್ಲದೆ ತಮ್ಮ ಶೈಲಿ, ಛಂದಸ್ಸಿನಲ್ಲಿ ಅಲ್ಲದೆ ಇಲ್ಲಿನ ಕಾವ್ಯ ಶೈಲಿಗಳಲ್ಲಿ ರಚಿಸತೊಡಗಿದರು. ಇವುಗಳಿಂದ ಹೊಸ ಮಟ್ಟು, ಪ್ರಕಾರಗಳ ಪರಿಚಯವಾಯಿತು. ಸಣ್ಣಕಥೆ ಹಾಗೂ ಕವಿತೆಗಳು ಅವರ ಪ್ರಮುಖ ಪ್ರಕಾರಗಳಾಗಿದ್ದವು, ಯಾತ್ರಿಕನ ಸಂಚಾರದಿಂದ ಆರಂಭವಾಗಿ ಅಂದಿನ ಪತ್ರಿಕೆಗಳಲ್ಲಿ ಅನೇಕ ಕಥೆಗಳು ಧರ್ಮ ಪ್ರಸಾರದ ಹಿನ್ನೆಲೆಯಲ್ಲಿ ರಚನೆಯಾದವು.

### ಇಂಗ್ಲಿಷ್ ಶಿಕ್ಷಣ

ಹೊಸಗನ್ನಡ ಸಾಹಿತ್ಯದ ಚಿಂತನೆಗಳು ಇಂಗ್ಲಿಷ್ ಶಿಕ್ಷಣದ ಕೊಡುಗೆ. ಸಾಮಾನ್ಯನಿಗೂ ಶಿಕ್ಷಣ, ಸ್ತ್ರೀ ಶಿಕ್ಷಣ ಎಂಬ ಧೋರಣೆ ಹೊಸ ಆಲೋಚನೆಗಳಿಗೆ ಪುಷ್ಟಿ ನೀಡಿತು. ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಇಂಗ್ಲಿಷ್ ಶಿಕ್ಷಣವನ್ನು ನೀಡಿತು. ಅಲ್ಲದೆ ಶಿಕ್ಷಣವು ದೇಶಭಾಷೆಯಲ್ಲಿಯೆ ನೀಡಬೇಕು ಎಂಬ ಆದೇಶವನ್ನು ಅಧಿಕಾರಿಗಳು ಜಾರಿಗೊಳಿಸಿದರು. ಇದಕ್ಕೆ ಪೂರಕವಾದ ದೇಶೀ ಪಠ್ಯಪುಸ್ತಕಗಳ ರಚನೆಗೆ ಆಜ್ಞಾಪಿಸಿದರು. ಗಣಿತದಂತಹ ವಿಷಯಗಳ ಜೊತೆಗೆ ಇಸೋಪನ ನೀತಿ ಕಥೆಗಳಂತಹ ಧರ್ಮ ಪ್ರಚಾರದ ಕಥೆಗಳನ್ನು ಅನುವಾದಿಸಿ ಇದರಲ್ಲಿ ನೀಡಲಾಯಿತು. ೧೮೩೬ರಲ್ಲಿ 'ಸಂಣ್ಣ ಹಿತೋಪದೇಶ'ಎಂಬ ಪುಸ್ತಕದ ಮುನ್ನುಡಿಯಲ್ಲಿ ಹೀಗೆ ಹೇಳಲಾಗಿದೆ.

"|| ಸಂಣ್ಣ ಹಿತೋಪದೇಶ ||
ಯಿ ಗ್ರಂಥ ಕನಡ ಸಾಲೆವಳಗೆ ವೊದುವಂಥಾ ಯೇಳು
ಯೆಂಟ್ಟು ವರುಷದ ಹುಡುಗರಿಗೆ ಥೊಡೆ ಕಷ್ಟದಿಂದಾ
ಚೆಲೊ ತನಕ ತಿಳವಳಿಕೆ ಆಗಬೇಕೆಂದ್ದು ಬಹ
ಪ್ರೀತ್ತೆಯಿಂದ್ದಾ ಕೊಡಲ್ಪಟ್ಟಿದೆ.
|| ಮುಂಬಯಿ ಹೆಸರು
.
.
.

ವುಳ್ಳ ಅರಮನೆಯ

ಛಾಪಖಾನೆಯಲ್ಲಿ

ಛಾಪಿಸಿದ....."(ಹೊಸಗನ್ನಡ ಅರುಣೋದಯ-ಪು.೬೬).

ಇನ್ನೊಂದೆಡೆ ಹೊಸ ಮಾದರಿಯ ಶಿಕ್ಷಣದ ಪ್ರಭಾವದಿಂದ ಇಂಗ್ಲಿಷ್ ಸಾಹಿತ್ಯದ ಪರಿಚಯ ಪಡೆದ ಅನೇಕರು ಅಲ್ಲಿನ ಇತರೆ ಸಾಹಿತ್ಯ ಕೃತಿಗಳನ್ನು ಓದಿದರು. ಇದರ ಜೊತೆ ಕನ್ನಡ ಸಾಹಿತ್ಯದ ಜೊತೆ ಹೋಲಿಕೆಗಳನ್ನು ಮಾಡತೊಡಗಿದರು. ಪಾಶ್ಚಾತ್ಯ ಸಾಹಿತ್ಯದ ವೈಶಿಷ್ಟ್ಯವಾದ ಹಾಗೂ ವಾಸ್ತವವಾದದ ಚಿಂತನೆಗಳು ಕನ್ನಡಿಗರ ಆಲೋಚನೆಗಳಲ್ಲಿ ಬದಲಾವಣೆ ಉಂಟುಮಾಡಿದುವು. ಪೌರಾಣಿಕ ವಿಷಯಕ್ಕಿಂತ ಹಾಗೂ ಏಕ ಮಾದರಿಯ ಶೈಲಿಗಿಂತ ಪಾಶ್ಚಾತ್ಯ ಸಾಹಿತ್ಯದ ಹೊಸ ಸೊಬಗು ಹೆಚ್ಚು ಆಕರ್ಷಿತವಾಗಿತ್ತು. ಕನ್ನಡದಲ್ಲಿ ಏನೂ ಇಲ್ಲ, ಇಂಗ್ಲಿಷ್‌ನಲ್ಲಿ ಎಲ್ಲವೂ ಇದೆ ಎಂಬ ಭಾವನೆಯೂ ಮೂಡಿತ್ತು. ಮೂಢನಂಬಿಕೆ – ಆಚರಣೆಗಳು, ಸ್ತ್ರೀ ಸ್ವಾತಂತ್ರ್ಯ, ವ್ಯಕ್ತಿ ಸ್ವಾತಂತ್ರ್ಯ, ವಿಧವ ವಿವಾಹ, ಜಾತಿ ವ್ಯವಸ್ಥೆ ವಿಷಯಗಳನ್ನು ಕುರಿತಂತೆ ಹೊಸ ನೋಟ ಆರಂಭವಾಗಿ ಅಲ್ಲಿನ ಕೃತಿಗಳ ಪರಿಚಯ ಇತರರಿಗೂ ಆಗಬೇಕು ಎಂದು ಆಶಿಸಿದರು. ಇಂಗ್ಲಿಷ್ ಶಿಕ್ಷಣ ಪಡೆಯದ ಜನರಿಗೆ ಆ ಕೃತಿಗಳ ಪರಿಚಯ ಕೇವಲ ಅನುವಾದದಿಂದ ಮಾತ್ರ ಸಾಧ್ಯ ಎಂದು ತಿಳಿದು ಅನುವಾದ ಕಾರ್ಯವನ್ನು ಕೈಗೊಂಡರು. ಕೇವಲ ಕನ್ನಡ ಸಾಹಿತ್ಯದಲ್ಲಿ ಮಾತ್ರ ಅಲ್ಲದೆ ಭಾರತದ ಇತರೆ ಭಾಷೆಗಳಲ್ಲೂ ಈ ಹಿನ್ನೆಲೆಯಲ್ಲಿಯೇ ಅನುವಾದ ಕಾರ್ಯ ನಡೆದವು.

ಮಲಯಾಳಂನ ಮೊದಲ ಕಾದಂಬರಿಗಳಲ್ಲಿ ಒಂದಾದ ೧೮೮೦ರಲ್ಲಿ ಬರೆದ ಇಂದುಲೇಖಾದ ಮುನ್ನುಡಿಯಲ್ಲಿ ತಾವು ಈ ಕಾದಂಬರಿಯನ್ನು ಬರೆದುದರ ಉದ್ದೇಶವನ್ನು ಹೀಗೆ ಹೇಳಿದ್ದಾರೆ. "ಒಂದನೆಯದಾಗಿ ಇಂಗ್ಲಿಷ್ ಮಾದರಿಯ ಒಂದು ಕಾದಂಬರಿಯನ್ನು ತನ್ನ ಭಾಷೆಯಲ್ಲಿ ಓದಬೇಕೆಂದು ನನ್ನ ಮಡದಿ ಹಲವು ಸರ್ತಿ ಪ್ರಕಟಪಡಿಸಿದ ಅಪೇಕ್ಷೆ, ಎರಡನೆಯದಾಗಿ ಇಂಗ್ಲಿಷ್ ಕಾದಂಬರಿ ಪ್ರತಿನಿಧಿಸುವ ಸಾಹಿತ್ಯ ಪ್ರಕಾರದ ಕುರಿತು ಮಲಯಾಳಂನ ಓದುಗರಿಗೆ ಆಸಕ್ತಿ ಹುಟ್ಟಿಸಬೇಕೆಂಬ ನನ್ನ ಬಯಕೆ. ಸಹಜ ಸ್ವಭಾವಕ್ಕೆ ಪರಕೀಯವಾದ, ಹಲವೊಮ್ಮೆ ಅಸಂಬದ್ಧವೂ, ಅಸಂಭಾವ್ಯವೂ ಆದ ಘಟನೆಗಳು ತುಂಬಿರುವ ಮಲಯಾಳ ಕಥೆಗಳನ್ನು ಓದಿ ಅಭ್ಯಾಸವಾಗಿಬಿಟ್ಟ ಓದುಗರಿಗೆ ಇಂತಹ ಕೃತಿಗಳ ಕುರಿತು ಹೆಚ್ಚಿನ ಅರಿವೇನೂ ಇಲ್ಲ ಯಾವುದೋ ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ಅವರವರ ಮನೆಗಳಲ್ಲಿಯೇ ನಡೆಯಬಹುದಾದ ಘಟನೆಗಳೂ ಸತ್ಯಾಂಶಗಳೂ ಮಾತ್ರವೇ ಇರುವ ಒಂದು ಕತೆಯನ್ನು ಅವರಿಗೆ ಸವಿಯಲು ಸಾಧ್ಯವೇ ಎಂದರಿಯಬೇಕೆಂಬ ಅಪೇಕ್ಷೆ ಜನ್ಮಸಿದ್ಧವಾದ ಬುದ್ಧಿ ಸಾಮರ್ಥ್ಯ, ಮೈಮಾಟಗಳಿಗೆ ಹೆಸರು ವಾಸಿಯಾದ ನಮ್ಮ ನಾಯರ್ ಹೆಂಗಸರಿಗೆ ಉತ್ತಮ ಇಂಗ್ಲಿಷ್ ಶಿಕ್ಷಣ ಲಭಿಸಿದ್ದೇ ಆದರೆ ಅವರಿಗೆ ಸಮಾಜದಲ್ಲಿ ಗಳಿಸಬಹುದಾದ ಸ್ಥಾನಮಾನ ಪ್ರಭಾವಗಳನ್ನು ನನ್ನ ಮಲಯಾಳ ಸಹೋದರರಿಗೆ ಮನವರಿಗೆ ಮಾಡಕೊಡಬೇಕೆಂಬ ಬಯಕೆ, ಕೊನೆಯದಾಗಿ ನಿರುಪಯೋಗದಿಂದ ಹಾಗೂ ದುರುಪಯೋಗದಿಂದ ರಭಸವಾಗಿ ನಾಶ ಹೊಂದುತ್ತಿರುವ ಮಲಯಾಳ ಸಾಹಿತ್ಯದ ಬೆಳವಣಿಗೆಗೆ ಅತ್ಯಲ್ಪವಾದರೂ ನನ್ನ

ಸ್ವಂತವೆನಸಲಾಗುವ ಕೊಡುಗೆ ನೀಡಬೇಕೆಂಬ ಹೆಬ್ಬಯಕೆ."(ಇಂದುಲೇಖಾ-ಮುನ್ನುಡಿ)ಇದು ಕೇವಲ ಮಲಯಾಳಂ ಭಾಷಾ ವಲಯಕ್ಕೆ ಸೀಮಿತವಾಗದೆ ಇಡೀ ಆಧುನಕ ಭಾರತದ ವಿದ್ಯಾವಂತರ ಚಿಂತನೆಯ ನೆಲೆಯೂ ಹೌದು. ಇದಲ್ಲದೆ ಇಂಗ್ಲಿಷ್ ಶಿಕ್ಷಣದಿಂದಾಗಿ ಜನರಲ್ಲಿ ಆತ್ಮಾಭಿಮಾನ, ಸ್ಥೈರ್ಯ, ಹೊಸ ಬಗೆಯ ಆಲೋಚನೆ ಮೂಡಿ ಜನರ ಜೀವನಶೈಲಿಯೂ ಸಂಪೂರ್ಣ ಬದಲಾಗುವಂತೆ ಆಯಿತು.

ಈ ವಿಚಾರವಾಗಿ ಕುವೆಂಪುರವರ ಈ ಮಾತು ಮುಖ್ಯವಾದದ್ದು "ಬ್ರಿಟಿಷರು ಬಂದುದರಿಂದಲೇ ಎಲ್ಲರಿಗೂ ವಿದ್ಯಾಭ್ಯಾಸ ಕೊಟ್ಟರು. ಇದರಿಂದಾಗಿ ನಮ್ಮಲ್ಲಿ ಆತ್ಮಾಭಿಮಾನವಾದರೂ ಮೂಡಿತು. ಪ್ರತಿಭಟಿಸುವಂಥ ಶಕ್ತಿಯಾದರೂ ಬಂದಿತು. ಅವರು ಬರದಿದ್ದರೆ ನಾನು ಎಲ್ಲಿರುತ್ತಿದ್ದೆ ಗೊತ್ತೇನು? ನಾನು ಕುಪ್ಪಳ್ಳಿಯಲ್ಲಿ ಸಗಣಿ ಹೊತ್ಕೊಂಡು ಯಾರಾದ್ರೂ ಒಬ್ಬ ಹಾರುವನ ಜಮೀನನಲ್ಲಿ ಕೆಲಸ ಮಾಡ್ಕೊಂಡು ಇರುತ್ತಿದ್ದೆ." ಅದಲ್ಲದೆ "ಆಂಗ್ಲರು ಬರದಿದ್ದರೆ ಶೂದ್ರರು ಮನು ಧರ್ಮಶಾಸ್ತ್ರ ಪೂಜಿಸುತ್ತ, ವರ್ಣವ್ಯವಸ್ಥೆಯನ್ನೊಪ್ಪಿಕೊಂಡು, ಜಾತೀಯತೆಯ ಕೆಸರಿನಲ್ಲಿ ಒದ್ದಾಡುತ್ತ, ನಾಯಿ ನರಿಗಳಿಗೂ ಕಡೆಯಾಗಿ ಬಾಳು ಸಾಗಿಸಬೇಕಾಗುತ್ತಿತ್ತು. ಅಸ್ಪೃಶ್ಯತಾ ನಿವಾರಣೆಯ ಪ್ರಯತ್ನವೂ ಸಾಧ್ಯವಾಗುತ್ತಿರಲಿಲ್ಲ. ಹೀಗಿರುವಾಗ ಪಾಶ್ಚಾತ್ಯ ಸಾಹಿತ್ಯದ ಹಿಡಿತದಿಂದ ತಪ್ಪಿಸಿಕೊಳ್ಳುತ್ತೇನೆನುವುದು ಕೂಪಮಂಡೂಕ ಪ್ರವೃತ್ತಿಯಾಗುತ್ತದೆ."ಎಂದಿದ್ದಾರೆ.(ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ-ಪು. ೧೩೧) ಈಗಾಗಲೇ ಹೇಳಿದಂತೆ ಇಂಗ್ಲಿಷ್ ಶಿಕ್ಷಣವನ್ನು ಬ್ರಿಟಿಷ್‌ರು ತಮ್ಮ ಆಡಳಿತ ವ್ಯವಸ್ಥೆಗೆ ಅನುಕೂಲವಾಗಲು ನೀಡಿದರು. ಆದರೆ ಇದರಿಂದ ಭಾರತೀಯ ಪರಿಸರದಲ್ಲಿ ಶಿಕ್ಷಣದಿಂದ ವಂಚಿತರಾಗಿದ್ದ ಎಲ್ಲಾ ಜನಾಂಗದವರೂ ಜಾತಿ ಭೇದವಿಲ್ಲದೆ ಶಿಕ್ಷಣ ಪಡೆಯಲು ಸಹಕಾರಿಯಾಯಿತು. ಅಲ್ಲದೆ ವ್ಯವಸ್ಥೆಯಲ್ಲದ್ದ ಅನ್ಯಾಯದ ವಿರುದ್ಧ ಹೋರಾಡುವ ಚೈತನ್ಯಯ ಲಭಿಸಿತು. ಅಲ್ಲದೆ ಪಾಶ್ಚಾತ್ಯ ಸಾಹಿತ್ಯವನ್ನು ಅನುವಾದಿಸುವ ಹಾಗು ಹೊಸ ಚಿಂತನೆಗಳು ಅನುವಾದದ ಮೂಲಕ ಎಲ್ಲೆಡೆ ಪಸರಿಸಲು ಸಹಾಯಕವಾಯಿತು.

**ಪತ್ರಿಕೆಗಳು**

ಹೊಸಗನ್ನಡ ಸಾಹಿತ್ಯ ಚಿಂತನೆಗಳು ರೂಪುಗೊಳ್ಳುವಲ್ಲಿ ಪತ್ರಿಕೆಗಳು ಮಹತ್ವದ ಪಾತ್ರ ವಹಿಸಿದೆ. ಮಂಗಳೂರು ಸಮಾಚಾರ ಅಥವಾ ಕನ್ನಡ ಸಮಾಚಾರ ಪತ್ರಿಕೆಯು ಕನ್ನಡದ ಮೊದಲ ಪತ್ರಿಕೆಯಾಗಿದೆ. ೧೮೧೨ರಲ್ಲಿ ಜರ್ಮನ್ ಪಾದ್ರಿಗಳು ಧರ್ಮ ಪ್ರಚಾರಕ್ಕಾಗಿ ಈ ಪತ್ರಿಕೆಯನ್ನು ಆರಂಭಿಸಿದರು. ಅವರ ಪತ್ರಿಕೆಯ ಉದ್ದೇಶದ ಬಗ್ಗೆ "ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತರ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ ಮರ್ಯಾದೆಗಳನ್ನು ತಿಳಿಯದೆ ಕಿಟಕಿಯಿಲ್ಲದ ಬಿಡಾರದಲ್ಲಿ ವುಳಕೊಳ್ಳುವವರ ಹಾಗೆಯಿರುತ್ತಾ ಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ವೊಳಗೆ ಸ್ವಲ್ಪ ಬೆಳಕು ಬೀರುವ ಹಾಗೆಯೂ ನಾಲ್ಕು ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಷಕ್ಕೆ ವೊಂದು ಸಾರಿ ಶಿದ್ಧಮಾಡಿ

ಅದನ್ನು ಓದಬೇಕೆಂದಿರುವೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಾಗಿರುವುದು" ಎಂದು ಹೇಳಿದ್ದಾರೆ(ಹೊಸಗನ್ನಡದ ಅರುಣೋದಯ-ಪು. ೪೯). ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ವಿಚಾರಗಳ ಬಗ್ಗೆ ಸಂಪಾದಕನಾಗಿದ್ದ ಹರ್ಮನ್ ಮೊಗ್ಲಿಂಗ್ ಅದರ ಸ್ವರೂಪವನ್ನು ಹೀಗೆ ಹೇಳಿದ್ದಾನೆ.

೧) ಪೂರ ವರ್ತಮಾನಗಳು

೨) ಸರಕಾರೀ ನಿರೋಪಗಳು/ಕಾನೂನು

೩) ಸುಬುದ್ಧಿಯನ್ನು ಹೇಳುವ ಸಾಮಂತಿಗಳು, ಹಾಡುಗಳು

೪) ಕಥೆಗಳು

೫) ಸರ್ವರಾಜ್ಯ ವರ್ತಮಾನಗಳು(ಹೊಸಗನ್ನಡದ ಅರುಣೋದಯ-ಪು. ೫೦೦)

ಇಲ್ಲಿ ಬೆಳಕು ಬೀರುವುದು ಎಂದರೆ ಕ್ರೈಸ್ತ ಧರ್ಮದ ಬಗ್ಗೆ ಅರಿವು ಮೂಡಿಸುವುದಾಗಿದೆ. ಏಕೆಂದರೆ ಭಾರತೀಯ ಸಮಾಜದಲ್ಲಿದ್ದ ಧಾರ್ಮಿಕ ವಿಚಾರಗಳು, ಅದರ ಬಗ್ಗೆ ಜನರ ಧೋರಣೆಗಳು ಕ್ರೈಸ್ತ ಧರ್ಮ ಪ್ರಚಾರಕ್ಕೆ ಪೂರಕವಾಗಿದ್ದವು. ಇದರ ಜೊತೆಗೆ ಸಾಹಿತ್ಯದ ಮೂಲಕ ಧರ್ಮ ಪ್ರಚಾರ ಸುಲಭವೆಂದು ಭಾವಿಸಿದರು. ಅವರು ಬಳಸಿದ ವಿಧಾನವೆಂದರೆ ಸ್ಥಳೀಯ ದಾಸರ ಪದ ಇಲ್ಲವೆ ಸಂಸ್ಕೃತ ಶ್ಲೋಕದ ಮಾದರಿಯಲ್ಲಿ ಬೈಬಲ್ ಉಕ್ತಿಗಳನ್ನು ಕೊಟ್ಟರು.

**ಕ್ರಿಸ್ತನ ಎರಡನೇ ಬರುವಿಕೆ**

(ರಾಗ ಮುಖಾರಿ ಆದಿತಾಳ)

ಮೇಘರೂಢನಾಗಿ ಹೋದ ಯೇಸುಕ್ರಿಸ್ತನು ತಿರುಗಿ
ಮೇಘರೂಢನಾಗಿ ಲೋಕಕಿಳಿದು ಬರುವನು॥ ಮೇಘಾ
ದೂತ ಸೈನ್ಯ ಸಹಿತನಾಗಿ ಪ್ರಭು ಬರುವನು॥ ಮಹಾ
ನೀತಿ ನ್ಯಾಯದಿಂದಲವನು ತೀರ್ಪು ಕೊಡುವನು ಮೇಘಾ
ಕೊಳವಿ ಶಬ್ದದಿಂದ ದೂತರಾ[ರ್ಭಾ]ರಿ ಬರುವರು॥ ಶಬ್ದ
ಕೇಳಿಸುತ್ತ ಜನರೆಲ್ಲರನ್ನು ನಿಲ್ವರು॥ ಮೇಘಾ
ನಿಂತ ಜನರೆಲ್ಲರನ್ನು ದಿವ್ಯದೂತರು ಕುರುಬ
ರಂತೆ ಹೊರಟು ಭಾಗವಾಗಿ ವಿಂಗಡಿಸುವರು

(ಬಿ.ಎಚ್.ರೈಸ್-ಹೊಸಗನ್ನಡದ ಅರುಣೋದಯ-ಪು. ೩೯೩)

ಕಿಟೆಲ್‌ನ ಕಥಾಮಾಲೆಯು ಈ ದೃಷ್ಟಿಯಿಂದ ಪ್ರಮುಖವಾದದ್ದು. ಇದನ್ನು ೧೮೬೨ರಲ್ಲಿ ರಚಿಸಿದನು. ಇತರ ಮಿಶನರಿಗಳಂತೆ ಈತನು ಇಲ್ಲಿನ ಕಾವ್ಯಗಳನ್ನು ಅಭ್ಯಸಿಸಿ ಅದಕ್ಕನುಸಾರವಾಗಿ

ತಮ್ಮ ಧರ್ಮದ ಕಾವ್ಯಗಳನ್ನು ಅನುವಾದಗೊಳಿಸಿದನು. ಇವನು ಏಳೆಂಟು ವರ್ಷಗಳವರೆಗೆ ಇಲ್ಲಿನ ಕಾವ್ಯಗಳನ್ನು ಅಭ್ಯಸಿಸಿದನು. ಇವನ ಕಾವ್ಯಶೈಲಿಯು ಶ್ರೀಕಾರದ ಮಂಗಳಶ್ಲೋಕದಿಂದಲೇ ಆರಂಭವಾಗಿದೆ.

ಶ್ರೀ ಜನಾರ್ಚಿತ ಸತ್ಯಸಾಕ್ಷಿಯೆ
ಭೂಜನೈಕೊ ಗುರುವೆ, ದೇವರು
ರಾಜಿಪವನೀ ರವಿಯೇ, ಸುಪಥವೆ, ಜೀವದಧಿಪತಿಯೇ
ತೇಜದುದಯವೆ, ದೇವಕಾಂತಿಯೆ
ಮೂಜಗನ್ನಾಥೇಸೊ ನಿನ್ಮುಖ
ಮಾಜಿಕೊಳ್ಳದೆ ಮೂಡು ಭಕ್ತರ ಹೃದಯ

(ಹೊಸಗನ್ನಡದ ಅರುಣೋದಯ–ಪು. ೩೮೮)

ಇದಲ್ಲದೆ ಮಹಾಕಾವ್ಯದಂತೆ ಅಷ್ಟಾದಶ ವರ್ಣನೆಯನ್ನು ತಕ್ಕ ಮಟ್ಟಿಗೆ ಕಾವ್ಯದಲ್ಲಿ ತರುವ ಪ್ರಯತ್ನ ನಡೆದಿದೆ. ಸಮುದ್ರ ಹಾಗೂ ಬಿರುಗಾಳಿಯ ವರ್ಣನೆಗಳು ೧೪ನೆಯ ಪ್ರಕರಣದಲ್ಲಿ ಹೀಗೆ ರಚಿತವಾಗಿದೆ. ಇದರಲ್ಲಿ ಖಂಡ ಪ್ರಾಸದ ಶೈಲಿ ಇದೆ.

ಜ್ಯೋತಿ ಮಂಡಲವಡಗಿ, ಬಿರ್‍ರನೆ
ವಾತ ಬೀಸಲು ಕಡಲಿನಲ್ಲವೆ
ಘಾತವಾಗುವ ಘೋರಘೋರದ ತೆರೆಗಳುಕ್ಕುತಲೆ
ನಾತವೊದಗುವ ಹಾಗೆ ಹಡಗವ
ಜಾತಕಾತರದಲೆಗಳಾದರಿಸ
ಲಾತನಡಿಗಡೆ ಶಿಷ್ಯರೋಡುತ ಬಂದು ಕೂಗಿದರು

ಇದರ ಮುಕ್ತಾಯ ಪದ್ಯವೂ ವಿಶಿಷ್ಟವಾಗಿದೆ. ಭಾರತೀಯ ಪರಿಸರದ ಪಾಪ ಪ್ರಜ್ಞೆಯ ಹಿನ್ನೆಲೆ ಈ ಭಾಗದಲ್ಲಿ ಕಂಡುಬರುತ್ತವೆ.

ಪಾಪ ಸಾಗರ ದಾಟಿ ಸಗ್ಗಕೆ
ಪೋಪ ಹಡಗವನೀಸುವೊಡೆಯನು
ಕಾಪು ಕಾಯ್ವದು; ಕಾಯದಿದ್ದರೆ ಕೇಳಿರಾಳುಗಳೇ
ದೀಪವಿಲ್ಲದ ಗಾಢದಿರಳಲಿ

ಶಾಪದಲೆಗಳು ಹೊಡೆದು ಬಡೆಯಲು

ತಾಪದಿಂದ ನೀವಲೆಗಳೊಳ್ ಮುಳುಮುಳುಗಿ ಹೋಗುವಿರಿ

(ಹೊಸಗನ್ನಡದ ಅ-ಪು. ೩೯೦)

ಇದಲ್ಲದೆ ಇವರ ಕೃತಿಗಳಲ್ಲಿ ಅನೇಕ ದೇಶಿರಾಗದ ಹಾಡುಗಳು ರಚಿತವಾಗಿದೆ. ಹಾವನೂರರು ಹೇಳುವಂತೆ "ಈ ಕೃತಿಯು ವಿದೇಶಿಯೊಬ್ಬನಿಂದ ರಚಿತವಾದದ್ದೆಂದು ಯಾರಿಗೂ ಅನಿಸದಷ್ಟು ಈ ಪದ್ಯ ದೇಶೀಯವಾಗಿದೆ! ಇದರಲ್ಲಿ ಸುಮಾರು ೪೦೦ರಕ್ಕೂ ಹೆಚ್ಚು ಪದ್ಯಗಳು ಭಾಮಿನೀ, ವಾರ್ಧಕ ಷಟ್ಪದಿಗಳಲ್ಲಿದೆ."(ಹೊಸಗನ್ನಡದ ಅರುಣೋದಯ-ಪು. ೩೯೦)

ಇದು ವಿದೇಶಿಯರಿಂದ ಕನ್ನಡಕ್ಕೆ ಸಿಕ್ಕ ಅನುವಾದದ ಮಾದರಿಗಳಾದರೆ ಕ್ರೈಸ್ತ ಧರ್ಮೀಯರಾದ ಅನೇಕ ದೇಶಿಯ ಜನರು ಪಾಶ್ಚಾತ್ಯ ಕವಿತೆಗಳ ಮಾದರಿಯನ್ನು ಅನುಸರಿಸಿ ಕ್ರೈಸ್ತ ಗೀತೆಗಳನ್ನು ಬರೆಯತೊಡಗಿದರು. ಇ.ಪಿ. ಕೆರಟ್ ಇಂತಹ ದೇಶೀ ಕ್ರೈಸ್ತ ಧರ್ಮೀಯ. ಅವನ ಪದ್ಯದ ಮಾದರಿ ಇಂತಿದೆ.

ಅಪ್ಪ ತಂದೆ ವಂದನೆ

ಬಂದೆ ನಿನ್ನ ಪಾದಕೆ

ಬಡ ಬಾಲ ಪ್ರಾರ್ಥನೆ

ಕೇಳು ಸ್ವಾಮಿ ದೇವರೆ

– –

ಬಹು ಪಾಪ ಮಾಡಿದೆ

ನಿನ್ನ ಮಾತು ಕೇಳದೆ

ನೋಡಿ ಯೇಸು ಮುಖವಂ

ಮಾಡು ಪರಿಹಾರವಂ

ನನ್ನ ಮಿತ್ರಾಮಿತ್ರರಂ ಸರ್ವ ಬಂದು ವರ್ಗವಂ

ಲೋಕಜನರೆಲ್ಲರಂ

ನೋಡಿ ನೀನು ಕ್ಷೇಮವಂ (ಹೊಸಗನ್ನಡದ ಅ-ಪು. ೩೯೨)

ಬಹಳ ಸರಳವಾದ ಗೀತೆಯ ಶೈಲಿ, ಪ್ರಾಸ, ಛಂದಸ್ಸುಗಳಿಂದ ಮುಕ್ತವಾದ ಒಂದು ಭಾವಗೀತೆಯ ಮಾದರಿ ಇದಾಗಿದೆ. ಇಂತಹ ಹೊಸ ಮಾದರಿಯ ಕವಿತೆಗಳು ೧೮೭೦ರ ವೇಳೆಗಾಗಲೆ ಪ್ರಚಾರಕ್ಕೆ

ಬಂದಿದ್ದು, ಎರಡು ಮಾದರಿಯ ಅನುವಾದ ರೂಪಗಳು ಸ್ಥಳೀಯರಿಗೆ ಲಭ್ಯವಾದುವು. ಮೊದಲನೆಯದು ಅನ್ಯ ವಿಚಾರಗಳನ್ನೂ ಸ್ಥಳೀಯವಾದ ಛಂದೋರೂಪಕ್ಕೆ ಒಗ್ಗಿಕೊಳ್ಳುವುದು. ಎರಡನೆಯದು ಸ್ಥಳೀಯರೂ ಪಾಶ್ಚಾತ್ಯ ಮಾದರಿಯಲ್ಲಿ ಗೀತೆಗಳನ್ನು ರಚಿಸುವುದು. ಇದು ಅನುವಾದ ಸಾಹಿತ್ಯದ ಪ್ರೇರಣೆಯ ಮೊದಲನೆಯ ಘಟ್ಟ. ಇಂತಹ ಅನೇಕ ಅನುವಾದಿತ ಕವಿತೆಗಳ ಮಾದರಿಗಳು ಅಂದಿನ ಪತ್ರಿಕೆಗಳಲ್ಲಿ ಹೆಚ್ಚಾಗಿ ಪ್ರಕಟವಾದವು. ಮಂಗಳೂರು ಸಮಾಚಾರದಂತಹ ಕ್ರೈಸ್ತ ಮಿಶನರಿ ಪತ್ರಿಕೆಗಳು ಇಂತಹ ಗೀತೆಗಳನ್ನು ಪ್ರಕಟಿಸುತ್ತಿದ್ದವು. ಮಿಶನರಿಗಳು ಕೇವಲ ಕವಿತೆಗಳನ್ನಷ್ಟೇ ಅಲ್ಲದೆ ಸಣ್ಣಕತೆಗಳನ್ನು, ನೀಳ್ಗತೆಗಳನ್ನು ಧರ್ಮಪ್ರಚಾರದ ಹಿನ್ನೆಲೆಯಲ್ಲಿ ರಚಿಸಿದ್ದಾರೆ.

ಆರಂಭದಲ್ಲಿ ಉತ್ತರಕರ್ನಾಟಕ ಭಾಗದಲ್ಲಿ ಪತ್ರಿಕೆಗಳು ಆರಂಭವಾಗಿದ್ದು ಆ ಜನರಲ್ಲಿ ಹೊಸ ಚಿಂತನೆಗಳಿಗೆ, ಹೊಸ ಬರಹಗಾರರಿಗೆ ಪ್ರೇರಣೆಯಾದುವು. "ಸುಮಾರು ೧೮೮೦ ರಲ್ಲಿ ಇಲ್ಲಿ ಅಸ್ತಮನ್ವಂತರ ಅಸ್ತವಾಗಿ ಅನುಕರಣ ಮನ್ವಂತರ ಉದಯವಾಯಿತು. ಈ ಹೊತ್ತಿಗೆ ೨-೮ ಕನ್ನಡ ಪತ್ರಿಕೆಗಳು ಹೊರಡಹತ್ತಿದವು. ಆದರೆ, ಧಾರವಾಡ ವೃತ್ತ(ಧಾರವಾಡ), 'ಬೆಳಗಾಂವ ಸಮಾಚಾರ' (ಬೆಳಗಾಂವ), 'ಹಿತೇಚ್ಚು' (ಕಲಾದಗಿ – ಈಗಿನ ವಿಜಾಪುರ ಜಿಲ್ಲೆ) ಮುಂತಾದ ಮಹಾರಾಷ್ಟ್ರ ಪತ್ರಿಕೆಗಳಿಗಿದ್ದ ಮಾನವು ನಮ್ಮ ಪತ್ರಿಕೆಗಳಿಗಿರಲಿಲ್ಲ. ಅನುಕರಣ ಲಕ್ಷಣವೇ ಇದು. 'ಸುದ್ದಿಯ ಸೊಬಗ; 'ಶಾಲಾಪತ್ರ', 'ಮಯೂರಿಪುರ ಸಮಾಚಾರ;......... ಇವೇ ಮೊದಲಾದ ಪತ್ರಿಕೆಗಳ ಕಾಲ ಇದೆ. ಕನ್ನಡ 'ಸಾರ್ವಜನಕ ಕಾಕ' ಎಂದು ಕರೆಸಿಕೊಂಡ ಗೋವಿಂದರಾವ ವಕೀಲರ ಉದಯದ ಕಾಲವೂ, ಶಾಂತಕವಿಗಳಿಗೆ ಸಾರ್ವಜನಿಕ ರೀತಿಯಿಂದ ಮನ್ನಣೆ ದೊರೆತ ಕಾಲವೂ ಇದೇ." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೩೩)

ಹೀಗೆ ೧೯ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯಮಯ ಪರಂಪರಾಗತವಾದ ಕಾವ್ಯಶೈಲಿ, ವಸ್ತು, ಪ್ರಕಾರ, ಛಂದಸ್ಸು, ಚಿಂತನೆಗಳಿಗೆ ಭಿನ್ನವಾದ ನೆಲೆಯಲ್ಲಿ ರೂಪುಗೊಂಡಿತು. ಹಿಂದಿನ ಮಾರ್ಗ ಸಾಹಿತ್ಯವನ್ನು ತೊರೆದು ಸಾಮಾನ್ಯ ಜನರ ಬದುಕಿನ ನೆಲೆಯಲ್ಲಿ ಸಾಹಿತ್ಯ ಅರಳಿತು. ಈ ಬದಲಾವಣೆಗೆ ವಸಾಹತುಶಾಹಿ ಆಡಳಿತ ವ್ಯವಸ್ಥೆ, ಮುದ್ರಣ ಯಂತ್ರ, ಹೊಸ ಮಾದರಿಯ ಇಂಗ್ಲೀಷ್ ಶಿಕ್ಷಣ, ಪತ್ರಿಕೆಗಳ ಉಗಮ ಇತ್ಯಾದಿಗಳು ಪ್ರಮುಖ ಕಾರಣಗಳಾಗಿವೆ.

* * * * *

## ಅಧ್ಯಾಯ – ೩

# ಹಳತು–ಹೊಸತುಗಳ ನಡುವೆ ಗೊಂದಲ

೧೯ನೇ ಶತಮಾನದ ಸಾಹಿತ್ಯದ ಸಂಧಿಕಾಲದಲ್ಲಿ ಉಂಟಾದ ಗೊಂದಲವೆಂದರೆ ಹಳತು–ಹೊಸತುಗಳ ಸ್ವೀಕಾರ ಮತ್ತು ನಿರಾಕರಣೆ. ಈ ಅವಧಿಯಲ್ಲಿ ಕೆಲವರು ಹಳೆಯ ಸಂಪ್ರದಾಯಕ್ಕೆ ಜೋತುಬಿದ್ದು ಸಾಹಿತ್ಯ ರಚಿಸಲು ಮುಂದಾದವರು ಕೆಲವರಾದರೆ; ಮತ್ತೆ ಕೆಲವರು ಪಾಶ್ಚಾತ್ಯ ಸಾಹಿತ್ಯದ ಮಾದರಿಗೆ ಮನಸೋತು ಹೊಸ ರೀತಿಯ ಸಾಹಿತ್ಯ ಕೃತಿಗಳನ್ನು ರಚಿಸಿದರು. ಈ ಎರಡು ಗುಂಪಿನ ಜೊತೆ ಮತ್ತೊಂದು ಗುಂಪು ಇಲ್ಲಿ ಕಾಣಿಸಿತು. ಆ ಗುಂಪೆಂದರೆ ಪರಂಪರಾಗತವಾದ ಸಾಹಿತ್ಯದ ಬಂಧನದಿಂದ ಬಿಡುಗಡೆಗೊಳ್ಳಲಾಗದೆ; ಹೊಸತಿನ ಆಕರ್ಷಣೆಯನ್ನು ನಿರಾಕರಿಸಲಾಗದೆ ಎರಡನ್ನೂ ಒಗ್ಗೂಡಿಸಿ ಕೃತಿ ರಚನೆಯಲ್ಲಿ ತೊಡಗಿದ್ದವರು. ವಸ್ತು, ಭಾಷೆ, ಛಂದಸ್ಸು, ಶೈಲಿಯ ವಿಚಾರದಲ್ಲಿ ಎರಡೂ ಅಂಶಗಳನ್ನು ಸೇರಿಸಿ ಕೃತಿ ರಚಿಸಿದ್ದಾರೆ. ಅಂದಿನ ಪತ್ರಿಕೆಗಳಲ್ಲಿ ಈ ಕುರಿತು ಚರ್ಚೆ, ಅಭಿಪ್ರಾಯಗಳು ಕಾಣಿಸಿಕೊಂಡವು. ಕನ್ನಡ ಸಾಹಿತ್ಯದಲ್ಲಿ ಆಂತರಿಕವಾಗಿಯೇ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಅನೇಕ ಬದಲಾವಣೆಗಳು ಕಾಲದಿಂದ ಕಾಲಕ್ಕೆ ನಡೆಯುತ್ತಲೇ ಬಂದಿದೆ. ಮಾರ್ಗ ಸಾಹಿತ್ಯವನ್ನು ತಿರಸ್ಕರಿಸಿ ದೇಸಿ ಸಾಹಿತ್ಯ ರೂಪುಗೊಂಡ ಸಂದರ್ಭವು ಒಂದು ಕ್ರಾಂತಿಯೇ ಆಗಿದೆ. ೧೨ನೇ ಶತಮಾನದ ವಚನ ಸಾಹಿತ್ಯದ ಭಾಷೆ, ವಸ್ತು, ಶೈಲಿ ಎಲ್ಲವೂ ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿತ್ತು. ಅಲ್ಲದೆ ಶ್ರೀಸಾಮಾನ್ಯರು ಸಾಹಿತ್ಯ ರಚಿಸಲು ವಚನಕಾರರ ಪ್ರೋತ್ಸಾಹ ಲಭ್ಯವಾಯಿತು. ಸಾಮಾನ್ಯ ಜನರ ಬದುಕು, ಅವರ ಭಾವನೆಗಳು ಕಾವ್ಯದ ವಸ್ತುವಾಗಬಹುದೆಂದು ತೋರಿಸಿಕೊಟ್ಟರು. ಅಂತಹ ಆಲೋಚನೆ ಭಿನ್ನ ರೂಪವನ್ನು ಪಡೆದು ಸಾಹಿತ್ಯ ಹೊಸ ಆಕಾರವನ್ನು ತಳೆದದ್ದು ಈ ಶತಮಾನದಲ್ಲಿ.

ಇಂತಹ ಮಹತ್ವದ ಕಾರ್ಯವು ಹಲವಾರು ಎಡರು–ತೊಡರುಗಳ ನಡುವೆಯೇ ಆರಂಭವಾಯಿತು. ವಚನ ಸಾಹಿತ್ಯದ ನಂತರದಲ್ಲಿ ಸೀಮಿತ ಪ್ರದೇಶಗಳಲ್ಲಿ ಕೆಲವರಿಂದ ಮಾತ್ರ ಸಾಹಿತ್ಯದ ಭಾಷೆ ಹಾಗೂ ಅದರ ಸ್ವರೂಪದಲ್ಲಿ ಹೊಸತನವನ್ನು ತರುವ ಪ್ರಯತ್ನ ನಡೆಯಿತು. ರಗಳೆ, ಕೀರ್ತನೆಗಳಂತಹ ಕೆಲವು ಪ್ರಕಾರಗಳು ಇದಕ್ಕೆ ಮಾದರಿಯಾಗಿವೆ. ಆದರೆ ೧೯ನೇ ಶತಮಾನದಲ್ಲಿ ಇಡೀ ಕನ್ನಡ ನಾಡಿನಲ್ಲಿ ಹಾಗೂ ಕನ್ನಡ ಸಾಹಿತ್ಯದಲ್ಲಿ ಹೊಸ ಅಲೆಯೊಂದು ಕಾಣಿಸಿಕೊಂಡಿತು. ಬ್ರಿಟಿಷರ ಆಳ್ವಿಕೆಯ ಪ್ರಭಾವ ಕೇವಲ ಜನರ ಜೀವನದ ಮೇಲೆ ಮಾತ್ರ ಪ್ರಭಾವ ಉಂಟುಮಾಡದೆ ಸಾಹಿತ್ಯದಲ್ಲೂ ಹೊಸ ಸಂಚಲನವನ್ನು ಉಂಟುಮಾಡಿತು. ಈ ಸಂಚಲನವು ಅನೇಕ ಗೊಂದಲಗಳನ್ನು ಸೃಷ್ಟಿಸಿತು. ಕೃತಿಕಾರರಲ್ಲೂ ಗೊಂದಲಗಳು ಹುಟ್ಟಿಕೊಂಡು ಮೂರು ಪಂಗಡಗಳಾಗಿ ಸಾಹಿತ್ಯ ರಚಿಸಲು ತೊಡಗಿದರು. ಮೊದಲನೆಯದಾಗಿ ಹಿರಿಯರು ಹಾಕಿ ಕೊಟ್ಟಿದ್ದಂತಹ ಪರಂಪರೆಯಲ್ಲಿಯೇ ಸಾಗುವುದು. ಎರಡನೆಯದಾಗಿ ಪರಂಪರೆಯ ಜೊತೆಗೆ ಹೊಸತನವನ್ನು ಒಗ್ಗೂಡಿಸುವುದು. ಮೂರನೆಯದಾಗಿ ಹಿಂದಿನದನ್ನು ಬಿಟ್ಟು ಪೂರ್ಣವಾಗಿ

ಹೊಸತನವನ್ನು ಸ್ವೀಕರಿಸುವುದು. ಅಲ್ಲದೆ ಈ ಗುಂಪುಗಳ ನಡುವೆ ಅನೇಕ ಚರ್ಚೆಗಳು, ವಿರೋಧವಾದ ಹೇಳಿಕೆಗಳು ವ್ಯಕ್ತವಾಗುತ್ತಿದ್ದವು. ಒಟ್ಟಾರೆ ಸಾಹಿತ್ಯದ ಸ್ವರೂಪ ಕುರಿತಂತೆ ಆರಂಭದಲ್ಲಿ ಸಾಕಷ್ಟು ಚರ್ಚೆಗಳು ನಡೆದವು. ಅಂದಿನ ಪತ್ರಿಕೆಗಳಲ್ಲಿ ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರು.

ಸಂಸ್ಕೃತ ನಿಷ್ಠವಾದ ಭಾಷೆಗಿಂತ ಸರಳವಾದ ಆಡುನುಡಿಯ ಭಾಷೆ ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದು ೧೯ನೇ ಶತಮಾನದ ಪ್ರಮುಖ ಬದಲಾವಣೆ. ಆದರೆ ಆಡುನುಡಿಯಲ್ಲಿ ಸಾಹಿತ್ಯದ ರಚನೆ ಕುರಿತು "ನಮ್ಮ ಕರ್ಣಾಟ ಭಾಷೆಯಾದರೋ ಪೂರ್ವಕಾಲದಲ್ಲಿ ಸತ್ಕವಿಗಳಿಂದ ಒಳ್ಳೆಯ ಕಟ್ಟಳೆಂ ಹೊಂದಿ ಏಕರೂಪವಾಗಿಯೇ ಇತ್ತು. ಈಚೆಗೆ ಮತಕಲಹಗಳಿಂದ ಹೊಸ ಹೊಸದಾದ ಗ್ರಂಥಗಳು ನೆಗಳಿ ಜನಗಳ ದ್ರುತೋಚ್ಚಾರಣೆಯಿಂದ ಭಾಷೆಯು ಬದಲಾಯಿಸುತ್ತಾ ಬದಲಾಯಿಸುತ್ತಾ ಹಳಗನ್ನಡೆವೆಂದೂ ಹೊಸಗನ್ನಡವೆಂದೂ ಇದುವರೆಗೆ ಎರಡು ವಿಧವಾಗಿ ನಿಂತಹಾಗೆ ಕಾಣುತ್ತೆ. ಪ್ರಾಚೀನ ಪದ್ಧತಿಗಳನ್ನೂ ಹಿಂದಣ ಕಥೆಗಳನ್ನು ತಿಳಿಸುವ ಹಳಗನ್ನಡವು, ನವನಾಗರಿಕತೆಯನ್ನಭಿವೃದ್ಧಿಮಾಡುವ ಹೊಸಗನ್ನಡವು, ಇವೆರಡೂ ಜನಗಳಿಗೆ ತಿಳಿದಿರತಕ್ಕದೆಂದು ಎರಡೂ ಭಾಷೆಗಳೂ ಮಿಶ್ರವಾಗಿರುವ ಪುಸ್ತಕಗಳನ್ನೇ ಪ್ರಭುತ್ವದವರು ರಚಿಸಬೇಕು....." (ಹಿತಬೋಧಿನಿ–ಪು. ೩೩೨) ಇಲ್ಲಿ ಲೇಖಕರು ಒಂದು ಶ್ರೇಷ್ಠ ಕೃತಿ ನಿರ್ಮಾಣದಲ್ಲಿ ಭಾಷೆಯ ನಡುವೆ ಗೊಂದಲಗಳು, ಚರ್ಚೆಗಳು ನಡೆಯುತ್ತಿರುವುದನ್ನು ಗಮನಿಸಿ ಯಾವ ರೀತಿಯ ಭಾಷೆ ಅಗತ್ಯವಿದೆ ಎಂದು ತಿಳಿಸಿದ್ದಾರೆ.

ಈ ಹೇಳಿಕೆಗೆ ಪೂರಕವಾದ ಅಭಿಪ್ರಾಯವನ್ನು ಇಲ್ಲಿ ಕಾಣಬಹುದು. "ನಮ್ಮ ಕರ್ಣಾಟಕ ಭಾಷೆಯಲ್ಲಿರುವ ಲಕ್ಷ್ಯಲಕ್ಷಣ ವಿರೋಧಗಳಂ ನಿವಾರಿಸುವ ವಿಷಯದಲ್ಲಿ ಜನಗಳು ಉಪೇಕ್ಷೆಯಂ ಮಾಡಿರುವುದಂ ನೋಡಿದರೆ, ನಮ್ಮಲ್ಲಿ ಭಾಷಾಭಿಮಾನಗಳೇ ಇಲ್ಲವೋ? ಇದ್ದವರಿಗಾದರೂ ಇಂಥಾ ಅವ್ಯವಸ್ಥೆಯೇ ಸಮ್ಮತವೋ? ಪ್ರಭುತ್ವಭೇದದಿಂದ ಭಿನ್ನದೇಶಗಳಲ್ಲಿರುವ ಜನಗಳಿಗೆ ಐಕ್ಯಮತವಿಲ್ಲದುದರಿಂದೆಯೋ? ಇಲ್ಲದೆ ನಮ್ಮ ಭಾಷೆಯಲ್ಲಿ ಅದೃಶ್ಯಕವಿ, ಅದೃಶ್ಯಕವಿಜ್ಞಾನ ಸಿಂಧುಕವಿ, ಕರ್ಣಾಟ ವ್ಯಾಸ ಶುಕ ವಾಲ್ಮೀಕಿ ಕವಿಗಳು, ಇನ್ನೂ ವರಕವಿಗಳೇ ಮುಂತಾದ ಪರಮ ಪಂಡಿತರಿಂದ ಮಾಡಲ್ಪಟ್ಟ ಬಹುವಿಧಲಕ್ಷ್ಯ ಗ್ರಂಥಗಳೂ ವ್ಯಾಕರಣ, ವಾಗ್ವಿಧಾಯಿನಿ, ಕನ್ನಡ ಕೌಮುದಿ, ಹೊಸಗನ್ನಡ ನುಡಿಗನ್ನಡಿ, ವಾಣೀಮುಕುರ, ಶಬ್ದಭಾಸ್ಕರ, ಮೊದಲಾದ ವಿಲಕ್ಷಣಲಕ್ಷಣ ಗ್ರಂಥಗಳೂ; ಬಹುಪ್ರಚಾರಗಳಾಗಿರಲು, ಅವುಗಳಿಗೆ ಪರಸ್ಪರ ಲಕ್ಷ್ಯಲಕ್ಷಣ ಸಮನ್ವಯವಂ ಮಾಡುವದು ಅಸಾಧ್ಯವಾದುದರಿಂದೆಯೋ? ಉಪೇಕ್ಷೆಗೆ ಕಾರಣವಂ ತಿಳಿಯದೆ ಅದು ಹ್ಯಾಗಾದರೂ ಇರಲೆಂದು ಮುಂದೆಯಿದ್ದ ಭಾಷಾಭಿಮಾನವಂ ಬಿಟ್ಟುಬಿಟ್ಟು ಅವಶಬ್ಧಭಯವಂ ಲಕ್ಷ್ಯವಿಡದೆ ಈ ಕಾಲದವರಿಗೆ ಪರಪದಾರ್ಥಗಳು ಚೆನ್ನಾಗಿ ತಿಳಿಯುವದೇ ಮುಖ್ಯೋದ್ದೇಶವಾದದರಿಂದ ಲಕ್ಷಣಪರನಾಗದೆ ಕೇವಲ ಪ್ರಾಚೀನಭಾಷೆಯನ್ನು ಆಧುನಿಕವಾದ ಜೈಮಿನಿಭಾರತಕಾರ ಲಕ್ಷ್ಮೀಶಾದಿ ಸಮ್ಮತವಾದ ಮಿಶ್ರ ಭಾಷಾಶೈಲಿಯನ್ನೇ ಅನುಸರಿಸಿರುವೆನು." (ಹಿತಬೋಧಿನಿ–ಪು. ೩೭೦) ಇಲ್ಲಿಯೂ ಹಿಂದಿನದನ್ನು ಪೂರ್ಣವಾಗಿ ಬಿಟ್ಟು ಹೊಸ ಮಾದರಿಯ ಭಾಷೆಯನ್ನು ಪೂರ್ಣ ಪ್ರಮಾಣದಲ್ಲಿ ಸ್ವೀಕರಿಸುವಲ್ಲಿ ಕೃತಿಕಾರನ ಸಮ್ಮತಿ ಇಲ್ಲ.

ಹೊಸಗನ್ನಡ ಸಾಹಿತ್ಯ ರೂಪುಗೊಳ್ಳುವ ಸಂದರ್ಭದಲ್ಲಿ ಕನ್ನಡ ಭಾಷೆಯ ಮೇಲೆ ಅನ್ಯ ಭಾಷೆಯ ಪ್ರಭಾವವು ಅನೇಕರಿಗೆ ಆತಂಕವನ್ನು ಉಂಟುಮಾಡಿತ್ತು. ಅದರಲ್ಲೂ ಅನುವಾದ ಸಾಹಿತ್ಯದಿಂದ ಭಾಷೆಯು ತನ್ನ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿರುವ ಬಗ್ಗೆ ವಿಶಾದವನ್ನು ಅನೇಕರು ವ್ಯಕ್ತಪಡಿಸಿದ್ದಾರೆ. "ಭಾಷಾಭಿವೃದ್ಧಿಯ ಪ್ರಶ್ನೆಯೂ ಸ್ವತಂತ್ರವಾದ ಪ್ರಶ್ನೆಯಲ್ಲಿ........... ಮೇಲೆ ಹೇಳಿದ ಕೃತ್ರಿಮೋಪಾಯಗಳಿಂದ (ಲೇಖಕರು ಅನುವಾದವನ್ನು ಕೃತ್ರಿಮವೆಂದು ಹೇಳಿದ್ದಾರೆ) ಇದುವರೆಗೂ, ಆಗಬೇಕಾದಷ್ಟು ಲಾಭವಾಗಿಲ್ಲ. ಹೊಸ ಪರಿಸ್ಥಿತಿಗೆ ತಕ್ಕ ಹೊಸಗನ್ನಡವಿನ್ನೂ ಹುಟ್ಟತಕ್ಕುವಿದೆ. ಆದ ಕಾರಣ, ಸದ್ಯಃ ನಿರ್ಬಂಧಗಳಿಂದ ಉಪಯೋಗವಿಲ್ಲ. ಹಳಗನ್ನಡವನ್ನು ಪೂರ್ಣವಾಗಿ ಪುನರುಜ್ಜೀವನ ಮಾಡುವೆವೆಂದರೆ ಶಕ್ಯವಾಗದು; ಹಾಗೆಂದು, ಅದನ್ನು ಬಿಸಾಡುವುದೂ ಸರಿಯಲ್ಲ ಇಂತಹ ಸ್ಥಿತಿಯಲ್ಲಿ ನಾವು ಭಾಷೆಯ ಸುಧಾರಣೆಯ ಗೋಜಿಗೇ ಹೋಗದೆ, ಭಾಷೆಯನ್ನು ಗಾಳೀಪಟಮಾಡಿ ಬಿಟ್ಟು ಬಿಡಬೇಕೋ?–ಎಂದು ಕೆಲವರು ಆಕ್ಷೇಪಿಸಬಹುದು. ನನ್ನ ಅಭಿಪ್ರಾಯವು ಹಾಗಿಲ್ಲ ಭಾಷಾನಿರ್ಬಂಧಗಳನ್ನು ನಾನೆಂದೂ ತುಚ್ಛೀಕರಿಸಲಾರೆ. ಆದರೆ, ಆ ನಿರ್ಬಂಧಗಳನ್ನು ವಿಶೇಷವಾಗಿ ಉಪಯೋಗಿಸಿ, ಗ್ರಂಥಸ್ಫೂರ್ತಿಯನ್ನು ಕೆಡಿಸಿಬಿಡಬಾರದೆಂದು ನನ್ನ ಅಭಿಪ್ರಾಯ." (ವಿದ್ಯಾದಾಯಿನಿ) ಇಲ್ಲಿ ೧೯ನೇ ಶತಮಾನದಲ್ಲಿ ಅನುವಾದ ಪ್ರಕ್ರಿಯೆಯಿಂದ ಭಾಷಿಕವಾಗಿ, ಸಾಹಿತ್ಯಕವಾಗಿ ಆದ ಬದಲಾವಣೆಯು ಇಡೀ ವ್ಯವಸ್ಥೆಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡುತ್ತಿದೆ ಎಂದಿದ್ದಾರೆ.

ಹೀಗೆ ಭಾಷೆ ಕುರಿತಂತೆ ಚರ್ಚೆಗಳು ನಡೆದರೆ, ಹೊಸ ಪ್ರಕಾರವನ್ನು ಸ್ವೀಕರಿಸುವ ಸಂದರ್ಭದಲ್ಲಿ ಅನೇಕ ಗೊಂದಲಗಳು ರಚನಾಕಾರರನ್ನು ಕಾಡಿದ್ದಿದೆ. ಗುಬ್ಬಿ.ಸೋ.ಮುರಿಗಾರಾಧ್ಯರು ಬರೆದ 'ಶೃಂಗಾರ ಚಾತುರ್ಯೋಲ್ಲಾಸಿನಿ' ಕಾದಂಬರಿಯು ಆರಂಭದ ಕಾದಂಬರಿಯ ಮಾದರಿಯಲ್ಲಿ ಒಂದಾಗಿದೆ. ಸ್ವತಂತ್ರ ಕಥಾನಕವನ್ನು ಹೊಂದಿರುವ ಕೃತಿಯಾಗಿದ್ದರೂ ಐತಿಹಾಸಿಕ ಹಿನ್ನೆಲೆಯು ಇದರಲ್ಲಿ ಇರುವುದರಿಂದ  ಇದನ್ನು ಮೊದಲ ಕಾದಂಬರಿ ಎಂದು ವಿದ್ವಾಂಸರು ಸಮ್ಮತಿಸಿಲ್ಲ. ಇದರ ಮುನ್ನುಡಿಯಲ್ಲಿ 'ನಾವೆಲ್' ಎಂಬ ಪ್ರಕಾರವನ್ನು ಕನ್ನಡೀಕರಿಸಿಕೊಳ್ಳುವ ಸಂದರ್ಭದಲ್ಲಿ ಎದುರಾದ ಸಮಸ್ಯೆಯನ್ನು ಹೀಗೆ ಹೇಳಿದ್ದಾರೆ. "ಇಂಗ್ಲಿಷ್‌ನಲ್ಲಿರುವ ಯಾವುದಾದರೂ ಒಂದು ನಾವೆಲ್ ಅನ್ನು ಕನ್ನಡದಲ್ಲಿ ಭಾಷಾಂತರ ಮಾಡಿ ಬರೆಯಬೇಕೆಂಬ ಆಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಆದರೆ ಅಂತಹ ಒಂದೆರಡು ಇಂಗ್ಲಿಷ್ ಕಾವ್ಯಗಳನ್ನು ಚೆನ್ನಾಗಿ ವಿಚಾರ ಮಾಡುತ್ತಾ ನೋಡುವಲ್ಲಿ ಕೆಲವು ವಿಷಯಗಳು ನಮ್ಮ ಹಿಂದೂ ಮರ್ಯಾದೆಗಳಿಗನುಸಾರವಾಗಿ ಕಂಡು ಬರಲಿಲ್ಲವಾದ್ದರಿಂದ ಆ ಮಾರ್ಗವನ್ನು ಬಿಡಬೇಕಾಯಿತು. ಅನಂತರ ನಮ್ಮಲ್ಲಿಯೇ ಪುರಾಣ ಪ್ರಸಿದ್ಧವಾಗಿ ಪದ್ಯರೂಪವಾಗಿರುವ ಯಾವುದಾದರೊಂದು ಇತಿಹಾಸವನ್ನು ಗದ್ಯರೂಪವಾಗಿ ಮಾಡಬೇಕೆಂದು ಆಲೋಚಿಸುವಲ್ಲಿ ಇಂಗ್ಲಿಷ್ ನಾವೆಲ್‌ಗಳ ಮರ್ಯಾದೆಯನ್ನು ಬಿಡಬೇಕಾಗಿ ಬಂದುದರಿಂದ ಅದು ನನ್ನ ಮನಸ್ಸಿಗೆ ಅಭಿರುಚಿಸಲಿಲ್ಲ. ಆದ ಕಾರಣ ಆ ವಿಷಯದಲ್ಲಿ ಹಿಂದೂ ಮರ್ಯಾದೆಯನ್ನು ಇಟ್ಟುಕೊಂಡು, ಇಂಗ್ಲಿಷ್ ನಾವೆಲ್ ಪದ್ಧತಿಯನ್ನು ಅನುಸರಿಸಿ ಬರೆಯಲು ಅನುಕೂಲವಾಗುವಂತೆ ಹೊಸದಾಗಿ ಒಂದು ಕಥೆಯನ್ನು

ಕಲ್ಪನೆ ಮಾಡಿಕೊಂಡೆನು."(ಹೊಸಗನ್ನಡದ ಅರುಣೋದಯ-ಪು. ೫೭೪). ಈ ಮೇಲಿನ ಹೇಳಿಕೆ ಪ್ರಕಟವಾದುದು ಹೊಸ ಪ್ರಕಾರದ ಚಿಂತನೆಯೊಂದು ಕನ್ನಡದ ನೆಲದಲ್ಲಿ ಬೇರೂರಲು ಹವಣಿಸುತ್ತಿರುವ ಸಂದರ್ಭದಲ್ಲಾಗಿದೆ. ನಮಗೆ ಒಗ್ಗಿರದ ಹೊಸ ಪ್ರಕಾರವೊಂದರಲ್ಲಿ ನಮ್ಮ ಭಾವನೆಗಳನ್ನು ಅಭಿವ್ಯಕ್ತಿಸಲು ತೊಡಕುಗಳು ಉಂಟಾಗುವುದು ಸಹಜ. ಅಂತಹ ಗೊಂದಲ ಇವರನ್ನೂ ಕಾಡಿದೆ. ಸಂಸ್ಕೃತಿಯ ಭಿನ್ನತೆಯು ಇದಕ್ಕೆ ಮುಖ್ಯ ಕಾರಣ.

ಕಡಂಗೋಡ್ಲು ಶಂಕರಭಟ್ಟರು ಹಳೆಯ ಮಾರ್ಗಬಿಟ್ಟು ಹೊಸಮಾರ್ಗವನ್ನು ಅನುಸರಿಸುವವರ ಬಗ್ಗೆ ವಿರೋಧ ವ್ಯಕ್ತಪಡಿಸುವವರನ್ನು ಕುರಿತಂತೆ " 'ಸಂಪ್ರಾಪ್ತೇ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕೃಞು ಕರಣೆ' ಎಂದು ಶಂಕರಾಚಾರ್ಯರು, ವ್ಯಾಕರಣ ಪಂಡಿತರ ಕಿವಿ ಹಿಂಡಲು ಕೈ ನೀಡಿದರೆ ಅವರು ಉಲ್ಲಾಸದಿಂದ ಕಿವಿಯನ್ನು ಒಪ್ಪಿಸುತ್ತಾರೆ. ಆದರೆ ಈ ದಿನದ ಯಾರಾದರೊಬ್ಬರು 'ಸಂಧಿಸಮಾಸದ ಹೊರೆಹೊತ್ತು ಬಂದುದೆ ನಿನಗೀ ವಿಧದ ವಿಪತ್ತು? ಎಂದು ಪದ ಕಟ್ಟಿದರೆ ರೋಷಾವೇಶ ಹೊಂದುವ ಸಂಭವವೆ ಹೆಚ್ಚು'[1] ಎಂದು ಟೀಕಿಸಿದ್ದಾರೆ. (ಹಣ್ಣು-ಕಾಯಿ-೧೯೩೩-ಮುನ್ನುಡಿ) ಪಾಶ್ಚಾತ್ಯ ಸಾಹಿತ್ಯವು ಭಾರತೀಯರಿಗೆ ಅನೇಕ ಹೊಸ ಮಾದರಿಯ ಅಭಿವ್ಯಕ್ತಿ ಸಾಧನಗಳನ್ನೂ, ಮಾರ್ಗಗಳನ್ನೂ ಒದಗಿಸಿತು. ಆದರೆ ಭಾರತೀಯರಿಗೆ ಏಕ ಕಾಲಕ್ಕೆ ಪರಂಪರಾಗತವಾಗಿದ್ದ ಒಂದು ವ್ಯವಸ್ಥೆಯನ್ನು ಮೀರುವ ಸಾಹಸ ಬಲು ಕಠಿಣವೆನಿಸಿತು. ಕೆಲವೇ ಮಂದಿ ಇಂತಹ ಸಾಹಸಕ್ಕೆ ಅಣಿಯಾದರು.

೧೯ನೇ ಶತಮಾನದಲ್ಲಿ ಅನುವಾದ ಕೃತಿಗಳ ಬಗೆಗಿನ ಆದರ ಭಿನ್ನವಾಗಿತ್ತು. ಕೆಲವರಿಗೆ ಪಾಶ್ಚಾತ್ಯ ಸಾಹಿತ್ಯದ ಬಗ್ಗೆ ಹೆಚ್ಚಿನ ಒಲವಿದ್ದರೆ, ಕೆಲವರು ಅದನ್ನು ಪೂರ್ಣವಾಗಿ ನರಾಕರಿಸಿದವರೂ ಇದ್ದರು. ಆದ್ದರಿಂದ ಎಂ.ಡಿ.ಅಳಸಿಂಗ್ರಾಚಾರ್ಯರು "ಸ್ವದೇಶಿಯ-ವಿದೇಶೀಯಗಳೆಂಬ ಭೇದವನ್ನಿಟ್ಟುಕೊಂಡು, ಅತ್ಯಾದರವನ್ನಾಗಲಿ, ಅತಿ ತಿರಸ್ಕಾರವನ್ನಾಗಲಿ ತೋರಿಸುವುದು ತಪ್ಪು. ಎರಡನ್ನೂ ತಕ್ಕ ಮಟ್ಟಿಗೆ ಸಮಸ್ಥಿತಿಯಿಂದ ಆದರಿಸುತ್ತಿರಬೇಕು. ವಿದೇಶೀಯವೆಂಬ ಭಾವದಿಂದ ಭಾಷಾಂತರಗಳನ್ನು ತಿರಸ್ಕರಿಸಿ, ಸ್ವದೇಶ ಭಾಷೆಯಲ್ಲಿಯೇ ಅತ್ಯಾದರವನ್ನು ತೋರಿಸಿದರೆ, ಆ ಭಾಷಾಂತರಗಳಲ್ಲಿರುವ ಸಾರವಾದ ಅಂಶಗಳನ್ನು ಸಂಗ್ರಹಿಸಲು ಅವಕಾಶವಿಲ್ಲದೆ ಹೋಗುವುದು. ವಿದೇಶೀಯ ಭಾಷೆಯನ್ನು ಅತ್ಯಾದರದಿಂದ ಅಭ್ಯಸಿಸುತ್ತ, ಸ್ವಭಾಷೆಯನ್ನು ತಿರಸ್ಕರಿಸಿದರೆ, ತಾವು

---

1. ಒಮ್ಮೆ ಕಾಶಿಯಲ್ಲಿ ಗಂಗಾತಟದಲ್ಲಿ ಹೋಗುತ್ತಿದ್ದಾಗ ವಯಸ್ಸಾದ ವ್ಯಾಕರಣ ಪಂಡಿತರು ಮಕ್ಕಳಿಗೆ ವ್ಯಾಕರಣ ಬೋಧಿಸುತ್ತಿದ್ದರು. ಅದನ್ನು ನೋಡಿದ ಶಂಕರಾಚಾರ್ಯರು ಹೀಗೆನ್ನುತ್ತಾರೆ- ಸಂಪ್ರಾಪ್ತೆ ಸನ್ನಿಹಿತೇ ಕಾಲೆ ನಹಿನಜಿ ರಕ್ಷತಿ ಡುಕೃಞ್ ಕರಣೆ. ಸನ್ನಿಹಿತ ಕಾಲವು ಎಂದರೆ ಜೀವನದ ಕೊನೆಯ ಘಳಿಗೆ. ಇಂತಹ ಸಮಯದಲ್ಲಿ ದೇವರ ಸ್ಮರಣೆ ಮಾಡುತ್ತಾ ಕಾಲ ಕಳೆಯಬೇಕು. ಡುಕೃಞ್ ಕರಣೆ ಎಂದರೆ ಧಾತು. ದೇವರ ಸ್ಮರಣೆಗೆ ಬದಲಾಗಿ ಧಾತುವನ್ನು ಪಾಠ ಮಾಡುತ್ತಿದ್ದರೆ ಅದು ನಮ್ಮನ್ನು ಅಧರ್ಮಗಳಿಂದ ರಕ್ಷಿಸುವುದಿಲ್ಲ. ಆದ್ದರಿಂದ ಗೋವಿಂದನ ನಾಮಸ್ಮರಣೆ ಮಾಡಬೇಕು ಎಂದಿದ್ದಾರೆ.

ಅದರಿಂದ ಗ್ರಹಿಸಿದ ಸಾರಾಂಶಗಳನ್ನು ತಮ್ಮ ಭಾಷೆಯಲ್ಲಿ ಬರೆದು, ಭಾಷೆಯನ್ನು ವೃದ್ಧಿಗೆ ತರುವಂತೆ ಮಾಡುವುದಕ್ಕೆ, ತಕ್ಕ ವ್ಯುತ್ಪತ್ತಿಯನ್ನು ಸಂಪಾದಿಸಲು ಅವಕಾಶವಿಲ್ಲದೆ ಹೋಗುವುದು ಆದ್ದರಿಂದ ಇವೆರಡನ್ನೂ ಸಮದೃಷ್ಟಿಯಿಂದ ಆದರಿಸುತ್ತಿದಷ್ಟು ಭಾಷಾಭಿವೃದ್ಧಿಗೆ ಹೇತುವಾಗುವುದು. ಅನೇಕ ನದೀನದಗಳೆಲ್ಲವನ್ನೂ ತನ್ನೊಳಗೆ ಅಡಗಿಸಿಕೊಂಡು ತನ್ನಲ್ಲಿ ತಾನೇ ಉಕ್ಕಿ ಅಡಗುತ್ತಿರುವ ಸಮುದ್ರದಂತೆ ಅನೇಕ ಹೊಸ ವಿಷಯಗಳನ್ನು ತಿಳಿದುಕೊಂಡು ತಮ್ಮಲ್ಲಿ ತಾನೇ ಉಕ್ಕಿ ಆನಂದಪಡುವುದರಿಂದರೇನು?... ಆದುದರಿಂದ, ಈಗಿನ ಆಂಗ್ಲೇಯ ವಿದ್ಯಾಭ್ಯಾಸದಲ್ಲಿ ಪ್ರವರ್ತಿಸಿ ವರ್ಧಿಷ್ಣುಗಳಾದ ವಿದ್ಯಾರ್ಥಿಗಳೆಲ್ಲರೂ ಸ್ಥಿತಿಗೆ ತರಬೇಕೆಂಬುದೊಂದುದ್ದೇಶವನ್ನು ಇಟ್ಟುಕೊಂಡಿರಬೇಕು. ಉಭಯ ಭಾಷಾಜ್ಞತೆ ಇದ್ದ ಹೊರತು ಇದು ಸಾಧ್ಯದಲ್ಲಿ ಹೀಗೆ ಉಭಯ ಭಾಷೆಗಳನ್ನು ತಿಳಿದವರು ತಾವು ಭಾಷಾಂತರದಿಂದ ಸಂಗ್ರಹಿಸಿದ, ಸೌರವತ್ತಾಗಿಯೂ ಜನರಂಜಕವಾಗಿಯೂ ಇರುವ ವಿಷಯಗಳನ್ನು ಸ್ವಭಾಷೆಯಲ್ಲಿ ಬರೆದಿಡುತ್ತಿದ್ದರೆ.... ಭಾಷಾಭಿವೃದ್ಧಿಗೆ ಹೇತುವಾಗುವುದು" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ – ಪು. ೨೮)ಎಂದು ಭಾಷಾಂತರ ಪ್ರಕ್ರಿಯೆ ಬಗ್ಗೆ ಸುದೀರ್ಘವಾಗಿ ತಿಳಿಸಿದ್ದಾರೆ. ಸ್ವಭಾಷೆಯ ಜೊತೆಗೆ ಅನ್ಯ ಭಾಷೆಗಳ ವಿಚಾರಗಳನ್ನು ಸ್ವೀಕರಿಸುವುದರಿಂದ ಭಾಷೆ ಹಾಗು ಸಾಹಿತ್ಯದ ಅಭಿವೃದ್ಧಿಗೆ ಪೂರಕವಾಗುತ್ತದೆ ಎಂಬುದು ಅವರ ಅಭಿಪ್ರಾಯ. ಒಂದು ಭಾಷೆ ಮಡಿವಂತಿಕೆಯನ್ನು ತ್ಯಜಿಸಿದರೆ ಆ ಭಾಷೆ ಸದಾಕಾಲ ಜೀವಂತಿಕೆಯಿಂದ ಕೂಡಿರುತ್ತದೆ. ಆದ್ದರಿಂದ ಕನ್ನಡ ಭಾಷೆಯೂ ಮಡಿವಂತಿಕೆಯಿಂದ ದೂರ ಸರಿದು ಅನ್ಯ ಭಾಷೆಗಳಲ್ಲಿರುವ ಒಳ್ಳೆಯ ವಿಚಾರಗಳನ್ನು ಸ್ವೀಕರಿಸಿದರೆ ಭಾಷಾಭಿವೃದ್ಧಿ ಸಾಧ್ಯ. ಇಂತಹ ಕಾರ್ಯಕ್ಕೆ ಅನೇಕರು ಕೈ ಜೋಡಿಸಿದರು.

ಭಾಷಾಂತರ ಕೃತಿಗಳ ಸ್ವೀಕರಣೆ ಕುರಿತು ಶ್ರೀ ಕೃಷ್ಣಶಾಸ್ತ್ರಿಗಳು ಹೇಳಿದ ಮಾತು ಇಲ್ಲಿ ಉಚಿತವಾದದು. ಅವರು "ಅನ್ಯರ ಮನೆಯಿಂದ ಮದುವೆಯಾಗಿ ಬಂದ ಕನ್ಯೆಯು ನಮ್ಮವಳಾಗುತ್ತಾಳೆ. ಬೇರೆ ಭಾಷೆಗಳಿಂದ ಕನ್ನಡಕ್ಕೆ ದೊರೆತ ಗ್ರಂಥಗಳು ಕನ್ನಡದ್ದೇ ವಿನಹಾ ಬೇರೆ ಭಾಷೆಯವಾಗಲಾರದು". ಅಂದರೆ ಒಂದು ಭಾಷೆ ಉತ್ಕೃಷ್ಟವಾಗಿ ಬೆಳೆಯಬೇಕಾದರೆ ಅನ್ಯ ಭಾಷೆಗಳಿಂದಲೂ ಸ್ವೀಕಾರ ಮಾಡುವುದರ ಅಗತ್ಯತೆ ಇದೆ. ಇಂಗ್ಲಿಷ್ ಭಾಷೆ ಇಂತಹ ಸ್ವೀಕಾರಗಳಿಂದ ಇಂದು ಇಷ್ಟು ಪ್ರಭಾವಶಾಲಿಯಾದ ಭಾಷೆಯಾಗಿ ಬೆಳೆದಿದೆ. ಕನ್ನಡ ಭಾಷೆಗೆ ಇಂತಹ ಅವಾಕಾಶ ಬೇಕಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ವೆಂಕಟರಂಗೋ ಕಟ್ಟಿಯವರು ಕನ್ನಡ ಭಾಷೆ ಮತ್ತು ಸಾಹಿತ್ಯದ ಅಂದಿನ ಸ್ಥಿತಿಯನ್ನು ಕುರಿತು "....ನಂಮ ಕನ್ನಡ ಭಾಷೆಯ ವಿಷಯದಲ್ಲಿ ಪ್ರಯತ್ನ ಮಾಡದ್ದರಿಂದ, ಈಗ ಅದು ತೀರ ಕೀಳ ಸ್ಥಿತಿಯಲ್ಲಿರುವುದು. ಇದು ನಮಗೆ ಬಹಳೇ ದೊಡ್ಡ ಕುಂದು. ಈ ಕುಂದನ್ನು ದೂರಮಾಡಿಕೊಳ್ಳದಿದ್ದರೆ ನಾವೆಲ್ಲರೂ ಸಜೀವ ಶವಗಳಾಗಿ ಭೂಮಿಗೆ ಮಾತ್ರ ಭಾರ. ನಂಮ ಹಿರಿಯರಂತೆ ಈಗಿನ ನಮ್ಮ ಕನ್ನಡ ಪಂಡಿತರು ಪ್ರಯತ್ನ ಮಾಡಿದರೆ ಇವರಿಗಾದರೂ ಹಿರಿಯರಂಥ ಕೀರ್ತಿಯೂ ಅಮರತ್ವವೂ ಜಗತ್ತನ್ನು ಎಚ್ಚರಿಸುವ ಶಕ್ತಿಯೂ ಕೆಲವು ಕಾಲಾಂತರದಿಂದಲಾದರೂ

ಬರುವ ಸಂಭವವುಂಟು. ಈ ಸಂಗತಿಯು ಯಃಕಶ್ಚಿತರೂ ಅಲ್ಪಮತಿಗಳೂ, ದರಿದ್ರರೂ, ಉದರದಾಸರೂ ಆಗಿರುವ ನಂಮಂಥವರಿಗೆ ಸುದ್ಧಾ ತಿಳಿಯುತ್ತದೆ" (ಹೊಸಗನ್ನಡದ ಅರುಣೋದಯ–ಪು. ೩೦೯) ಎಂದು ತಮ್ಮ ಕಳಕಳಿ ವ್ಯಕ್ತಪಡಿಸಿದ್ದಾರೆ. ೧೯ನೇ ಶತಮಾನದಲ್ಲಿ ಇತರೆ ಭಾಷೆಗಳಲ್ಲಿ ಸಾಹಿತ್ಯಕವಾಗಿ ಆಗುತ್ತಿದ್ದ ಬದಲಾವಣೆ ಹಾಗೂ ಅದು ಸಾಮಾಜಿಕವಾಗಿ ಉಂಟುಮಾಡಿದ ಪರಿಣಾಮಗಳು ಅಲ್ಲಿನ ವಿದ್ಯಾವಂತರಲ್ಲಿ ಹೊಸ ಹೊಸ ಆಲೋಚನೆಗಳನ್ನು ಉಂಟುಮಾಡಿತ್ತು. ಇಂತಹ ಬದಲಾವಣೆ ಕನ್ನಡ ಸಾಹಿತ್ಯ ಪರಿಸರಕ್ಕೆ ಬಹಳ ತಡವಾಗಿ ಬಂದಿತು. ಆದರೆ ಕೆಲವರು ಸಾಹಿತ್ಯಕವಾಗಿ ಇಂತಹ ಹೊಸ ಬದಲಾವಣೆಯನ್ನು ಒಪ್ಪಿಕೊಳ್ಳಲಾಗದ ಮನಸ್ಥಿತಿಯಲ್ಲಿದ್ದರು. ಅಲ್ಲದೆ ಪಾರಂಪರಿಕವಾಗಿ ಇದ್ದ ಸಾಹಿತ್ಯವನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ.

೧೯ನೇ ಶತಮಾನದಲ್ಲಿ ಅನ್ಯ ಭಾಷೆಯ ಕುರಿತ ವ್ಯಾಮೋಹ ಅಧಿಕವಾಗಿತ್ತು. ಇಂಗ್ಲಿಷ್ ಸಾಹಿತ್ಯದ ಬಗ್ಗೆ ಮೂಡಿದ ವ್ಯಾಮೋಹ ಎಷ್ಟರ ಮಟ್ಟಿಗೆ ಇತ್ತೆಂಬುದಕ್ಕೆ ಶ್ರೀಕಂಠೇಶಗೌಡರ ಈ ಮಾತನ್ನು ಗಮನಿಸಬಹುದು. "ಆ ಸರ್ ವಾಲ್ಟೆರ್ ಸ್ಕಾಟನ ಪದ್ಯದ ಹಿಂದೆ ಈ ಕನ್ನಡದ ಕಂದ ಪದ್ಯಗಳು ಕುಂಟುತ್ತಿರುವುದು ವ್ಯಕ್ತವಾಗಿದೆ" ಎಂದು ಅವರೇ ಅನುವಾದಿಸಿದ ಕವಿತೆಯ ಭಾಗವನ್ನು ಇಲ್ಲಿ ಕಾಣಬಹುದು.

"That Morning sun has three times seen
The flowers unfold on Rokeby green
But sees no more the slumbers fly
From fair Matilda's hazel eye…."

ಶ್ರೀಕಂಠೇಶಗೌಡರ ಅನುವಾದ

ಕಂ: ದಿನಂ ಮೂರುಂ ನೋಡಿದನಾ
ದಿನಮಣಿ ರೋಕ್ಬಿವನದಲ್ಲಿ ವಿಕಸಿತ ಸುಮಮಂ
ದಿನ ಮೂರಾಯ್ತಾದಿನ ಮಣಿ
ಯ ನವ ಕಿರಣ ನೋಡಿ ನಿದ್ದೆ ಬಿಟ್ಟೇಳ್ದವಳಂ

ಇಂತಹ ಅಸಂಬದ್ಧ ಅನುವಾದದ ಸಂದರ್ಭಗಳನ್ನು ಆರಂಭದಲ್ಲಿ ಕಾಣಬಹುದಾಗಿದೆ. ಕೆಲವೊಮ್ಮೆ ಯಥಾವತ್ತಾದ ಅನುವಾದ ಪ್ರಕ್ರಿಯೆಯು ಇಂತಹ ಗೊಂದಲಗಳ ಉಂಟುಮಾಡಿದವು. ಅನುವಾದಕನಿಗೆ ಯಾವಾಗಲೂ ಭಾಷೆಯ ಆತ್ಮ ತಿಳಿದಿರಬೇಕು. ಇಲ್ಲವಾದಲ್ಲಿ ಅನುವಾದದ ಪ್ರಕ್ರಿಯೆ ಪೂರ್ಣವೆನಿಸುವುದಿಲ್ಲ. ಬಸವಪ್ಪಶಾಸ್ತ್ರಿ, ಶ್ರೀಕಂಠೇಶಗೌಡರಂತಹ ವಿದ್ವಾಂಸರಿಗೆ ಪಾಶ್ಚಾತ್ಯ ಸಾಹಿತ್ಯವನ್ನು ಅನುವಾದ ಮಾಡುವಾಗ ಇಂತಹ ಅನೇಕ ಸಮಸ್ಯೆಗಳು ಎದುರಾದವು.

ಹೀಗೆ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಅನುವಾದ ಸಾಹಿತ್ಯವು ಭಾಷಿಕವಾಗಿ, ಸಾಹಿತ್ಯಕವಾಗಿ ಹೆಚ್ಚು ಪರಿಣಾಮವನ್ನು ಉಂಟುಮಾಡಿತು. ಭಾಷೆ, ಪ್ರಕಾರ, ಶೈಲಿ, ಛಂದಸ್ಸು ಮುಂತಾದ ವಿಚಾರಗಳಲ್ಲಿ ಈ ಗೊಂದಲ ಉಂಟಾಗಿರುವುದು ಕಂಡುಬರುತ್ತದೆ. ಆದಾಗ್ಯೂ ಪರಂಪರಾಗತವಾದ ಸಾಹಿತ್ಯಕ್ಕಿಂತ ಹೊಸ ಮಾದರಿಗಳು ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದ್ದರಿಂದ ಇಂತಹ ಅನೇಕ ಪ್ರಶ್ನೆಗಳ, ಗೊಂದಲಗಳ ನಡುವೆಯೂ ಹೊಸ ಮಾದರಿಯ ಸಾಹಿತ್ಯದ ಚಿಂತನೆಗಳು ಕನ್ನಡ ಸಾಹಿತ್ಯದ ಪರಿಸರವನ್ನು ಪ್ರವೇಶಿಸಿದವು. ಹೊಸತನವನ್ನು ಸ್ವೀಕರಿಸಿ ಅವು ಕನ್ನಡ ಸಾಹಿತ್ಯದಲ್ಲಿ ಹೊಸ ಚಿಂತನೆಗಳಾಗಿ ರೂಪುಗೊಳ್ಳಲು ಅನುವಾದ ಸಾಹಿತ್ಯವು ಮಾದರಿಯಾದವು.

* * * * *

ಅಧ್ಯಾಯ – ೪

# ಮಧ್ಯಮ ವರ್ಗದ ಮಹಾಕಾವ್ಯ ಕಾದಂಬರಿ

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿಯೂ ಒಂದು. ಈಗಾಗಲೇ ಮಧ್ಯಮ ವರ್ಗದ ಮಹಾಕಾವ್ಯವೆಂದೇ ಕರೆಯಲಾದ ಸಾಹಿತ್ಯ ಪ್ರಕಾರ. ಹೊಸಗನ್ನಡ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರಗಳ ಸ್ವರೂಪ, ಆಶಯಗಳನ್ನು ಕುರಿತ ಗೊಂದಲದ ಸುದೀರ್ಘವಾದ ಚರ್ಚೆ ನಡೆಯುತ್ತಲೇ ಇದೆ. ಅದರಲ್ಲೂ ಮೊದಲ ಕಾದಂಬರಿಗಳ ಲಕ್ಷಣಗಳ ಬಗ್ಗೆ ವಿದ್ವಾಂಸರು ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮುದ್ರಾಮಂಜೂಷ, ಸೂರ್ಯಕಾಂತ, ಕಲಾವತಿ ಪರಿಣಯ, ಶೃಂಗಾರಚಾತುರ್ಯೋಲ್ಲಾಸಿನಿ, ಇಂದಿರಾಬಾಯಿ – ಇವು ಮೊದಲ ಕಾದಂಬರಿಯ ಲಕ್ಷಣ ಯಾವುದೆಂಬುದರ ಚರ್ಚೆಗೆ ಒಳಪಟ್ಟಿರುವ ಕೃತಿಗಳು.

೧೯ನೇ ಶತಮಾನದಲ್ಲಿ ಕಾದಂಬರಿಯು ಹೊಸ ಚಿಂತನೆಯನ್ನು ನಾಡಿನಲ್ಲಿ ಪಸರಿಸುವ ಮಾಧ್ಯಮವಾಯಿತು. ಅಂದಿನ ರಾಜಕೀಯ, ಸಾಮಾಜಿಕ, ಸಾಹಿತ್ಯಕ ವಿಚಾರಗಳಲ್ಲಿ ಇದ್ದಂತಹ ಗೊಂದಲದ ಮಧ್ಯದಲ್ಲಿ ಹುಟ್ಟಿಕೊಂಡ ಸಾಹಿತ್ಯ. ಸ್ತ್ರೀ ಶಿಕ್ಷಣ, ಪಾಶ್ಚಾತ್ಯ ಶಿಕ್ಷಣ, ಬಾಲ್ಯ ವಿವಾಹ, ವಿಧವಾ ವಿವಾಹದಂತಹ ವಿಚಾರಗಳ ಜೊತೆ ಪರಂಪರಾಗತವಾಗಿದ್ದಂತಹ ಸಾಹಿತ್ಯ, ಭಾಷೆ, ಛಂದಸ್ಸು ಇವುಗಳಿಗೆ ಅಭಿಮುಖವಾಗುತ್ತಲೇ ಜನರ ಮೆಚ್ಚಿನ ಸಾಹಿತ್ಯ ರೂಪವಾಯಿತು.

ಸಮಾಜಕ್ಕೆ ಪರಿಚಯವಿಲ್ಲದ ಸಾಹಿತ್ಯ ಪ್ರಕಾರವೊಂದು ಪ್ರವೇಶ ಪಡೆಯುವಾಗ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತದೆ. ಅದರ ಬಗ್ಗೆ ಸಮರ್ಥನೆಗಳನ್ನು ನೀಡುತ್ತಲೇ ಸಾಹಿತ್ಯವನ್ನು ಜನರಿಗೆ ಕೊಡುವ ಪ್ರಯತ್ನ ಕರ್ತೃವಿನ ಹೊಣೆ. ಬಿ.ವೆಂಕಟಾಚಾರ್ಯರು ಇದರ ಉದ್ದೇಶ ಹಾಗೂ ಸ್ವರೂಪವನ್ನು ತಮ್ಮ 'ದುರ್ಗೇಶ ನಂದಿನಿಯ'(೧೮೮೫) ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ. "ಕನ್ನಡ ಮಾತನಾಡುವ ಜನಕ್ಕೆ ಇಂಗ್ಲೀಷ್ ನಾವೆಲ್ ರೀತಿಯ ಕೃತಿಯ ಪರಿಚಯವಿಲ್ಲ. ಸಮಾಜದ ಹಾಗು ಅದರ ಅಂಗಭೂತನಾದ ಮನುಷ್ಯನ ಚರಿತ್ರೆ, ನಡತೆಗಳಲ್ಲಿ ಕಂಡುಬರುವ ಅತ್ಯಾಚಾರ, ದುರಾಚಾರ, ಅಸದ್ವ್ಯವಹಾರ, ದುರ್ನಡತೆ ಮುಂತಾದವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ, ಅವುಗಳಿಂದುಟಾಗುವ ವಿಪತ್ತುಗಳನ್ನು ತೋರ್ಪಡಿಸಿ, ಪ್ರತಿಯೊಬ್ಬನೂ ಸಮಾಜದಲ್ಲಿ ಸದ್ಭಾವದಿಂದ ನಡೆದುಕೊಳ್ಳುವುದನ್ನು ತೋರ್ಪಡಿಸ ತಕ್ಕುದಾಗಿರುತ್ತದೆ. ಈ ರೀತಿಯಾದ ಉದ್ದೇಶಗಳು ಮನಸ್ಸಿನಲ್ಲಿ ಅಂಕಿತವಾಗಬೇಕಾದರೆ, ಗ್ರಂಥಗಳನ್ನೋದಿದ ಮಾತ್ರದಿಂದ ಉದ್ದಿಷ್ಟವಾದ ಅದೂ ಭಾವೋದಯಗಳನ್ನುಂಟು ಮಾಡುವ ಹಾಗೆ ಘಟನಾವಳಿಗಳನ್ನು ಕಲ್ಪಿಸಿ ಕೌಶಲದಿಂದ ರಚಿಸಬೇಕು. 'ನಾವೆಲ್ಲ' ಎಂಬುದು ಸಮಾಜದ ಹಾಗೂ ಮನುಷ್ಯ ಚರಿತ್ರೆಯ ಪ್ರತಿಚಿತ್ರವಾಗಿ, ಪ್ರತಿ ಒಬ್ಬ ಪಾಠಕರ ಮನಸ್ಸಿಗೂ ಮುಕುರ ಸ್ವರೂಪವಾಗಿರಬೇಕು."

ಕಾದಂಬರಿಯು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಭಾರತದಲ್ಲಿ ಪ್ರವೇಶವನ್ನು ಪಡೆಯಿತು ಎಂಬುದು ವಿದ್ವಾಂಸರ ವಾದ. ವಸಾಹತುಶಾಹಿ ಆಡಳಿತ ವ್ಯವಸ್ಥೆಯ ಸಂದರ್ಭದಲ್ಲಿ ದೊರೆತ ಇಂಗ್ಲಿಷ್ ಶಿಕ್ಷಣದ ಪ್ರಭಾವ ಹಾಗು ವಾಸ್ತವವಾಗಿ ಭಾರತೀಯ ಮನಸ್ಸುಗಳು ಬಯಸುತ್ತಿದ್ದ ಬದಲಾವಣೆಯ ಸ್ಥಿತಿಗೆ ಪೂರಕವಾಗಿ ಪಾಶ್ಚಾತ್ಯ ಕಾದಂಬರಿಗಳು ಅನುವಾದದ ಮೂಲಕ ಪ್ರವೇಶಿಸಿತು. ಬಂಗಾಳಿಯಲ್ಲಿ ಮೊದಲು ಅನುವಾದದ ಪ್ರಕ್ರಿಯೆ ಆರಂಭವಾಯಿತು. ಬಂಕಿಮಚಂದ್ರರಂತಹ ಕಾದಂಬರಿಕಾರರು ಆ ಪ್ರಕಾರದ ಸ್ವರೂಪ ಹಾಗು ಚಿಂತನೆಗಳನ್ನು ಸ್ಥಳೀಯವಾಗಿದ್ದ ವಿಚಾರಗಳಿಗೆ ಅನ್ವಯಿಸುವ ಮೂಲಕ ಈ ಪ್ರಕಾರವನ್ನು 'ಉಪನ್ಯಾಸಕ್' ಎಂಬ ನಾಮಕರಣದೊಂದಿಗೆ ಸ್ವೀಕರಿಸಿದರು.

ಕನ್ನಡದಲ್ಲಿ ಈ ಪ್ರಕಾರವು ಬಂಗಾಳಿ ಹಾಗೂ ಮರಾಠಿ ಭಾಷೆಗಳ ಪ್ರಭಾವದಿಂದಲೇ ರಚನೆಯಾಯಿತು ಎಂಬುದರಲ್ಲಿ ಸಂದೇಹವಿಲ್ಲ. ಇಲ್ಲಿ ೧೯ನೇ ಶತಮಾನದ ಆರಂಭದಲ್ಲಿಯೇ ಗದ್ಯ ಪ್ರಕಾರವು ವಿಕಾಸದ ಹಂತದಲ್ಲಿ ಕಂಡು ಬರುತ್ತದೆ. ಸಂಸ್ಕೃತದಿಂದ ಅನುವಾದಗೊಂಡ ಮುದ್ರಾಮಂಜೂಷವು ಗದ್ಯ ರೂಪದ ಲಕ್ಷಣಗಳನ್ನು ಹೊಂದಿದೆ. ಆದರೆ ಪಾಶ್ಚಾತ್ಯ ಕಾದಂಬರಿಗಳ ಆಶಯಗಳು ೧೯ನೇ ಶತಮಾನದ ಉತ್ತರಾರ್ಧದ ಕೊನೆಯ ದಶಕಗಳ ಕೃತಿಗಳಲ್ಲಿ ಕಾಣಿಸಿಕೊಂಡಿತು. ಈ ಪ್ರಕಾರವು ನೇರವಾಗಿ ಪ್ರವೇಶವನ್ನು ಪಡೆಯದೆ ಕೆಲವು ಬದಲಾವಣೆಗಳನ್ನು ಬಯಸುತ್ತಿದ್ದ ಹಂತವಾಗಿದೆ. ಯಾವುದೇ ಸಮಾಜವು ಹೊಸದನ್ನು ಸ್ವೀಕರಿಸುವಾಗ ಉಂಟಾಗುವ ಗೊಂದಲಗಳನ್ನು ಆರಂಭದ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಇಲ್ಲಿ ಕೇವಲ ಪ್ರಕಾರವನ್ನು ಕನ್ನಡೀಕರಿಸಿಕೊಳ್ಳುವ ಪ್ರಯತ್ನವಾಗಿರದೆ; ಚಿಂತನೆಗಳು ಭಿನ್ನವಾದ್ದರಿಂದ ಅದರ ಸ್ವೀಕರಣೆ ಮತ್ತು ನಿರಾಕರಣೆಗಳ ದ್ವಂದ್ವ ಕಾಣಿಸಿಕೊಂಡಿತು.

ಪಾಶ್ಚಿಮಾತ್ಯ ಸಾಹಿತ್ಯ ನಿರ್ಮಾಣದ ಸಂದರ್ಭ ಹಾಗೂ ಭಾರತದಲ್ಲಿ ಅವು ಪ್ರವೇಶಗೊಂಡ ಸಂದರ್ಭಗಳ ಚರ್ಚೆ ಮುಖ್ಯವಾದದ್ದು. ೧೮ನೇ ಶತಮಾನದಲ್ಲಿ ಯೂರೋಪಿನಲ್ಲಿ ಉಂಟಾದ ಸಮಸ್ಯೆಗಳ ಒಳಗೆ ಅರಳಿದ ಕಾದಂಬರಿ ಪ್ರಕಾರವು ಭಾರತವನ್ನು ಒಂದು ಒತ್ತಡದ ಸಂದರ್ಭದಲ್ಲಿಯೇ ಪ್ರವೇಶಿಸಿತು. ಬಂಡವಾಳಶಾಹಿ ವ್ಯವಸ್ಥೆ ಮತ್ತು ಕೈಗಾರಿಕಾ ಕ್ರಾಂತಿಯ ಪರಿಸರದಲ್ಲಿ ಯೂರೋಪಿನಲ್ಲಿ ಕಾದಂಬರಿ ಹುಟ್ಟಿಕೊಂಡರೆ, ವಸಾಹತುಶಾಹಿ ಆಡಳಿತ ವ್ಯವಸ್ಥೆಯ ಸಂದರ್ಭದಲ್ಲಿ ಭಾರತದಲ್ಲಿ ಪ್ರವೇಶವನ್ನು ಪಡೆಯಿತು. ಮ್ಯಾಗೇರಿಯವರು "ಯೂರೋಪಿನ ಮತ್ತು ಭಾರತೀಯ ಕಾದಂಬರಿಗಳ ತಾತ್ವಿಕ ಸಮಸ್ಯೆಗಳು ಭಿನ್ನವಾಗಿದ್ದರೂ, ಎರಡರ ಉದ್ದೇಶ ಒಂದು ಸ್ಥಾಪಿತ ವ್ಯವಸ್ಥೆಯನ್ನು ವಿರೋಧಿಸುವುದಾಗಿತ್ತು."(ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು–ಪು. ೬) ಎಂದಿದ್ದಾರೆ.

ರಾಲ್ಫ್‌ಫಾಕ್ಸ್ ಹೇಳುವ ಹಾಗೆ "ಕಾದಂಬರಿ ಬಂಡವಾಳಶಾಹಿ ಸಾಹಿತ್ಯ ಸೃಷ್ಟಿಸಿದ ಅತ್ಯಂತ ವಿಲಕ್ಷಣವಾದ ಸಾಹಿತ್ಯ ಪ್ರಕ್ರಿಯೆ. ಅಷ್ಟೇ ಅಲ್ಲ ಅತ್ಯಂತ ಶ್ರೇಷ್ಠವಾದ ಸೃಷ್ಟಿ ಕೂಡಾ. ಇದು ಆಧುನಿಕ ಕಾಲಕ್ಕೆ ಸಂಬಂಧಿಸಿದ ಪ್ರಕ್ರಿಯೆಯಾಗಿರುವುದರಿಂದ ಬಹಳ ಪ್ರಾಥಮಿಕ ರೂಪದಲ್ಲಿ

ಹೊಸತು. ಸಾಂಸ್ಕೃತಿಕ ಪುನರುಜ್ಜೀವದೊಂದಿಗೆ ಪ್ರಾರಂಭವಾದ ಆಧುನಿಕ ಯುಗಕ್ಕೆ ಹಿಂದಿನ ಕಾಲದಲ್ಲಿ ಇದ್ದಿರಲಿಲ್ಲ. ಇತರ ಆಧುನಿಕ ಸಾಹಿತ್ಯ ಪ್ರಕಾರಗಳಂತೆಯೇ ಕಾದಂಬರಿ ಕೂಡಾ ಮಾನವನ ಪ್ರಜ್ಞಾ ಪರಿಧಿಯನ್ನು ವಿಶಾಲಗೊಳಿಸುವುದಕ್ಕೆ, ಆಳಗೊಳಿಸುವುದಕ್ಕೆ ನೆರವಾಯಿತು. ಪ್ರಾಚೀನ ಮಹಾಕಾವ್ಯವು ವೀರಗಾಥೆಗಳ ಕಾವ್ಯವಾಗಿ ಪುನರ್ಜನ್ಮವೆತ್ತಿತು. ವೀರಗಾಥೆಗಳಿಗೆ ಜನ್ಮ ನೀಡಿದ ಸಮಾಜ ಕೂಡ ಅದೃಶ್ಯವಾಗಿ ಹೋದ ನಂತರ ಕಾದಂಬರಿ ಬಂದಿತು. ಅದು ಕೂಡಾ ಮಹಾಕಾವ್ಯದ ಮಾದರಿಯಲ್ಲಿಯೇ. ಆದರೆ ಅದು ಹೊಸ ಮಾನವನ ಬಯಕೆಗಳಿಗೆ ರೂಪ ಕೊಡುವುದಕ್ಕೆ ಪ್ರಕ್ಷುಬ್ಧವಾಗಿದ್ದ ಹೊಸ ಪ್ರಪಂಚಕ್ಕೆ ಕನ್ನಡಿ ಹಿಡಿಯುವುದಕ್ಕೆ ರೂಪುಗೊಂಡಿತು." (ವಸಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು-ಪು. ೧೦೩)

ಇದು ಕನ್ನಡದ ಹೊಸ ಚಿಂತನೆಗಳ ಸಂದರ್ಭಕ್ಕೆ ಕೂಡ ಅನ್ವಯವಾಗುವಂತಹದ್ದು. ಒಂದು ಒಪ್ಪಿತ ಸಮಾಜದ ನಿಯಮಗಳನ್ನು ಪ್ರಶ್ನಿಸುತ್ತಲೇ ಹೊಸ ಚಿಂತನೆಗಳನ್ನು ಮೈಗೂಡಿಸಿಕೊಂಡು ಕಾದಂಬರಿ ರಚನೆಯಾದದ್ದು. ಉದಾಹರಣೆಗೆ ಆಧುನಿಕ ಶಿಕ್ಷಣ, ಸ್ತ್ರೀ ಶಿಕ್ಷಣ, ಬಾಲ್ಯ ವಿವಾಹ, ವಿಧವಾ ವಿವಾಹ, ಸ್ತ್ರೀ ಸ್ವಾತಂತ್ರ್ಯ ಮುಂತಾದವು. ಇಂದಿರಾ ಕಾದಂಬರಿಯ ಮುನ್ನುಡಿಯಲ್ಲಿ ಕೆರೂರರು "ಹೇಗೆ ಇರಲಿ. ಈಗಿದ್ದ ಪದ್ಧತಿಯಂತೆ ಕಲಿತು ವಿದ್ಯಾಸಂಪನ್ನೆಯರಾದ ತರುಣಿಯರಲ್ಲಿ ಸ್ತ್ರೀ ಜಾತಿಗೆ ಕುಂದು ತಾರದೆ ವಿನಯ ಸಂಪನ್ನೆಯರಾಗಿ ಉಭಯ ಕುಲಕ್ಕೂ ಆನಂದವನ್ನೀಯುವ ಅನೇಕ ಕುಲವಧುಗಳನ್ನು ನಿತ್ಯ ನೋಡುತ್ತೇವೆ. ಆದರೆ ಸಮಾಜದ ಸದ್ಯಃಸ್ಥಿತಿಯನ್ನು ಧಿಕ್ಕರಿಸಿ ಸ್ತ್ರೀಯರು ಪುರುಷರಿಗಿಂತಲೂ ಒಂದು ತೂಕ ಹೆಚ್ಚು ಸ್ವತಂತ್ರರಾಗಿರಬೇಕು. ಅನ್ಯದೇಶದ ಸ್ತ್ರೀಯರಂತೆ ಉಡಿಗೆ ತೊಡಿಗೆ ಆಹಾರ ವಿಹಾರಗಳನ್ನು ಮಾಡತಕ್ಕದ್ದು. ಇದುವರೆಗೆ ಪುರುಷರಿಗೆ ಸಲ್ಲುತ್ತ ಬಂದ ಮರ್ಯಾದೆಯು ಇನ್ನು ಮುಂದವರಿಗೆ ಸಲ್ಲಲವಶ್ಯವಿಲ್ಲ. ಮುಂತಾದ ಹೀನ ವಿಚಾರಗಳನ್ನು ತಲೆಯಲ್ಲಿ ಹಾಕಿಕೊಂಡು ತಮ್ಮ ನಿಸರ್ಗ ರಮಣೀಯತೆಗೆ ಹೆಚ್ಚು ಶೋಭೆಯನ್ನು ಕೊಡುವ ಮರ್ಯಾದೆಯನ್ನು ಬಿಸುಟಿ ಸಮಾಜದ ಸೌಕರ್ಯವನ್ನು ಹಾಳು ಮಾಡತೊಡಗಿದ ಸ್ವೈರಿಣಿಯರು ಕೂಡ ತುಟ್ಟಿಯಾಗಿಲ್ಲ ............ ಆದ ಕಾರಣ ಸ್ತ್ರೀ ಶಿಕ್ಷಣದ ಕ್ರಮದಲ್ಲಿದ್ದ ದೋಷಗಳನ್ನು ತೆಗೆದು ಹಾಕಿ ಇನ್ನೂ ಉಚ್ಚ ಸ್ಥಿತಿಗೆ ತರುವ ಮಹತ್ಕಾರ್ಯದಲ್ಲಿ ಎಷ್ಟೋ ಜನ ವಿಚಾರಶಾಲಿಗಳಾದ ದೇಶ ಸೇವಕರು ನಿರತರಾಗಿದ್ದಾರೆ..."(ಇಂದಿರಾ-ಮುನ್ನುಡಿ) ಇಲ್ಲಿ ಸ್ತ್ರೀ ಶಿಕ್ಷಣದ ಮಹತ್ವ ಹಾಗು ಪರಕೀಯ ಸಮಾಜದಲ್ಲಿ ಹೆಣ್ಣು ಮಕ್ಕಳ ಸ್ಥಾನಮಾನ ಇರುವಂತೆ ಇಲ್ಲಿನ ಸ್ತ್ರೀಯರಿಗೂ ಸಮಾನತೆ ಇರಬೇಕೆಂಬ ಧೋರಣೆಯನ್ನು ಕಾಣಬಹುದಾಗಿದೆ. ಇದರ ಜೊತೆಗೆ ಬಾಲ್ಯ ವಿವಾಹ ಕುರಿತು ಹೀಗೆ ಹೇಳಿದ್ದಾರೆ. "ಬಾಲ್ಯದಲ್ಲಿಯೆ ಕನ್ನಿಕೆಯರ ವಿವಾಹವು ಉಚಿತವಾದದ್ದಲ್ಲ. ಹದಿನಾರು ಹದಿನೆಂಟು ವರುಷದ ಪ್ರಾಯ ಬಳಿಕ ವಧುಗಳ ವಿವಾಹ ಮಾಡತಕ್ಕದ್ದು ಯುಕ್ತವೆಂದು ವಿದ್ಯಾಮಂಡಿತವಾದ ಪ್ರಾಂತಗಳಲ್ಲಿ ಪಂಡಿತರಾದ ಸ್ತ್ರೀ ಪುರುಷರ ಅಭಿಪ್ರಾಯವಿರುವುದು. ಇವರ ಸೆರಗು ವಿದ್ಯೆಯಲ್ಲಿ ಹಿಂದುಳಿದ ಪ್ರಾಂತಗಳ ಮೇಲಾದರು ಬೀಳುತ್ತಾ ನಡೆದಿದೆ. ಇಂಥ ಪ್ರೌಢ ಕನ್ನಿಕೆಯರ ವಿವಾಹಕ್ಕೆ ಶಾಸ್ತ್ರ ಸಮ್ಮತಿ ಕೂಡ ಇರುವುದೆಂದು ಕೆಲವು ಜನ ಪಂಡಿತರು ನಮಗೆ ಹೇಳಿ ನಮ್ಮಲ್ಲಿ ನಂಬಿಕೆಯನ್ನುಂಟು ಮಾಡತೊಡಗಿರುವರು".(ಇಂದಿರಾ-ಮುನ್ನುಡಿ) ಭಾರತೀಯ

ಸಮಾಜದಲ್ಲಿದ್ದ ಹೆಣ್ಣು ಮಕ್ಕಳ ಬಗೆಗಿನ ಧೋರಣೆಗಳು ಪಾಶ್ಚಾತ್ಯ ಸಾಹಿತ್ಯದ ಅನುವಾದದ ಪ್ರಭಾವದಿಂದಾಗಿ ಸಾಕಷ್ಟು ಬದಲಾದವು. ಬಾಲ್ಯ ವಿವಾಹದ ಅನರ್ಥತೆಯ ಜೊತೆಗೆ ವಿಧವೆಯರ ಪುನರ್ವಿವಾಹ ಹಾಗು ವಿಧವೆಯರ ವಪನದ ಬಗ್ಗೆ ಕೂಡ ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಭಾರತದಲ್ಲಿ ಇಂತಹ ಆಲೋಚನೆ ಮತ್ತು ಪ್ರತಿಭಟನೆ ಆರಂಭವಾಗಿದ್ದು ಬಂಗಾಳದಲ್ಲಿ. ರಾಜರಾಮ ಮೋಹನ ರಾಯರಂತಹ ಅನೇಕರು ಇಂತಹ ಚಿಂತನೆಗಳನ್ನು ದೇಶಾದ್ಯಂತ ಹರಡುವಂತೆ ಮಾಡಿದರು.

ಕೆರೂರರು ಮೂಲತಃ ಇಂಗ್ಲಿಷ್ ಬಲ್ಲವರಾಗಿದ್ದು ಪಾಶ್ಚಾತ್ಯ ಕಾದಂಬರಿಗಳನ್ನು ಓದಿದವರಾಗಿದ್ದರು. ಇವರ ಕಾದಂಬರಿಗಳು ಬಂಕಿಮಚಂದ್ರ, ಹರಿನಾರಾಯಣ ಆಪ್ಟೆಯವರ ಕಾದಂಬರಿಗಳು ಇಂಥಹುದೆ ಪ್ರಭಾವದಿಂದ ರಚನೆಯಾದದ್ದಾಗಿವೆ. ಅಲ್ಲದೆ ಸ್ಥಳೀಯ ಸುಧಾರಣ ಚಳುವಳಿಗಾರರು ಇಂಥಹ ವಿಚಾರಗಳ ಬಗ್ಗೆ ತಮ್ಮದೆ ಆದ ನಿಲುವುಗಳನ್ನು ಸಮಾಜದಲ್ಲಿ ನೆಲೆಗೊಳಿಸುವ ಪ್ರಯತ್ನ ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಜನಜಾಗೃತಿಯನ್ನು ಉಂಟುಮಾಡುವುದು ಸಾಹಿತ್ಯದ ಮೂಲ ಕರ್ತವ್ಯವಾಗಿತ್ತು. ವಸಾಹತುಶಾಹಿ ಸಂದರ್ಭವು ಸಾಮಾನ್ಯರಿಗೂ ಶಿಕ್ಷಣವನ್ನು ಒದಗಿಸಿದ್ದರಿಂದ ಸಾಹಿತ್ಯವನ್ನು ಓದುವ ಬರೆಯುವ ಪರಿಸರ ನಿರ್ಮಾಣವಾಯಿತು. ಅಲ್ಲದೆ ಕಾದಂಬರಿಯು ತನ್ನ ಸರಳತೆಯ ಅಂಶದಿಂದಲೇ ಜನರ ಮೆಚ್ಚುಗೆಯನ್ನು ಪಡೆಯಿತು. ನೇರವಾಗಿಯೆ ಅರ್ಥವಾಗುವ, ತಮ್ಮ ಜೀವನದ ಭಾಗವೆಂಬತೆ ಅನಿಸುವ ಕಥಾ ಹಂದರವು ಜನರನ್ನು ಆಕರ್ಷಿಸಿತು.

### ಕಾದಂಬರಿ ಪ್ರಕಾರ ಮತ್ತು ಸ್ವೀಕರಣೆ:

ಯಾವುದೇ ಹೊಸತನವು ಒಂದು ಪರಿಸರದಲ್ಲಿ ಪ್ರವೇಶವನ್ನು ಪಡೆಯಬೇಕಾದರೆ ಅನೇಕ ಹಂತಗಳನ್ನು ದಾಟಬೇಕಾಗುತ್ತದೆ. ಅದರಲ್ಲೂ ಭಾರತೀಯ ಪರಿಸರದಲ್ಲಿ ಅನೇಕ ಗೊಂದಲಗಳ, ಪ್ರಶ್ನೆಗಳ ನಡುವೆ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಕಾಲಾವಧಿ ಬೇಕಾಗುತ್ತದೆ. ಅಂತೆಯೇ ಕಾದಂಬರಿಯು ತನ್ನ ಖಚಿತ ಸ್ವರೂಪವನ್ನು ಪಡೆಯಲು ಒಂದು ಶತಮಾನವೇ ಬೇಕಾಯಿತು. ೧೯ನೇ ಶತಮಾನದ ಆರಂಭದಲ್ಲಿ ಬಂಗಾಳಿ ಭಾಷೆಯ ಮೂಲಕ ಈ ಪ್ರಕಾರ ಭಾರತವನ್ನು ಪ್ರವೇಶಿಸಿತು. ನಂತರದಲ್ಲಿ ಮರಾಠಿ, ತೆಲುಗು, ತಮಿಳು ಹಾಗೂ ಕನ್ನಡದಲ್ಲಿ ನೇರವಾಗಿ ಇಲ್ಲವೇ ಅನುವಾದದ ಮೂಲಕ ಪ್ರವೇಶವನ್ನು ಪಡೆಯಿತು.

ವೆಂಕಟರಂಗೋ ಕಟ್ಟಿಯವರು "ಭಾಷೆಯ ಅಭಿವೃದ್ಧಿ ಆಗಬೇಕಾದರೆ ಸಾಧ್ಯವಾದಷ್ಟು ಜನಮಂಡಲಿಗೆ ವಿದ್ಯಾಪ್ರವೀಣತೆ ಉಂಟಾಗಲೇ ಬೇಕು. ಸುಲಭವಾಗಿ ಅವಗಾಹನ ಶಕ್ಯವಲ್ಲದ, ಪದ್ಯಾತ್ಮಕ ಮಹಾಕಾವ್ಯಗಳನ್ನು ಓದುವುದು ಎಂದರೆ ಆಕಾಶಕ್ಕೆ ಏಣಿ ಹಾಕುವುದೇ ಸೈ. ಉತ್ತಮ ನಾಯಕನನ್ನು ಹೊಗಳುವುದೇ ತಮ್ಮ ಕರ್ತವ್ಯವೆಂದು ತಿಳಿದ ಹಳೆಯ ಕವಿಗಳು ಎಲ್ಲ ಪದ್ಯ, ಕಥೆ ಪುರಾಣಗಳನ್ನು ಅತಿಶಯೋಕ್ತಿ ತುಂಬಿದ ಒಂದೇ ಅಚ್ಚಿನಲ್ಲಿ ಕೆತ್ತಿದ ಒಡವೆಗಳಂತೆ ರಚಿಸಿದರು."(ಹೊಸಗನ್ನಡ ಸಾಹಿತ್ಯದ ಉದಯಕಾಲ-ಪು. ೧೨೩) ಈ ಹೇಳಿಕೆ ಕನ್ನಡ ಸಾಹಿತ್ಯದ

ಸಂದರ್ಭದಲ್ಲಿ ಸತ್ಯವಾಗಿದೆ. ಪಂಪ, ರನ್ನ, ಕುಮಾರವ್ಯಾಸ, ರಾಘವಾಂಕ ಮುಂತಾದವರ ಕಾವ್ಯಗಳು ಈ ಮಾದರಿಯಲ್ಲಿಯೇ ಇವೆ. ಲೌಕಿಕ ಇಲ್ಲವೆ ಧಾರ್ಮಿಕ ಕಾವ್ಯಗಳು ಒಂದೇ ದೃಷ್ಟಿಕೋನದಲ್ಲಿ ರಚನೆಯಾಗಿವೆ. ನಂತರದಲ್ಲಿ ಬಂದಂತಹ ಅನೇಕ ಕಾವ್ಯಗಳು ಈ ಕೃತಿಗಳ ಪಡಿನೆರಳಲ್ಲಿ ಬೆಳೆದಂತವುಗಳೇ ಆಗಿವೆ. ಆದರೆ ವಾಸ್ತವ ಜಗತ್ತಿನ ವಿಚಾರಗಳ ಕುರಿತ ಕಾವ್ಯಗಳ ಕೊರತೆ ಅಂದಿನ ಸಾಹಿತ್ಯದ ಬಹು ದೊಡ್ಡ ದೋಷ. ಈ ಕುರಿತು ಚಿಂತಕನೊಬ್ಬ ಹೇಳಿದ ಮಾತು ಹೀಗಿದೆ–"ಐಹಿಕ ಸಾಧನವಾಗಿಯೂ, ಲೋಕದ ವಾಸ್ತವ ಗುಣವರ್ಣನ ಪರವಾಗಿಯೂ ಇರುವ ಇತಿಹಾಸದ ಕಾದಂಬರಿ ಲೇಖನವು ಆಂಗ್ಲೀಯರಲ್ಲಿ ಅನಾದಿ ಕಾಲದಿಂದಲೂ ಉಂಟು. ಅಕ್ಷರ ಜ್ಞಾನವುಂಟಾದವರಲ್ಲಿ ಅನೇಕ ಮಂದಿ ಈ ತರದ ಪುಸ್ತಕಗಳನ್ನೊದಿ ಪಾಂಡಿತ್ಯವನ್ನು ಸಂಪಾದಿಸಿಕೊಳ್ಳುವರು... ಕಾದಂಬರಿಗಳು ಕವಿಯ ಬುದ್ಧಿಕೌಶಲ್ಯವಿದ್ದಷ್ಟು ಊಹಿಸಿ ಬರೆಯತಕ್ಕ ಪ್ರಮೇಯಗಳಾಗಿರುವುದು ..... ಈಚೆಗೆ ನಮ್ಮ ದೇಶದಲ್ಲಿ ಇಂಗ್ಲಿಷು ಭಾಷೆಯನ್ನಭ್ಯಾಸ ಮಾಡಿದ ಗೃಹಸ್ಥರನೇಕರು ದೇಶ ಭಾಷೆಯಲ್ಲಿ ಸ್ತೋತ್ರಾರ್ಹವಾದ ಕಾದಂಬರಿಗಳನ್ನು ರಚಿಸಿರುವರು. ಪ್ರಪಂಚಾನುಭವವೂ ಪೂರ್ವೋತ್ತರ ವಿಚಾರಗಳೂ, ಮುಕ್ತಿಚಾತುರ್ಯಗಳೂ, ಮನುಷ್ಯನಿಗೆ ಹುಟ್ಟಬೇಕಾದರೆ ಅನೇಕ ಪುಸ್ತಕಗಳನ್ನೊಂದಿಕೊಂಡ ಹೊರತು ಸಾಧ್ಯವಾಗಲಾರದು".(ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ–ಪು. ೬೨ ಇವರ ಕಾಲ ೧೯೦೦. ಲೇಖನದ ಲೇಖಕನ ಹೆಸರು ಗೊತ್ತಿಲ್ಲ.)

ಇಂತಹ ಹೊಸ ಆಲೋಚನೆ ಹಾಗೂ ಹೊಸ ಮಾದರಿಯು ದೊರೆತ್ತಿದ್ದು ಪಾಶ್ಚಾತ್ಯ ಸಾಹಿತ್ಯದ ಮೂಲಕ. ಈ ಪ್ರಕಾರಕ್ಕೆ ಕಾದಂಬರಿ ಎಂಬ ಹೆಸರನ್ನು ಸೂಚಿಸಿದ್ದರ ಹಿನ್ನೆಲೆಯ ಬಗ್ಗೆ ಅಂದಿನ ಪತ್ರಿಕೆಗಳಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ೧೯೦೦ರಲ್ಲಿ ಸುಹಾಸಿನಿ ಪತ್ರಿಕೆಯಲ್ಲಿ 'ಕಾದಂಬರೀ ಲೇಖನ' ಎಂಬ ಲೇಖನದಲ್ಲಿ ಹೀಗೆ ಚರ್ಚಿಸಿದ್ದಾರೆ. "ಕರ್ಣಾಟಕ ಭಾಷೆಯಲ್ಲಿ ಗದ್ಯಲೇಖನವೇ ಅಪರೂಪ. ಅದರೊಳಗೂ ಯುಕ್ತಿಯಿಂದೂಹಿಸಿ ಬರೆಯುವ ಕಲ್ಪನಾ ಪ್ರಬಂಧಗಳೇ ಇರಲಿಲ್ಲ. ಸಂಸ್ಕೃತದಲ್ಲಿ ಬಾಣಭಟ್ಟನೆಂಬ ಕವಿ 'ಕಾದಂಬರಿ' ಎಂಬ ಹೆಸರಿನ ಚೆಲೋ ಕಥೆಯ ಪೂರ್ವಭಾಗವನ್ನು, ಆತನ ಮಗನು ಉತ್ತರಭಾಗವನ್ನು ರಚಿಸಿದರು. ಅದರಿಂದೀಚೆಗೆ ಇಂತಹ ಕಥೆಗಳಿಗೆಲ್ಲಾ ಕಾದಂಬರಿ ಎಂದು ರೂಢನಾಮವಾಯಿತು. ದೇಶೋನ್ನತಿಗೆ ಬೇಕಾದ ಉಪಕರಣಗಳಲ್ಲಿ ಭಾಷಾಭಿವೃದ್ಧಿಯ ಸಫಲವಾದ ವ್ಯವಸಾಯವು ಮುಖ್ಯವಾದುದು. ಭಾಷಾಭಿವೃದ್ಧಿಯಾಗಬೇಕಾದರೆ ಸಾಧ್ಯವಾದಷ್ಟು ಜನಮಂಡಲಿಗೆ ವಿದ್ಯಾಪ್ರವೀಣತೆ ಉಂಟಾಗಬೇಕು. ಅಂತಹವರು ಮೊತ್ತ ಮೊದಲು ಕ್ಲಿಷ್ಟ ಪದಭರಿತವಾದ ಸುಲಭವಗಾಹನಶಕ್ಯವಲ್ಲದ ಪದ್ಯಾತ್ಮಕ ಮಹಾಕಾವ್ಯಗಳನ್ನೋದುವುವೆಂದರೆ ಆಕಾಶಕ್ಕೇ ಏಣಿ ಹಾಕಿ ಏರಲು ಪ್ರಯತ್ನಿಸಿದ ಹಾಗೆಯೇ ಸೈ. ಆದುದರಿಂದಲೇ ಪೂರ್ವದಲ್ಲಿ ನೂರಕ್ಕೊಬ್ಬರು ಸಾವಿರಕ್ಕೊಬ್ಬರು ದೀರ್ಘಕಾಲ ವ್ಯಾಸಂಗಗಳಿಂದ ಉದ್ಗ್ರಂಥಗಳನ್ನೋದಿ ಪರಿಚಿತರಾಗುತ್ತಿದ್ದರು. ಅಂತಹವರು ಪುರಾಣಾದಿಗಳನ್ನು ಹೇಳಿದರೆ ಮಿಕ್ಕವರು ಕೇಳಿ ಅರ್ಧಜ್ಞಾನವುಂಟಾಗಿ, ಮಸನ ಕೀರ್ತನಗಳಿಗೆ ಆಸ್ಪದವಿಲ್ಲದಿದ್ದರೂ, ಸದ್ಯದಲ್ಲಿ ಆನಂದಪಡುತ್ತಿದ್ದರು. ಆ ಪಂಡಿತರು ಕಾವ್ಯಾಲಪವನ್ನು ಬಿಡಬೇಕೆಂದು ಹೇಳುವ ಪಂಕ್ತಿಯನ್ನು ಗಟ್ಟಿಯಾಗಿ ಹಿಡಿದುಕೊಂಡು

ಉತ್ತಮ ನಾಯಕಸ್ತನವೇ ತಮಗೆ ಕರ್ತವ್ಯವೆಂದು ಚಾನಸದಿಂದ ಭಗವತ್ಸರವಾದ ನಾಮಾಂತರಗಳಿದೊಪ್ಪುವ ರಾಮಾಯಣ, ಭಾಗವತ, ಭರತಾದಿ ಪುರಾಣಗಳನ್ನೂ, ಅತಿಶಯೋಕ್ತಿ ಪುಂಜವಾದ ಕಿರಾತಾರ್ಜುನೀಯ, ವೃಷಭೇಂದ್ರವಿಜಯ, ಮೊದಲಾದ ಕಾವ್ಯಗಳನ್ನು ಒಂದೇ ಅಚ್ಚಿನಲ್ಲಿ ಕೆತ್ತಿದ ಒಡವೆಗಳಂತೆ ರಚಿಸಿದರೇ ಹೊರತು, ಐಹಿಕ ಸಾಧಕವಾಗಿಯೂ, ಪಾಮರಜನ ಪಠನೀಯವಾಗಿಯೂ, ಲೋಕದ ಪಾತ್ರವ ಗುಣವರ್ಣನ ಪರವಾಗಿಯೂ ಇರುವ ಇತಿಹಾಸಗಳನ್ನು ಬರೆಯಲಿಲ್ಲ... ಕಾದಂಬರೀ ಲೇಖನವು ಆಂಗ್ಲೀಯರಲ್ಲಿ ಅನಾದಿಕಾಲದಿಂದಲೂ ಉಂಟು. ಅಕ್ಷರಜ್ಞಾನವುಂಟಾದವರಲ್ಲಿ ಅನೇಕ ಮಂದಿ ಸುಲಭಕ್ರಮಕ್ಕೆ ಸಿಕ್ಕುವ ಈ ತೆರೆದ ಪುಸ್ತಕಗಳನ್ನೋದಿ ಪಾಂಡಿತ್ಯವನ್ನು ಸಂಪಾದಿಸಿಕೊಳ್ಳುವರು.... ಈಚೆಗೆ ನಮ್ಮ ದೇಶದಲ್ಲಿ ಇಂಗ್ಲೀಷು ಭಾಷೆಯನ್ನಾಭ್ಯಾಸ ಮಾಡಿದ ಗೃಹಸ್ಥರನೇಕರು ದೇಶಭಾಷೆಯಲ್ಲಿ ಸ್ತೋತ್ರಾರ್ಹವಾದ ಕಾದಂಬರಿಗಳನ್ನು ರಚಿಸಿರುವರು...."(ಜೂನ್‌ನ ಸಂಚಿಕೆ)

ಇದಲ್ಲದೆ ಈ ಪ್ರಕಾರಕ್ಕೆ ವಚನ ಪ್ರಬಂಧ, ವಿಚಿತ್ರ ನೂತನ ಪ್ರಬಂಧ, ನಲ್ಗತೆ, ನೀಳ್ಗತೆ, ನವಕತೆ, ನವನ್ಯಾಸ, ಕಲ್ಪನಾ ಪ್ರಬಂಧ, ಕರ್ಣಾಟಕ ವಚನಕಾವ್ಯ, ಚರಿತ್ರೆ ಮುಂತಾದ ಹೆಸರಿನಿಂದ ಕರೆಯಲಾಗಿದೆ. 'ಕಾದಂಬರಿ' ಎಂಬ ಹೆಸರು ಕನ್ನಡದಲ್ಲಿ ಮೊದಲು ಬಳಸಿದ್ದು ಲಕ್ಷ್ಮಣ ಭೀಮರಾವ್ ಗದಗಕರ್‌ರವರು ೧೮೯೨ರಲ್ಲಿ ರಚಿಸಿದ 'ಸೂರ್ಯಕಾಂತ'ದಲ್ಲಿ. ನಂತರ ಇವರೆ ೧೮೯೬ರಲ್ಲಿ ತಮ್ಮ ಇನ್ನೊಂದು ಕಾದಂಬರಿಯಾದ 'ಚಂದ್ರಪ್ರಭಾ'ದಲ್ಲಿ ಬಳಸಿದ್ದಾರೆ. ನಂತರ ಮುಂದಿನ ಕಾದಂಬರಿಗಳಾದ ಪ್ರಬುದ್ಧ ಪದ್ಮನಯನಾ, ಕನ್ನಡ ಶೌರ್ಯಸಾಗರ ಮುಂತಾದ ಕೃತಿಗಳಲ್ಲಿ ಬಳಕೆಯಾಯಿತು. ಆದರೆ ಈ ಹೆಸರು ಮೊದಲು ಕಂಡುಬರುವುದು ೧೮೬೯ರಲ್ಲಿ ಪ್ರಕಟವಾದ ಮರಾಠಿಯ 'ವಿಚಿತ್ರ ಪುರಿ' ಎಂಬ ಕೃತಿಯಲ್ಲಿ. ಶ್ರೀನಿವಾಸ ಹಾವನೂರರು ಇದೆ ಮೊದಲು ಬಳಕೆಯಾದದ್ದು ಎಂದಿದ್ದಾರೆ.(ಹೆಚ್ಚಿನ ಮಾಹಿತಿಗೆ ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೦೯ ನೋಡಿ)

ಕನ್ನಡದ ಸಂದರ್ಭದಲ್ಲಿ ಮರಾಠಿ ಹಾಗೂ ಬಂಗಾಳಿಗೆ ಹೆಚ್ಚು ಋಣಿಯಾಗಿರುವುದನ್ನು ಕಾಣಬಹುದಾಗಿದೆ. ಮೊದಲ ಕಾದಂಬರಿಯೆಂದರೆ ಬಾಬಾ ಪದಮಂಜಿಯವರ ಯಮುನಾಬಾಯಿ ಸಂಚಾರ. ಇದು ೧೮೬೯ರಲ್ಲಿ ಅನುವಾದಗೊಂಡಿತು. ಇದು ಮರಾಠಿಯ ಪ್ರಥಮ ಕಾದಂಬರಿಯಾಗಿದೆ. ನಂತರದಲ್ಲಿ ಬಂಗಾಳಿಯ 'ದುರ್ಗೇಶ ನಂದಿನಿ'ಯು ೧೮೮೫ರಲ್ಲಿ ಕನ್ನಡಕ್ಕೆ ಅನುವಾದವಾಯಿತು. ಬಿ.ವೆಂಕಟಾಚಾರ್ಯರವರು ಇದರ ಮುನ್ನುಡಿಯಲ್ಲಿ ತಮ್ಮ ಅನುವಾದದ ಉದ್ದೇಶವನ್ನು ಹೀಗೆ ಹೇಳಿದ್ದಾರೆ:

"A novel in the sense it is understood in English is not familiar to the kenerese speaking public" ಅಂದರೆ "ಇಂಗ್ಲಿಷ್‌ನಲ್ಲಿರುವ ನಾವೆಲನ್ನು ಕನ್ನಡ ಮಾತಾಡುವ ಜನರು ಅರ್ಥಮಾಡಿಕೊಳ್ಳಲು ಸಾಧ್ಯವಾಗದೆ ಇರುವ ಕಾರಣ ಕನ್ನಡೀಕರಿಸುವ

ಪ್ರಯತ್ನವೆಂದಿದ್ದಾರೆ." (ಹೊಸಗನ್ನಡದ ಅರುಣೋದಯ-ಪು. ೫೩೭). ಆದರೆ 'ದುರ್ಗೇಶ ನಂದಿನಿ' ಇಂಗ್ಲಿಷ್‌ನ ನೇರ ಅನುವಾದವಾಗಿರದೆ ಬಂಗಾಳಿಯ ಅನುವಾದವಾಗಿದೆ.

ಇಲ್ಲಿ ವೆಂಕಟಾಚಾರ್ಯರು ತಮ್ಮ ಆಲೋಚನೆಗಳನ್ನು ವ್ಯಕ್ತಪಡಿಸಲು ಈ ಪ್ರಕಾರವು ಬಹಳ ಸೂಕ್ತವೆಂದು ಭಾವಿಸಿದ್ದಾರೆ. ಸರಳ ಭಾಷೆ ಹಾಗೂ ತಮ್ಮ ವಿಚಾರಗಳನ್ನು ಜನರಿಗೆ ತಲುಪಿಸಲು ಬೇಕಾದ ವಿಸ್ತಾರವಾದ ಭೂಮಿಕೆ ಎಂದು ತಿಳಿಸಿದರು. ಸಮಾಜದ ಅನೇಕ ಚಿಂತಕರ ಧೋರಣೆಯೂ ಇದೆ. ಏಕೆಂದರೆ ಮುಂದೆ ರಚನೆಯಾದಂತಹ ಅನುವಾದ ಹಾಗೂ ಸ್ವತಂತ್ರ ಕೃತಿಗಳು ಈ ರೀತಿಯ ಪ್ರಯತ್ನಗಳೇ ಆಗಿವೆ. ರಾಲ್ಫ್‌ಪಾರ್ಕ್ಸ್‌ನ ಹೇಳಿಕೆಯನ್ನು ಇಲ್ಲಿ ಗಮನಿಸಬಹುದಾಗಿದೆ. ೧೯ನೇ ಶತಮಾನದವರೆಗೂ ಕನ್ನಡದಲ್ಲಿ ಸಾಕಷ್ಟು ಸಾಹಿತ್ಯ ಕೃತಿಗಳು ರಚನೆಯಾಗಿದ್ದವು. ಆದರೆ ಅವು ಸಹೃದಯರಿಗೆ ಆನಂದವನ್ನು ನೀಡಿರಲಿಲ್ಲ. ಹೊಸತನದ ಕೊರತೆ ಕಾಣುತಿತ್ತು. ಇದಲ್ಲದೆ ಅದುವರೆಗೂ ಇದ್ದಂತಹ ಮಹಾಕಾವ್ಯಗಳ ಸ್ಥಾನವನ್ನು ತುಂಬುವಂತಹ ಮತ್ತೊಂದು ಸಾಹಿತ್ಯ ಪ್ರಕಾರದ ಅವಶ್ಯಕತೆಯನ್ನು ಜನ ಬಯಸಿದ್ದರು. ವಿದ್ಯಾವರ್ಧಕ ಸಂಘದ ಕಾರ್ಯೋದ್ದೇಶಗಳಲ್ಲಿ ಹೀಗೆ ತಿಳಿಸಿದೆ. "ಹಿಂದುಸ್ಥಾನದ ಎಲ್ಲಾ ಭಾಷೆಗಳಲ್ಲಿ ಕನ್ನಡವು ಹಳೆಯದಿರುತ್ತದೆ. ಕನ್ನಡ ಮಾತನಾಡುವ ಜನರ ಸಂಖ್ಯೆಯು ೧ ಕೋಟಿ ೧೦ ಲಕ್ಷ ಇರುತ್ತದೆ. ೬ನೇ ಶತಮಾನದಿಂದ ಈ ಭಾಷೆಯಲ್ಲಿ ಎಷ್ಟೋ ಹೆಸರಾದ ಕವಿಗಳು ಆಗಿ ಹೋದರು. ಅವರಿಂದ ದೊಡ್ಡ ದೊಡ್ಡ ಗ್ರಂಥಗಳು ರಚಿಸಲ್ಪಟ್ಟಿವೆ. ಆದರೂ ಅವುಗಳನ್ನು ಓದಬೇಕೆನ್ನುವ ಲವಲವಿಕೆಯು ಈಗಿನ ಕನ್ನಡಿಗರಲ್ಲಿ ತಕ್ಕಷ್ಟು ಇಲ್ಲ. ಇದರಿಂದ ಹೊಸ ಗ್ರಂಥಗಳಾವುದು ಒತ್ತಟ್ಟಿಗೆ ಇರಲಿ! ಇದ್ದ ಹಳೆ ಗ್ರಂಥಗಳು ಕೂಡ ಮೂಲಿಗೆ ಬೀಳುತ್ತಲಿವೆ." ಅದರೊಟ್ಟಿಗೆ ೧೮೯೧ರಲ್ಲಿ "ಕನ್ನಡದಲ್ಲಿ ಹೊಸ ಕಾದಂಬರಿಯನ್ನು ಗಂಗಾಧರಯ್ಯನವರ ಕಾದಂಬರಿಯಷ್ಟಾಗಲಿ, ಹೆಚ್ಚಾಗಲಿ ಎಲ್ಲಕ್ಕೂ ಉತ್ತಮವಾಗಿ ಬರೆದವನಿಗೆ ರಾ.ರಾ.ಶಾಂತ ವೀರಪ್ಪ ಮೆಣಸಿನಕಾಯಿ ರೂ೧೦, ರಾ.ರಾ.ವಿರೂಪಾಕ್ಷಪ್ಪ ಹೂಲಿ ೧೦, ರಾ.ರಾ.ಶಿವನಪ್ಪ ದೇಸಾಯಿ ೧೦, ಈ ಪ್ರಕಾರ ಮೂವತ್ತು ರೂಪಾಯಿ ಇನಾಮು ಕೊಡುತ್ತೇವೆಂದು ಜಾಹೀರ ಮಾಡಿದ್ದನ್ನು ಸಭೆಯವರು ಆಭಾರಪೂರ್ವಕವಾಗಿ ಸ್ವೀಕಾರ ಮಾಡಿದರು." (ಹೊಸಗನ್ನಡದ ಅರುಣೋದಯ -ಪು. ೪೭೦) ಕಾದಂಬರಿ ಪ್ರಕಾರವು ಹೊಸ ಮಾದರಿಯಾಗಿದ್ದರೂ ಅದರ ಸ್ವರೂಪವು ಜನರಿಗೆ ಮೆಚ್ಚುಗೆಯಾಗಿದ್ದರಿಂದ ಅದಕ್ಕೆ ಬೇಡಿಕೆ ಹಾಗೂ ಪ್ರೋತ್ಸಾಹ ದೊರೆತಿದ್ದನ್ನು ಇಲ್ಲಿ ಕಾಣಬಹುದಾಗಿದೆ. ಇಂತಹ ಉದ್ದೇಶಗಳ ಹಿನ್ನೆಲೆಯಲ್ಲಿ ರಚಿತವಾದ ಕಾದಂಬರಿಯೆ 'ಸೂರ್ಯಕಾಂತ'. ಆ ಜಾಹೀರಾತಿನ ಪ್ರಚಾರದ ೮-೧೦ ತಿಂಗಳೊಳಗೆ ಈ ಕಾದಂಬರಿ ಪ್ರಕಟವಾಯಿತು. ಇದರ ಪೀಠಿಕಾ ಭಾಗದಲ್ಲಿ ಕಾದಂಬರಿ ರಚನೆಯ ಉದ್ದೇಶವನ್ನು ಕುರಿತು "ಜನರಲ್ಲಿ ಓದುವ ಅಭಿರುಚಿ ಹುಟ್ಟದ ಹೊರತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಇರಲಾರದು. ಇಂತಹ ಅಭಿರುಚಿ ಹುಟ್ಟಬೇಕಾದರೆ ಕಾದಂಬರಿ, ನಾಟಕ ಮುಂತಾದ ಪುಸ್ತಕ ಸಾಮಗ್ರಿಯೂ ಅವಶ್ಯವಾಗಿ ಬೇಕಾಗುತ್ತದೆ. ....ಈ ಕೊರತೆಯನ್ನು ನನ್ನ ಕೈಲಾದ ಮಟ್ಟಿಗೆ ನಿವಾರಿಸಬೇಕೆಂದು ಆಶೆಯುಳ್ಳವನಾಗಿ ಈ ಚಿಕ್ಕ ಕಾದಂಬರಿ ಬರೆದಿದ್ದೇನೆ." ಎಂದಿದ್ದಾರೆ. ಇಲ್ಲಿ ಸ್ವತಂತ್ರ ಕಾದಂಬರಿಗಳ ರಚನೆಯ ಉದ್ದೇಶ ಸ್ಪಷ್ಟವಾಗಿಯೇ ಇದೆ. ಹಿಂದೆ ಇದ್ದಂತಹ ಕಾವ್ಯಗಳನ್ನು

ಓದುವ, ಅದನ್ನು ಅಥೈಸಿಕೊಳ್ಳುವ ಪ್ರಯತ್ನ ಮಾಡಿರಲಿಲ್ಲ. ಕಾರಣ ಅದರ ಅಭಿವ್ಯಕ್ತಿ ರೂಪದ ಕೊರತೆ. ಆದರೆ ನಾಟಕ, ಕಾದಂಬರಿಗಳಂತಹ ಗದ್ಯ ಶೈಲಿಯು ಸಾಮಾನ್ಯರಿಗೂ ಓದಲು ಅನುಕೂಲವಾಗಿದ್ದವು.

ಆಕ್ಸ್‌ಫರ್ಡ್ ಇಂಗ್ಲಿಷ್ ಶಬ್ದಕೋಶದಲ್ಲಿ ನಾವೆಲ್ ಎಂದರೆ ಒಂದು ಗದ್ಯ ಅಥವಾ ಸವಿಸ್ತಾರವಾದ ಕಥೆಯಲ್ಲಿ ಬರುವ ಪಾತ್ರಗಳು ಅಥವಾ ಘಟನೆಗಳು ಗತಕಾಲದ ಇಲ್ಲವೆ ವರ್ತಮಾನದ ನಿಜ ಜೀವನವನ್ನು ಸ್ವಲ್ಪ ಕ್ಲಿಷ್ಟಕರವಾಗಿ ಪ್ರತಿನಿಧಿಸುತ್ತದೆ."[1](ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೫)"

ಇಲ್ಲಿ ವಾಸ್ತವ ಜೀವನದ ವಿಸ್ತಾರವಾದ ಜೀವನ ಚಿತ್ರಣವನ್ನು ನಿರೂಪಿಸಲು ಸುಲಭವಾಗಿರುವ ಉತ್ತಮ ಪ್ರಕಾರವೇ ಕಾದಂಬರಿ ಎನ್ನಲಾಗಿದೆ. ಯೂರೋಪಿನ ಮಟ್ಟಿಗಷ್ಟೇ ಈ ಹೇಳಿಕೆಯು ಅನ್ವಯವಾಗುವುದಿಲ್ಲ. ಕನ್ನಡದ ಕಾದಂಬರಿಗಳೂ ಇದನ್ನು ಅನುಸರಿಸಿವೆ. ಇಟಾಲಿಯನ್‌ನಲ್ಲಿ 'ನಾವೆಲ್ಲಾ'(Novella) ಎಂದು ಹೇಳುತ್ತಾರೆ. ಎಂದರೆ ಇದರ ಅರ್ಥ 'ಹೊಸತು' ಎಂದು. ಹಾಗೆಯೇ ಭಾರತೀಯ ಪರಿಸರದಲ್ಲಿ ಹಿಂದಿನ ಸಾಹಿತ್ಯದ ತೊಡಕುಗಳನ್ನು ಮೀರಿ ಹೊಸತಾದ ಸಾಹಿತ್ಯ ಸೃಷ್ಟಿಯಾದದ್ದೇ ಕಾದಂಬರಿ.

ಕನ್ನಡದ ಕಾದಂಬರಿಗಳೂ ಈ ಹಿನ್ನೆಲೆಯಲ್ಲಿಯೇ ರಚನೆಯಾದವು. ಇವುಗಳಲ್ಲಿ ವಾಸ್ತವತೆಯ ಚಿತ್ರಣಗಳೇ ಹೆಚ್ಚು. ಶೃಂಗಾರ ಚಾತುರ್ಯೋಲ್ಲಾಸಿನಿ, ಸೂರ್ಯಕಾಂತದಂತಹ ಕಾದಂಬರಿಗಳು ಐತಿಹಾಸಿಕ ಹಾಗೂ ಆಧ್ಯಾತ್ಮಿಕ ವಿಚಾರಗಳನ್ನು ತಿಳಿಸುತ್ತದೆಯಾದರೂ, ಅದು ಅಂದಿನ ಸಮಾಜದ ಸೂಕ್ಷ್ಮ ಸ್ತರಗಳನ್ನು ತನ್ನ ಕಥಾ ಹಂದರದಲ್ಲಿ ಒಳಗೊಂಡಿತ್ತು. ಸೂರ್ಯಕಾಂತ ಕಾದಂಬರಿಯಲ್ಲಿ 'ಹಳ್ಳಿಯ ಯುವಕನೊಬ್ಬನು ಬಡವನಾಗಿದ್ದರೂ ಕಷ್ಟದಿಂದ ವಿದ್ಯಾಭ್ಯಾಸ ಮಾಡಿ ರಾಜನ ಬಳಿಯಲ್ಲಿ ಸರದಾರನಾಗಿ ತನ್ನ ತಂದೆ ತಾಯಿಯರನ್ನು ತನ್ನೊಡನೆ ಬರಮಾಡಿಕೊಂಡು ಜೀವನ ಸಾಗಿಸುವ ಕಥೆಯಿದೆ. ಇಲ್ಲಿ ಐತಿಹಾಸಿಕ ಚಿತ್ರಣಗಳು ಕಂಡುಬಂದರೂ ಸಾಮಾಜಿಕ ಜೀವನದ ವಸ್ತುವೇ ಮುಖ್ಯವಾದದ್ದು. ಮುಂದೆ ಬಂದಂತಹ ಇಂದಿರಾಬಾಯಿ ಕಾದಂಬರಿ ಪೂರ್ಣಪ್ರಮಾಣದಲ್ಲಿ ನಾವೆಲ್‌ನ ಲಕ್ಷಣಗಳನ್ನು ಹೊಂದಿ ರಚನೆಯಾಯಿತು. ಆದ್ದರಿಂದಲೇ ಇಂದಿರಾಬಾಯಿ ಕಾದಂಬರಿಯನ್ನು ಆಧುನಿಕ ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂದು ಕರೆಯಲಾಗಿದೆ. ಆದರೆ ಈ ಕಾದಂಬರಿಯ ಮೇಲೆ ೧೯ನೇ ಶತಮಾನದ ಚಾರ್ಲ್ಸ್ ಡಿಕನ್ಸ್‌ನ 'ಒಲಿವರ್ ಟ್ವಿಸ್ಟ್' ಮತ್ತು 'ಡೇವಿಡ್ ಕಾಪರ್ ಫೀಲ್ಡ್' ಕಾದಂಬರಿಗಳ ಪ್ರಭಾವವಿದೆ. ವಿಧವಾ ವಿವಾಹದ ಕುರಿತ ಆಲೋಚನೆ ಈ ಕಾದಂಬರಿಗಳಲ್ಲಿದೆ.

---

1. "A fictious prose narrative or tale of considerable length in which characters and actions representative of the real life of past and present times and are portrayed of more or less complexity "

ಇಂದಿರಾಬಾಯಿ ಕಾದಂಬರಿಯನ್ನು ಬರೆದ ಲೇಖಕರೇ ಬರೆದ ಮತ್ತೊಂದು ಪುಟ್ಟ ಕಾದಂಬರಿ 'ಭಾಗೀರಥಿ'. ಇದು ಕೂಡ ಹೆಣ್ಣು ಮಗಳೊಬ್ಬಳ ಜೀವನದ ಕಥೆ. ಇಂದಿರಾಬಾಯಿ ಕಾದಂಬರಿಯ ದಟ್ಟ ಪ್ರಭಾವ ಈ ಕಾದಂಬರಿಯ ಮೇಲಿದೆ. ಇದರ ಕಥಾಹಂದರ ಹೀಗಿದೆ– "ವಿದ್ಯಾವಂತೆಯಾದ ಈಕೆ ಜನರಲ್ಲಿ ಇದ್ದಂತಹ ಭಯಕ್ಕೆ ಕಾರಣವಾದ ನಾನಾ ಮೂಢತ್ವಗಳನ್ನು ವಾಚಕರಿಗೆ ತೋರಿಸುವ ಪಾತ್ರ. ದಿನ ನತ್ಯ ಜೀವನದಲ್ಲಿ ಆಚರಿಸುವ ಮೂಢನಂಬಿಕೆಗಳಾದ ಮುತ್ತೈದೆಯರು ಚೆನ್ನಮಣೆಯಲ್ಲಿ ಕೂರಬಾರದು, ಮಕ್ಕಳಿಗೆ ಕನ್ನಡಿ ತೋರಿಸಿದರೆ ಮೂಕರಾಗುತ್ತಾರೆ, ಒಬ್ಬರಿಗೆ ರೋಗರುಜಿನಗಳು ಬಂದರೆ ಬಲಿ ತೆಗೆಯುವುದು, ಗ್ರಹ ಶಾಂತಿ ಮಾಡುವುದು ಮುಂತಾದ ಬಗ್ಗೆ ತನ್ನ ಗೆಳತಿ ಲೀಲಾವತಿಗೆ ಬುದ್ಧಿ ಹೇಳಿ ಆಕೆಯು ಪರಿವರ್ತನೆಗೆ ಪ್ರಯುತ್ನಿಸುವ ಚಿತ್ರಣ ಈ ಕಥೆಯಲ್ಲಿದೆ."(ಸುಹಾಸಿನಿ–೧೯೦೧) ಅಂದಿನ ಸಮಾಜದಲ್ಲಿ ಹಾಗು ಹೆಣ್ಣುಮಕ್ಕಳಲ್ಲಿ ಇದ್ದಂತಹ ಮೌಢ್ಯತೆಯನ್ನು ತಿಳಿಸಿ ಹೇಳುವ ಕಾರ್ಯವನ್ನು ಗುಲ್ವಾಡಿಯವರು ಈ ಕಾದಂಬರಿಗಳ ಮೂಲಕ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ ಇದರಲ್ಲಿ ಹೊಸ ಚಿಂತನೆಗಳನ್ನು ಜನರಲ್ಲಿ ಮೂಡಿಸುವುದು ಒಂದು ಹೆಣ್ಣೇ ಆಗಿದ್ದಾಳೆ. ಅಂದರೆ ಸ್ತ್ರೀ ಶಿಕ್ಷಣದಿಂದಾಗಿ ಸಮಾಜದಲ್ಲಿ ಬದಲಾವಣೆ ಸಾಧ್ಯ ಎಂಬುದು ಕೃತಿಕಾರನ ಆಶಯ.

ಇಂಗ್ಲಿಷ್ ಕಾದಂಬರಿಗಳ ಪ್ರಭಾವ ಹೇಗಿತ್ತೆಂದರೆ ತೆಲುಗಿನ 'ಚಿಂತಾಮಣಿ' ಎಂಬ ಪತ್ರಿಕೆ ಕಾದಂಬರಿ ರಚನೆಗಾಗಿ ಸ್ಪರ್ಧೆಯೊಂದನ್ನು ಏರ್ಪಡಿಸಿತ್ತು. ಅದರ ಪ್ರಕಟಣೆಯಲ್ಲಿ 'ನೀವು ಕಾದಂಬರಿಯನ್ನು ಬರೆಯುವಾಗ ವಾಲ್ಟರ್ ಸ್ಕಾಟ್ ಮತ್ತು ಜೂಲ್ಸ್ ವರ್ನ್ ಇಂಥವರನ್ನು ಮಾದರಿಯಾಗಿ ಇಟ್ಟುಕೊಳ್ಳಿರಿ'. ಇಲ್ಲಿ ಪಾಶ್ಚಾತ್ಯ ಕಾದಂಬರಿಯ ಪ್ರಭಾವವನ್ನು ಕಾಣಬಹುದಾಗಿದೆ. ಹೊಸ ಮಾದರಿ ಹಾಗು ವಸ್ತುವಿನ ಹಿನ್ನೆಲೆಯಲ್ಲಿ ಈ ಕಾದಂಬರಿಕಾರರು ಬಹಳ ಪ್ರಸಿದ್ಧರಾದವರು. ಅಲ್ಲದೆ ಭಾರತೀಯ ವ್ಯವಸ್ಥೆಯಲ್ಲಿದ್ದ ಅನೇಕ ಸ್ತ್ರೀ ಶಿಕ್ಷಣ, ವಿಧವಾ ವಿವಾಹದಂತಹ ಅನೇಕ ಸಮಸ್ಯೆಗಳು ಈ ಕಾದಂಬರಿಕಾರ ಕಾದಂಬರಿಯಲ್ಲಿ ವ್ಯಕ್ತವಾಗಿದ್ದವು.

ಒಂದು ಹೊಸ ಪ್ರಕಾರದ ಸ್ವೀಕಾರ ಸಂದರ್ಭವು ಯಾವುದಾದರೊಂದು ಉದ್ದೇಶ ಇಲ್ಲವೆ ಆಶಯದ ಹಿನ್ನೆಲೆಯನ್ನು ಹೊಂದಿರುತ್ತದೆ. ಕನ್ನಡದ ಮೊದಲ ಅನುವಾದ ಕಾದಂಬರಿಯಾದ ಬಿ.ವೆಂಕಟಾಚಾರ್ಯರ ದುರ್ಗೇಶ ನಂದಿನಿಯಲ್ಲಿ ".......ಗ್ರಾರ್ಹಸ್ಥ್ಯ ಸಂಬಂಧವಾದ ನಾವೆಲ್‌ಗಳು ಪ್ರಾರಂಭವಾಗಿ ಕ್ರಮೋನ್ನತಿಯಾಗಿ ಸ್ವಾಭಾವಿಕವಾದುದಾಗಿಯೂ ಮನುಷ್ಯ ಚರಿತ್ರ ಪರಿಚಾಯಕವಾದುದಾಗಿಯೂ, ಮನುಷ್ಯನ ಸದ್ವ್ಯವಹಾರ ನಡತೆಗಳಿಗೆ ಮೂಲ ಸೂತ್ರ ಜ್ಞಾಪಕ ಜನಕವಾದುದಾಗಿಯೂ ಇರುವ ಅತ್ಯುತ್ಕೃಷ್ಟವಾದ ನಾವೆಲುಗಳ ಸೃಷ್ಟಿಯಾಯಿತು" (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೦೬) ಎಂದಿದ್ದಾರೆ. ಕಾದಂಬರಿಗೆ ವಾಸ್ತವತೆಯನ್ನು ಕಟ್ಟುವ, ವಿಸ್ತರಿಸುವ ಹಾಗೂ ಅರಿವನ್ನು ಮೂಡಿಸುವ ಸಾಮರ್ಥ್ಯವಿದೆ ಎಂಬುದು ಇವರ ಧೋರಣೆ. ಓದುಗರಿಗೆ ಗ್ರಹಿಸಲು ಸುಲಭವಾದಾಗ ಮಾತ್ರ ಆ ಕೃತಿಯ ಮೂಲೋದ್ದೇಶವು ಅರ್ಥವಾಗುವಂತಹದ್ದು. ಅದಕ್ಕೆ ಪೂರಕವಾದ ಸಾಹಿತ್ಯ ಪ್ರಕಾರವೇ ಕಾದಂಬರಿ ಎಂಬುದು ಇವರ ಅಭಿಪ್ರಾಯ.

ಮುಂದೆ ಇದೇ ವಿಜ್ಞಾಪನೆಯಲ್ಲಿ ಕಾದಂಬರಿಯ ಲಕ್ಷಣ ಹಾಗು ಉದ್ದೇಶಗಳನ್ನು ಹೀಗೆ ವಿವರಿಸಿದ್ದಾರೆ. "......ಸಮಾಜದ ಹಾಗು ಸಮಾಜಕ್ಕೆ ಅಂಗಭೂತನಾದ ಮನುಷ್ಯನ ಚರಿತ್ರೆ, ನಡತೆಗಳಲ್ಲಿ ಕಂಡು ಬರುವ ಅತ್ಯಚಾರ, ದುರಾಚಾರ, ಅಸದ್ವ್ಯವಹಾರ, ದುರ್ನಡತೆ ಮುಂತಾದವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ, ಅವುಗಳಿಂದುಂಟಾಗುವ ವಿಪತ್ತುಗಳನ್ನು ತೋರ್ಪಡಿಸಿ, ಪ್ರತಿಯೊಬ್ಬನೂ ಸಮಾಜದಲ್ಲಿ ಸದ್ಭಾವದಿಂದ ನಡೆದುಕೊಳ್ಳಬೇಕಾದುದನ್ನು ತೋರ್ಪಡಿಸ ತಕ್ಕದಾಗಿರುತ್ತದೆ. ಈ ರೀತಿಯಾದ ಉದ್ದೇಶಗಳು ಮನಸ್ಸಿನಲ್ಲಿ ಅಂಕಿತವಾಗಬೇಕಾದರೆ ಗ್ರಂಥಗಳನ್ನೋದಿದ ಮಾತ್ರದಿಂದ ಉದ್ದಿಷ್ಟವಾದ ಆಯಾ ಭಾವೋದಯಗಳನ್ನುಂಟುಮಾಡುವ ಹಾಗೆ ಘಟನಾವಳಿಗಳನ್ನು ಕಲ್ಪಿಸಿ ಕೌಶಲದಿಂದ ರಚಿಸಬೇಕು. ನಾವೆಲ್ಲ ಎಂಬುದು ಸಮಾಜದ ಹಾಗೂ ಮನುಷ್ಯನ ಚರಿತ್ರೆಯ ಪ್ರತಿಚಿತ್ರವಾಗಿ, ಪ್ರತಿ ಒಬ್ಬ ಪಾಠಕನ ಮನಸ್ಸಿಗೂ ಮುಕುರ ಸ್ವರೂಪವಾಗಿರಬೇಕು." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು.೦೬) ಹಿಂದಿನ ಸಾಹಿತ್ಯ ಕೃತಿಗಳು ನೀತಿಯನ್ನು ಹೇಳುವ, ವ್ಯಕ್ತಿತ್ವವನ್ನು ಉತ್ತಮಗೊಳಿಸುವ ವಿಚಾರಗಳನ್ನು ಹೊಂದಿತ್ತಾದರೂ ಅವು ಸಾಮಾನ್ಯನಿಗೆ ಅರ್ಥವಾಗುವ ಮಾದರಿಯಲ್ಲಿ ಇರಲಿಲ್ಲ. ಅಲ್ಲದೆ ವಾಸ್ತವ ಬದುಕಿನ ಅನಾವರಣಕ್ಕಿಂತ ಅಲೌಕಿಕ ಜಗತ್ತಿನ ಕಲ್ಪನೆಯನ್ನು ನೀಡುತ್ತಿದ್ದವು. ಆದ್ದರಿಂದ ಒಬ್ಬ ಸಾಮಾನ್ಯ ವ್ಯಕ್ತಿಯ ವ್ಯಕ್ತಿತ್ವ ವಿಕಸನಕ್ಕೆ ಈ ಮಾದರಿ ಸೂಕ್ತವೆಂದು ಲೇಖಕರ ಅಭಿಪ್ರಾಯ.

ಮಹಾಕಾವ್ಯಗಳು ಅದ್ಬುತ ರಮ್ಯ ಶೃಂಗಾರ ಪೂರ್ಣ ಕಥಾನಕಗಳು ಮನೆಯಲ್ಲೇ ಕುಳಿತು ಮನರಂಜನೆಗಾಗಿ ಪಠಿಸುವವರಿಗಾಗಿ ರಚಿತವಾಗುತ್ತಿತ್ತು. ಅಲೌಕಿಕತೆಗಿಂತ ವಾಸ್ತವತೆಯು ಪ್ರಧಾನವಾಗಿದ್ದು ಅದರ ವಿಶೇಷತೆ. ಅಂದರೆ ಈ ಸಾಂಪ್ರದಾಯಿಕ ಕಥನಗಳಿಂದ ಭಿನ್ನವಾದದ್ದು. ನಾವೆಲ್ "ಸಂಕೀರ್ಣವಾದ ಕಥಾ ಸಂವಿಧಾನವನ್ನು, ವಾಸ್ತವಿಕ ಜೀವನವನ್ನೂ ಪ್ರತಿನಿಧಿಸುವ ಪಾತ್ರ ಮತ್ತು ಘಟನೆಗಳನ್ನು ಅದು ಹೊಂದಿರಬೇಕು. ಆದುದರಿಂದ ತನ್ನ ಲಕ್ಷಣದಲ್ಲಿ ನಾವೆಲ್ ಪಾತ್ರ ಚಿತ್ರಣ, ಕಥಾ ಸಂವಿಧಾನಗಳನ್ನು ಹೊಂದಿದ, ವಾಸ್ತವಿಕ ನಿರೂಪಣೆಯುಳ್ಳ ಕಾಲ್ಪನಿಕ ರಚನೆ, ಭೂತ ಯಾ ವರ್ತಮಾನ ಕಾಲದ ಚಿತ್ರಣವಿರುವ ಸುದೀರ್ಘ ಕಥನ" ಎಂದು ಪಾಶ್ಚಾತ್ಯ ವಿದ್ವಾಂಸ ಹೇಳಿದ್ದಾನೆ. ಇತರೆ ಸಾಹಿತ್ಯ ಪ್ರಕಾರಗಳಿಗೆ ಹೋಲಿಸಿದರೆ ಕಾದಂಬರಿಯೂ ಈ ಹಿನ್ನೆಲೆಯಲ್ಲಿಯೇ ಹೆಚ್ಚು ಆಪ್ಯಾಯಮಾನವಾದದ್ದು. ಪಾಶ್ಚಾತ್ಯ ಸಾಹಿತ್ಯದ ಪ್ರಮುಖ ಅಂಶವೆಂದರೆ ಸಮಕಾಲೀನ ಸಮಸ್ಯೆಗಳಿಗೆ ಪೂರಕವಾಗಿ ಸೃಷ್ಠಿಯಾಗಿದ್ದು. ಮಹಾಕಾವ್ಯಕ್ಕೆ ಪ್ರತಿಯಾಗಿ ಕಾದಂಬರಿ ಪ್ರಕಾರವು ಅಲ್ಲಿನ ಚಿಂತನೆಗಳನ್ನು ಅಭಿವ್ಯಕ್ತಗೊಳಿಸಲು ಉತ್ತಮ ಎಂದು ಭಾವಿಸಿದರು.

ಪಾಶ್ಚಾತ್ಯ ಸಾಹಿತ್ಯದ ಧೋರಣೆ ಶೈಲಿಯನ್ನು ಕುರಿತಂತೆ ಲಕಾಜ್ಸ್‌ನ ಮಾತುಗಳು ಗಮನಾರ್ಹ. "ತನ್ನದೇ ಆದ ಇಂಡಿವಿಜುವಲ್ 'ಸ್ವ'ದ ಬೆಳವಣಿಗೆಯಾಗಬೇಕಾದರೆ ತನ್ನ ಪರಾವೃತ್ತಿಯನ್ನು ಗುರುತಿಸುವ ಸಾಮರ್ಥ್ಯ ಅಗತ್ಯ. ಆದರೆ ಮಹಾಕಾವ್ಯದಲ್ಲಿ ಅಂತಹ 'ಸ್ವ' ಇಲ್ಲ. ಒಳಹೊರಗುಗಳ ನಡುವೆ ಅಲ್ಲಿ ವ್ಯತ್ಯಾಸವಿಲ್ಲ. ಅಲ್ಲಿ ವೈಯಕ್ತಿಕ ಬದುಕಿಲ್ಲ. ಅಲ್ಲಿ ಆತ್ಮವು ಸಾಹಸಗಳ ಮೂಲಕ ಜೀವಿಸುತ್ತದೆ. ಹುಡುಕುವ, ಪಡೆಯುವ ಕ್ಲೇಷ ಸಂಕಷ್ಟಗಳು ಮತ್ತು ಕಳೆದುಕೊಳ್ಳುವ ಭಯ

ಇತ್ಯಾದಿ ಈ ಆತ್ಮಕ್ಕೆ ಇಲ್ಲ. ಅದು ಮಹಾಕಾವ್ಯದ ಯುಗ." ಪೌರಾಣಿಕದ ಕಲ್ಪನಾ ಲೋಕಕ್ಕೆ ಖಂಡಿತವಾಗಿಯೂ ವಾಸ್ತವದ ಸಮಸ್ಯೆಗಳ ಕುರಿತು ವಿಶ್ಲೇಷಿಸಲು ಸಾಧ್ಯವಾಗುವುದಿಲ್ಲ. ಹೊಸಗನ್ನಡ ಸಾಹಿತ್ಯ ರೂಪುಗೊಳ್ಳಲು ಮಹಾಕಾವ್ಯಗಳ ವಸ್ತು ಹಾಗೂ ಅದರ ಧೋರಣೆಗಳೇ ಮೂಲ ಕಾರಣವಾಯಿತು. ಅಲೌಕಿಕ ನೆಲೆಯಲ್ಲಿದ್ದ ಸಾಹಿತ್ಯ ವಾಸ್ತವ ಬದುಕಿನ ಚಿಂತನೆಗಳನ್ನು ಕಟ್ಟಿಕೊಡುವಲ್ಲಿ ಸೋತಿದ್ದವು.

ಗೋಲ್ಡ್‌ಮನ್‌ನ ಪ್ರಕಾರ "ನಾವೆಲ್ ಅವನತ ಸಮಾಜದಲ್ಲಿ ಅಪ್ಪಟ ಮೌಲ್ಯಗಳ ಹುಡುಕಾಟದ ಕಥನ." ಎಂದಿದ್ದಾನೆ. ೧೯ನೇ ಶತಮಾನದಲ್ಲಿ ಭಾರತೀಯ ಪರಿಸರದಲ್ಲೂ ಇಂತಹ ಹುಡುಕಾಟ ಆರಂಭವಾಗಿತ್ತು. ಯೂರೋಪಿನ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳು ಕಾದಂಬರಿಯ ವಸ್ತುಗಳಾದವು. ಇಲ್ಲಿ ಪ್ರಮುಖವಾಗಿ ಮೂರು ಅಂಶಗಳು ಇದರ ಹುಟ್ಟಿಗೆ ಕಾರಣ ಎಂದು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ. ಅವುಗಳೆಂದರೆ:

೧. ಫ್ರೆಂಚ್ ಕ್ರಾಂತಿ

೨. ಕೈಗಾರಿಕಾ ಕ್ರಾಂತಿ

೩. ಬಂಡವಾಳಶಾಹಿ ಧೋರಣೆಗಳು (ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು–ಪು. ೫)

ಭಾರತೀಯ ಸಮಾಜದಲ್ಲಿ ೧೯ನೇ ಶತಮಾನದಲ್ಲಿ ಇದ್ದಂತಹ ರಾಜಕೀಯ, ಸಾಂಸ್ಕೃತಿಕ, ಭಾಷಿಕವಾದಂತಹ ವಿಚಾರಗಳನ್ನು ಬಹಳ ತಿಳಿಯಾಗಿ, ವಿವರವಾಗಿ ತಿಳಿಸಲು ಪೂರಕವಾದ ಸಾಹಿತ್ಯ ಪ್ರಕಾರವೊಂದು ಜನರಿಗೆ ಅವಶ್ಯಕವಾಗಿತ್ತು. ಇಂತಹ ಸಂದರ್ಭದಲ್ಲಿ ಭಾರತವನ್ನು ಪ್ರವೇಶಿಸಿದ ನಾವೆಲ್ ಪ್ರಕಾರವು ಜನರನ್ನು ಆಕರ್ಷಿಸಿತು. ಅಲ್ಲದೆ ಯೂರೋಪಿನ ಕಾದಂಬರಿಕಾರರ ಅನೇಕ ಚಿಂತನೆಗಳು ಇಲ್ಲಿನವರನ್ನು ಚಿಂತನೆಗೆ ಹಚ್ಚಿದ್ದರಿಂದಲೇ ಕಾದಂಬರಿಯ ಪ್ರಕಾರವೂ ಒಂದು ಚಿಂತನೆಯಾಗಿ ಹೊಸಗನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿತು.

ಮಿರ್ಜಿ ಅಣ್ಣಾರಾಯರ ಹೇಳಿಕೆಯೂ ಇದಕ್ಕೆ ಪೂರಕವಾಗಿದೆ. "ಕಾದಂಬರಿಯಲ್ಲಿ ಪಾತ್ರ ರಚನೆ, ಸನ್ನಿವೇಶ ಸೃಷ್ಟಿಗಳು ಅದರ ವಿಶೇಷ ಕಲೆಗಾರಿಕೆಯಾದರೆ, ಪ್ರಕರಣಗಳ ಹೊಂದಿಕೆಯು ಕಾದಂಬರಿಯ ತಂತ್ರದಲ್ಲಿ ಸಾಮಾನ್ಯವಾಗಿ ಮೊದಲನೆಯ ಮೆಟ್ಟಿಲಾಗಿರುತ್ತದೆ. ಕಥಾನಕದ ಕಾಲ, ಕಥೆಯು ನಡೆದ ಕಾಲದ ಸೂಕ್ಷ್ಮ ವರ್ಣನೆ, ಅಲ್ಲಿಯ ಪರಿಸ್ಥಿತಿ, ಕಥೆಗೂ ಅದಕ್ಕೂ ಇರುವ ಸಂಬಂಧ, ಅವರ ಮನಸ್ಸು ಮತಗಳ ಪ್ರದರ್ಶನ ಇವುಗಳೆಲ್ಲವುಗಳಿಂದ ಕಾದಂಬರಿಯ ಹಿನ್ನೆಲೆ ನಿರ್ಮಾಣವಾಗುತ್ತಿರುತ್ತದೆ." ಎಂದಿದ್ದಾರೆ. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೭)

ಬಿ.ವೆಂಕಟಾಚಾರ್ಯರ 'ಭ್ರಾಂತಿ ವಿಲಾಸ'ವನ್ನು ಕಾದಂಬರಿಯ ಮೊದಲನೆ ಹೆಜ್ಜೆ ಎಂದು ಕರೆಯಲಾಗಿದೆ. ಬಂಗಾಳಿಯ ಈಶ್ವರಚಂದ್ರ ವಿದ್ಯಾಸಾಗರರು ಇಂಗ್ಲಿಷ್‌ನ ಷೇಕ್ಸ್‌ಪಿಯರ್‌ನ 'ಕಾಮೆಡಿ ಆಫ್ ಎರರ್ಸ್' ಕೃತಿಯ ಕನ್ನಡದ ಅನುವಾದ ಇದಾಗಿದೆ. ಇದರ ಪೀಠಿಕೆಯಲ್ಲಿ ಇದನ್ನು ಅನುವಾದ ಮಾಡುವುದರ ಹಿನ್ನೆಲೆಯನ್ನು ಹೀಗೆ ಹೇಳಲಾಗಿದೆ "......ಈ ದೇಶದ ಭಾಷೆಯಲ್ಲಿ ಇಂಥಹ ಪಠನೀಯವಾದ ಗ್ರಂಥಗಳು ಯಿಲ್ಲದೆ ಯಿರುವುದರಿಂದ ಲೋಪವನ್ನಾಗಿಸಿ ಯೆಣಿಸಿ ಯಿದನ್ನು ಪೂರ್ತಿ ಗೈಯ್ಯಬೇಕೆಂಬ ತನ್ನ ಉದ್ದೇಶಕ್ಕೆ ಪ್ರಕೃತ ಅಲ್ಪ ಪ್ರಯತ್ನವನ್ನು ಅಂಕುರಾರ್ಪಣವನ್ನಾಗಿ ವಹಿಸಿದೆನು......" ಎಂದಿದ್ದಾರೆ. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೧೧)ಎಂದಿದ್ದಾರೆ. ಅಂದರೆ ಸಾಮಾನ್ಯರಿಗೆ ಸಾಹಿತ್ಯಕವಾಗಿ ಇದ್ದಂತಹ ಕೊರತೆಗಳನ್ನು, ಲೋಪದೋಷಗಳನ್ನು ನೀಗಿಸುವ ಹಿನ್ನೆಲೆಯಲ್ಲಿ ಈ ಪ್ರಕಾರವು ಪ್ರವೇಶವನ್ನು ಪಡೆಯಿತು. ಹಂತ ಹಂತವಾಗಿ ತನ್ನ ಸ್ವರೂಪವನ್ನು ಖಚಿತ ಪಡಿಸಿಕೊಳ್ಳುತ್ತಾ ಕಾದಂಬರಿಗಳು 'ಮಾಡಿದುಣ್ಣೋ ಮಹಾರಾಯ'ದ ಕಾಲಕ್ಕೆ ನಿರ್ದಿಷ್ಟ ಸ್ವರೂಪವನ್ನು ಪಡೆದು ಪೂರ್ಣ ಸ್ವತಂತ್ರ ಕಾದಂಬರಿಗಳು ರಚನೆಯಾದುವು..

ವೆಂಕಟಾಚಾರ್ಯರಿಗೆ ಕನ್ನಡ ನಾಡು ನುಡಿಯ ಬಗ್ಗೆ ಅಭಿಮಾನವನ್ನು ರೂಪಿಸುವ ಹಾಗೆ ಸಾಹಿತ್ಯ ಇರಬೇಕೆಂಬುದು ಅವರ ಚಿಂತನೆಯಾಗಿತ್ತು. ಆದರೆ ಇಂತಹ ವಿಶಾಲವಾದ, ಗಹನವಾದ ವಿಚಾರಗಳನ್ನು ಜನರಿಗೆ ತಲುಪಿಸಲು ಕಾದಂಬರಿಯು ಒಂದು ಉತ್ತಮ ಸಾಧನವೆನಿಸಿರಬಹುದು. ಆದ್ದರಿಂದ ಆಪ್ಟೆಯವರ ಕೃತಿಯನ್ನು ರೂಪಾಂತರಗೊಳಿಸಿದರು. ಇವರು ಕನ್ನಡ ಸಾಹಿತ್ಯದಲ್ಲಿರುವ ಕೊರತೆಗಳನ್ನು ಕನ್ನಡಿಗರಾದ ನಾವೇ ನೀಗಿಸಬೇಕು ಎಂದಿದ್ದಾರೆ. "ನಮ್ಮಲ್ಲಿ ಇಂಗ್ಲೀಷ್ ಭಾಷಾಭಿಜ್ಞರಾದವರು ತಾವು ಓದುವ ವಿದ್ಯಾಲಯದ ಉಪಾದಿಗಳನ್ನು ಸಂಪಾದಿಸಿಬಿಟ್ಟರೆ ಕೃತಕಾರ್ಯರಾದೆವೆಂದು ತಿಳಿದುಕೊಂಡು ತಟಸ್ಥರಾಗಿ ದೇಶ ಭಾಷೆಯ ಅಭಿವೃದ್ಧಿಯ ವಿಚಾರದಲ್ಲಿ ಸ್ವಲ್ಪವೂ ಲಕ್ಷ್ಯ ಕೊಡದೇ ಉದಾಸೀನರಾಗಿರುವುದೇ ಶೋಚನೀಯವಾದೀ ಸ್ಥಿತಿಗೆ ಕಾರಣವೆಂದು ತೋರುತ್ತದೆ. ಇದರಿಂದ ಇಂಗ್ಲೀಷ್ ಭಾಷೆಯಲ್ಲಿ ಕೃತವಿದ್ಯರಾಗಿರುವುದರಿಂದ ನಮ್ಮ ಅನೇಕ ಮಹಾಶಯರು ನಿಂದಿತರಾದೆವೆಂದು ತಿಳಿಯಕೂಡದು. ಅವರಿಂದಲೇ ದೇಶಕ್ಕೆ ಮಂಗಳವುಂಟಾಗಿ ಕಾರ್ಯಸಿದ್ಧಿಯಾಗಬೇಕಾಗಿರುವುದರಿಂದ ಅವರನ್ನು ನಾವೆಂದಿಗೂ ದೂಷಿಸಲಾರೆವು....... ನಮ್ಮ ಸಂಸ್ಕೃತ ಪಂಡಿತರಿಂದೀ ಕಾರ್ಯಸಾಧನೆಯಾಗುವುದೆಂದು ನಿರೀಕ್ಷಿಸಕೂಡದು..... ಅವರು ಸಾಮಾನ್ಯರಿಗೆ ತಿಳಿಯದ ಧರ್ಮಶಾಸ್ತ್ರಗಳಲ್ಲಿ ಪಾರಂಗತರಾಗಿರುವ ಕಾರಣ ಅವರು ಅದರ ತತ್ವಾನ್ವೇಷಣೆಯಲ್ಲಿ ನಿರತರಾಗಿರುತ್ತಾರೆ. ಪ್ರಾಕೃತವಾದ ದೇಶ ಭಾಷೆಯು ಅವರು ನೋಡತಕ್ಕದ್ದಲ್ಲ..... ಅವರ ಅವಧಾನಕ್ಕದು ಯೋಗ್ಯವಾದುದಲ್ಲ. ಆತ ಏವ ಇಂಗ್ಲೀಷ್‌ನಲ್ಲಿ ಪಾರಂಗತರಾದ ಪಂಡಿತರಿಂದಲೇ ಈ ಕಾರ್ಯವಾಗಬೇಕು."

ಇವರು ಇಂಗ್ಲಿಷ್ ಸಾಹಿತ್ಯದಲ್ಲಿರುವ ಚಿಂತನೆಗಳು ನಮ್ಮ ದೇಶ, ಭಾಷೆಯನ್ನು ಪ್ರವೇಶಿಸುವುದರಿಂದ ಉತ್ತಮ ಸಮಾಜವನ್ನು ನಿರ್ಮಾಣ ಮಾಡಬಹುದು ಎಂಬ ಅಭಿಪ್ರಾಯವನ್ನು

ವ್ಯಕ್ತಪಡಿಸಿದ್ದಾರೆ. ಮೂಲತಃ ಇಂಗ್ಲಿಷ್ ಬಲ್ಲವರಾಗಿದ್ದ ಆಚಾರ್ಯರು ಪಾಶ್ಚಾತ್ಯ ಸಾಹಿತ್ಯದ ಧೋರಣೆಯನ್ನು ಬಲ್ಲವರಾಗಿದ್ದರು. ಇಂತಹ ವಿಚಾರಗಳು ಅಂದಿನ ಸಮಾಜದಲ್ಲಿದ್ದ ತೊಡಕುಗಳನ್ನು ನಿವಾರಿಸಬಲ್ಲದು ಎಂಬುದನ್ನು ಅರಿತಿದ್ದರು. ಹೊಸಗನ್ನಡ ಸಾಹಿತ್ಯದ ಚಿಂತನೆಗಳು ಮೂಡಲು ಮುಖ್ಯ ಕಾರಣವೇ ಇಂಗ್ಲಿಷ್ ಮಾಧ್ಯಮದ ಶಿಕ್ಷಣ. ಆದರೆ ಇಂಗ್ಲಿಷ್ ಬಲ್ಲವರು ಕೇವಲ ಸರ್ಕಾರಿ ಉದ್ಯೋಗಾಕಾಂಕ್ಷಿಗಳಾಗಿದ್ದರೆ ಹೊರತು, ಸಾಹಿತ್ಯಕವಾಗಿ ನಾಡಿಗೆ ಯಾವುದೇ ಪ್ರಯೋಜನವಾಗುತ್ತಿಲ್ಲ ಎಂಬ ಬೇಸರವು ಇಲ್ಲಿ ಕಂಡುಬರುತ್ತದೆ. ಅಂದರೆ ಇಂಗ್ಲಿಷ್ ಸಾಹಿತ್ಯದ ಅನುವಾದದಿಂದ ನಾಡಿನ ಜನರ ಜೀವನದ ಮೇಲೆ, ಚಿಂತನೆಗಳ ಮೇಲೆ ಪ್ರಭಾವ ಬೀರಬಲ್ಲದು ಎಂಬುದು ಆಚಾರ್ಯರ ಆಶಯ. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದಂತೆ ಗಳಗನಾಥರು ಕಾದಂಬರಿಯನ್ನು ರಚಿಸಿದ್ದರು. ಆದರೂ ಈ ಕಾದಂಬರಿಯ ರಚನೆಯ ಹಿನ್ನೆಲೆ ಕುರಿತು ಲೇಖಕರು ಹೀಗೆ ಹೇಳಿದ್ದಾರೆ– "ಕನ್ನಡ ಭಾಷೆಯಲ್ಲಿ ದೊಡ್ಡ ದೊಡ್ಡ ಕಾದಂಬರಿಗಳು ಇನ್ನೂ ಅಪೂರ್ವವೇ. ಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯವನ್ನು ಕುರಿತ ಕಾದಂಬರಿಗಳಂತೂ ಮತ್ತೂ ಕಡಿಮೆ" (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೨೯). ಹೀಗೆ ಕಾದಂಬರಿ ಎಂಬ ಪ್ರಕಾರವು ಅನುವಾದದ ಮೂಲಕ ತನ್ನದೇ ಆದ ವೈಶಿಷ್ಟ್ಯದಿಂದ ಹೊಸಗನ್ನಡ ಸಾಹಿತ್ಯದಲ್ಲಿ ಪ್ರವೇಶವನ್ನು ಪಡೆಯಿತು.

### ಭಾಷೆ

ಕಾದಂಬರಿ ತನ್ನ ಭಾಷೆಯ ದೃಷ್ಟಿಯಿಂದಲೇ ಸಾಮಾನ್ಯರಿಗೆ ಪ್ರಿಯವಾದ ಸಾಹಿತ್ಯವೆನಿಸಿತು. ಹಿಂದಿನ ಕಾವ್ಯ ಭಾಷೆಗಿಂತ ಭಿನ್ನವಾಗಿದ್ದೇ ಇದಕ್ಕೆ ಕಾರಣ. ಹೊಸಗನ್ನಡ ಸಾಹಿತ್ಯದ ಮುಂಗೋಳಿ ಎನಿಸಿಕೊಂಡ ಮುದ್ದಣನು ಗದ್ಯಕ್ಕೆ ಮಹತ್ವದ ಸ್ಥಾನ ನೀಡಿದನು. ಮುದ್ದಣನವರೆಗೂ ಗದ್ಯಕ್ಕಿಂತ ಪದ್ಯಕ್ಕೆ ಹೆಚ್ಚಿನ ಪ್ರಾಧಾನ್ಯವಿತು. ಪೂರ್ವದಲ್ಲಿದ್ದ ಕವಿಗಳಿಗೆ 'ಪದ್ಯಂ ಸಮಸ್ತ ಜನತಾ ಹೃದ್ಯಂ' ಆಗಿದ್ದಿತು. ೧೮ನೇ ಶತಮಾನದವರೆಗೆ ಗದ್ಯದ ಸ್ಥಿತಿಯು "ಚಂಪುವಿನ ಶ್ರೀಮದ್ಗಾಂಭೀಯರದಲ್ಲಿ ತಲೆಬಾಗಿ ನಂತ ಗದ್ಯವು ಪ್ರೌಢ ಆಚಾರ್ಯರ 'ಸಂಸ್ಕೃತ' ಮನೆಯ ಬಾಗಿಲ ಬಳಿ ಲೌಕಿಕ ನಿಂತ ಹಾಗೆ" ಇದ್ದಿತು ಎಂದಿದ್ದಾರೆ. ಆದರೆ ೧೯ನೇ ಶತಮಾನದಲ್ಲಿ ಗದ್ಯವು ಪ್ರವರ್ಧಮಾನಕ್ಕೆ ಬಂದಿತು. ಮುದ್ದಣನು ಮೊದಲ ಬಾರಿಗೆ ಪದ್ಯಕ್ಕಿಂತ ಗದ್ಯವೇ ಹಿತವಾದದ್ದು ಎಂದು ಹೀಗೆ ಹೇಳಿದ್ದಾನೆ.

> "ಆವ ದಾಟಿಯೊಳ್ ಪೇಳ್ವೆಂ?... ಪದ್ಯದೋಳ್
> ಪೇಳ್ವೆನೊ? ಗದ್ಯದೊಳ್ ಪೇಳ್ವೆನೋ?"
> "ಪದ್ಯಂ ವದ್ಯಂ; ಗದ್ಯಂ ಹೃದ್ಯಂ; ಹೃದ್ಯಂನುಮಪ್ಪ
> ಗದ್ಯದೊಳ್ ಪೇಳ್ವುದು."

ಅವನ ಗದ್ಯದ ಶೈಲಿಯೂ ಅಷ್ಟೇ ಹೃದ್ಯವಾಗಿದೆ. ಹೆಂಡತಿ ರಾಮನ ಕಥೆಯನ್ನು ಹೇಳುವ ಸಂದರ್ಭದ ನುಡಿಗಳು ಹೀಗಿವೆ:–

"ಓ......ಓ..... ತಡೆ ತಡೇ; ವಸುಧೆಗೊಡೆಯನಪ್ಪ ರಾಮಚಂದ್ರನ ಕಥೆಯಂ ಪೇಳ್ ಬಸದಿಗೊಡೆಯನಪ್ಪ ಸುರೇಂದ್ರರ ಚರಿತ್ರೆಯಂ ಪೇಳ್ವುದೇಂ?"

ಈಗಾಗಲೇ ಚರ್ಚಿಸಿದಂತೆ ಪರಂಪರಾಗತವಾದ ವ್ಯವಸ್ಥೆಯನ್ನು ಏಕ ಕಾಲಕ್ಕೇ ತ್ಯಜಿಸಿ ಹೊಸದನ್ನು ಸ್ವೀಕರಿಸುವಾಗ ಅನೇಕ ಗೊಂದಲಗಳು, ಸಮಸ್ಯೆಗಳು ಎದುರಾಗುತ್ತದೆ. ಅಂತೆಯೇ ಕಾದಂಬರಿಯ ಭಾಷೆ ಹೇಗಿರಬೇಕೆಂಬ ಜಿಜ್ಞಾಸೆ ನಮ್ಮ ಲೇಖಕರಿಗೆ ಕಾಡಿದ್ದಿದೆ. ಯಾವುದೇ ಭಾಷೆಗೆ ಇದೇ ಪ್ರಮಾಣ ಭಾಷೆಯೆಂದು ಖಚಿತವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಕನ್ನಡ ಭಾಷೆಯೂ ಇದಕ್ಕೆ ಹೊರತಾಗಿಲ್ಲ. ಉತ್ತರ ಕರ್ನಾಟಕ, ಕರಾವಳಿ, ದಕ್ಷಿಣ ಕರ್ನಾಟಕ ಮುಂತಾದ ಸಾಮಾಜಿಕ ಹಾಗೂ ಪ್ರಾದೇಶಿಕ ಕನ್ನಡದಲ್ಲಿ ಸಾಕಷ್ಟು ವ್ಯತ್ಯಾಸವಿದೆ. ಕೆರೂರರು ಇಂತಹ ಸಮಸ್ಯೆಯ ಬಗ್ಗೆ ತಮ್ಮ ವಿಜ್ಞಾಪನೆಯಲ್ಲಿ ಹೀಗೆ ಹೇಳಿದ್ದಾರೆ.

"ದಕ್ಷಿಣ ಕರ್ನಾಟಕದ ಕನ್ನಡಕ್ಕೂ ಉತ್ತರ ಕರ್ನಾಟಕದ ಕನ್ನಡಕ್ಕೂ ಹೆಚ್ಚು ಕಡಿಮೆ ಅದೆ. ಎರಡೂ ಪಂಥಗಳ ಭಾಷೆಯನ್ನು ಒಂದಾಗಿ ಮಾಡುವುದಕ್ಕೆ ಅವಶ್ಯವಾಗಿ ಎಷ್ಟೋ ಕಾಲ ಹೋಗಬೇಕು. ಸದ್ಯಕ್ಕೆ ಕೆಲವು ಶಬ್ದಗಳಾಗಲಿ, ಪ್ರಯೋಗಗಳಾಗಲಿ ನಮಗೂ ಮೈಸೂರು ಪ್ರಾಂತ ನಿವಾಸಿಗಳಿಗೂ ಪರಸ್ಪರರಿಗೆ ತಪ್ಪಾಗಿ ಕಂಡರೂ ಕಾಲಾಂತರದಿಂದ ಉಭಯತರರಿಗೂ ಗ್ರಾಹ್ಯವಾಗಬಹುದೆಂದು ನಂಬಿ ಇಂಥ ಶಬ್ದ ಪ್ರಯೋಗಗಳ ಸಮಾವೇಶವನ್ನು ತಕ್ಕಮಟ್ಟಿಗೆ ಈ ಪುಸ್ತಕದಲ್ಲಿ ಮಾಡಿದೆ." ಇದಲ್ಲದೆ ಭಾಷೆ ಲಲಿತವಾಗಿರಬೇಕು ಎನ್ನುವ ಕೆರೂರರ ಧೋರಣೆ ಹೀಗಿದೆ

ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಸುಖವನು
ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲ್ಲಿನ್ನೇನು? (ಆಧುನಿಕ ಕ.ಕ.ಕಾವ್ಯ ಜಿಜ್ಞಾಸೆ. ೧೦೦)

ಭಾಷೆ ಕುರಿತ ಚರ್ಚೆಗಳು ಇವರ ಕಾದಂಬರಿಯಲ್ಲಿ ವ್ಯಕ್ತವಾಗಿವೆ. 'ಮೃಚ್ಛಕಟಿಕ' ನಾಟಕದ ಚರ್ಚೆ ನಡೆಯುವಾಗ ಲೇಖಕರು ಸಾಹಿತ್ಯದ ಭಾಷೆ ಕುರಿತಂತೆ ತಮ್ಮ ಧೋರಣೆಯನ್ನು ಪಾತ್ರದ ಮೂಲಕ ಹೀಗೆ ಅಭಿವ್ಯಕ್ತ ಪಡಿಸಿದ್ದಾರೆ.

"ಏನು ಮಣ್ಣೋ, ಕೃಷ್ಣಮಾಚಾರ್ಯರ ಮೃತ್‌ಶಟಕದಲ್ಲಿಯ ಕನ್ನಡ ಅಕ್ಷರಗಳ ಗುರುತು ಮಾತ್ರ ಹತ್ತಿತು. ಅದರರ್ಥವು ಬರೆದವರಿಗೊಬ್ಬರಿಗೇ ತಿಳಿದರೆ ಸೈ. ಅನ್ಯರ ಪಾಡೇನು? ಆ ಅಪ್ರತಿಮ ಗ್ರಂಥದ ಅರ್ಥ ಮಾಡುವುದಕ್ಕಾಗಿ ಮೂಲ ಸಂಸ್ಕೃತ ನಾಟಕವನ್ನು ಹಿಡಿದುಕೊಂಡು ಅಕ್ಷರಾಕ್ಷರಕ್ಕೆ ತಲೆಯೊಡಕೊಂಡು ಪಂಡಿತರು ಮಣ್ಣು ಮುಕ್ಕಿಹೋದರು. ನಮ್ಮ ಆಚಾರ್ಯರಂಥವರು ಇನ್ನೂ ಹತ್ತು ಜನರು ಕೂಡಿ ಕನ್ನಡ ಭಾಷೆಯನ್ನು ಪರಿಶೋಧಿಸಿ ಬಿಟ್ಟರೆ, ಈ ಭಾಷೆಯು ಬರುವ ಹತ್ತು ವರ್ಷಗಳಲ್ಲಿ ಇತ್ತೋ ಇಲ್ಲವೋ ಎಂಬುದಾಗಿ ಹೋಗಲಿಕ್ಕೆ ಸಂದೇಹವಿಲ್ಲ. ಧಾರವಾಡದ

ದೇಶದಲ್ಲಿ ಕೂಡಾ ಕೆಲವು ಪಂಡಿತರು 'ಅಳಲೀ ಭಕ್ತಿ' ಎಂಬ ನ್ಯಾಯದಿಂದ ತಮ್ಮ ಕೈಲಾದ ಮಟ್ಟಿಗೆ ಈ ಮಹತ್ಕಾರ್ಯಕ್ಕೆ ನೆರವಾಗುತ್ತಿರುವರೆಂದು 'ರಾಜಹಂಸ'ವು ಹೇಳುತ್ತದೆ." (ಇಂದಿರಾ- ಪುಟ. ೮೧)

ಇಲ್ಲಿ ಕೃತಿಯ ಹೆಸರು 'ಮೃಚ್ಛಕಟಿಕ'ವನ್ನು ತಪ್ಪಾಗಿ ಉಚ್ಚರಿಸಿರುವ ಹಿನ್ನೆಲೆಯನ್ನು ಗಮನಿಸಬೇಕು. ರಾಜಹಂಸ ಪತ್ರಿಕೆಯ ಸಂಪಾದಕರಾಗಿದ್ದ ಕೆರೂರರು ತಮ್ಮ ಪತ್ರಿಕೆಯ ಧ್ಯೇಯವನ್ನೂ ಇಲ್ಲಿ ತಿಳಿಸಿದ್ದಾರೆ. ಈ ಕಾದಂಬರಿಯಲ್ಲಿ ಕನ್ನಡ ಭಾಷೆಯ ಬಗ್ಗೆ ಚರ್ಚೆ ಮುಂದುವರೆದು ಕನ್ನಡ ಭಾಷೆಯ ಬಗ್ಗೆ ಕನ್ನಡಿಗರು ಅನಾದರವನ್ನು ತೋರಿಸಲು ಕಾರಣವಾಗಿರುವ ಅಂಶವನ್ನು ಸುದೀರ್ಘವಾಗಿ ಚರ್ಚಿಸಿದ್ದಾರೆ.

ಇಂದಿರಾ ಕಾದಂಬರಿಯ ಈ ಭಾಗವನ್ನು ಗಮನಿಸಿ:-

"ಮಹಾರಾಷ್ಟ್ರದ ಗ್ರಂಥ ಸಂಗ್ರಹವು ದೊಡ್ಡದಿದ್ದು ಆ ಭಾಷೆಯಾದರೂ ಬಹು ಸೌಂದರ್ಯವುಳ್ಳದ್ದೂ ಸುರಸವಾದದ್ದೂ ಇರುವುದು. ಕನ್ನಡವು ಕಾಡು ಜನರ ಭಾಷೆಯೇ ಸರಿ. ವಸ್ತುಸ್ಥಿತಿ ಹೀಗಿರುವುದು. ನಾನು ಸುಳ್ಳು ಹೇಳುವುದಿಲ್ಲ" ಎಂದು ಡಾಕ್ಟರನು ನುಡಿದು ಹೆಮ್ಮೆಯಿಂದ ಎಲ್ಲರ ಕಡೆಗೂ ನೋಡಿದನು.

ದೇವಯಾನಿಯು ಸ್ವಸ್ಥಳಾಗಿ ಮೃದ್ವಾಸನದಲ್ಲಿ ಆತುಕೊಂಡು ಕುಳಿತವಳು ಎದ್ದು ಕುಳಿತು, "ಏನಂದಿರಿ ಡಾಕ್ಟರರೇ? ಕನ್ನಡ ಭಾಷೆಯಲ್ಲಿ ಬರೆದ ಕಾವ್ಯಗಳ ಮಾಧುರ್ಯವು ಮಹಾರಾಷ್ಟ್ರ ಭಾಷೆಯಲ್ಲಿ ಹುಡುಕಿದರೂ ಸಿಕ್ಕಲರಿಯದು. ಲಕ್ಷ್ಮೀಶ, ಷಡಕ್ಷರಿ, ಅಭಿನವ ಪಂಪ ಮುಂತಾದ ಕವಿಗಳ ಗ್ರಂಥಗಳನ್ನೋದಿದರೆ ರಸಜ್ಞರಿಗೆ ಉದ್ರೇಕ ಬಾರದಿರದು"

ಸಾಹಿತ್ಯವು ಯಾವಾಗಲೂ ಸಾಮಾನ್ಯರಿಗೂ ಓದಲಿಕ್ಕೆ ಅನುವು ಮಾಡಿಕೊಡುವಂತೆ ಇರಬೇಕು. ಆದರೆ ನಮ್ಮ ಹಿಂದಿನ ಕಾವ್ಯ ರಚನೆಗಳು ಕೇವಲ ಪಾಂಡಿತ್ಯ ಪ್ರದರ್ಶನಕ್ಕಾಗಿ ರಚನೆಯಾದವು. ಅಲ್ಲದೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ದೊರೆತ ಹೊಸ ಮಾದರಿಗಳನ್ನು ನಿರಾಕರಿಸುವವರನ್ನು ಕುರಿತು ಕೆರೂರು ವಾಸುದೇವಾಚಾರ್ಯರವರು "ಆದರೆ ಹಳಗನ್ನಡವನ್ನು ಹೊಸಗನ್ನಡದಲ್ಲಿ ಕಲಿಸಿ, ಕರ್ಣಕಟುಗಳಾದ ಸಂಧಿಗಳನ್ನು ಜಾಣತನವೆಂದು ತಿಳಿದು ಮಾಡಿ ಅರ್ಥ ತಿಳಿಯುವುದೊತ್ತಟ್ಟಿಗಿರಲಿ, ಓದಲಿಕ್ಕೂ ಬಾರದಂಥ ಹೊತ್ತಿಗೆಗಳನ್ನು ಬರೆದವರೇ ಈಗ ಪಂಡಿತರೆಂದೆನಿಸುವರು. ಹಳಗನ್ನಡವು ಅಪ್ರಯುಕ್ತವಾದದ್ದೆಂದು ಹಿಂದಕ್ಕುಳಿಯಿತು. ಅದನ್ನು ಮತ್ತೆ ತೆಗೆಯುವುದರಲ್ಲಿ ಅರ್ಥವಿಲ್ಲ. ವೇದದ ಭಾಷೆಯಂಥ ಸಂಸ್ಕೃತದಲ್ಲಿ ಕಾಲಿದಾಸಾದಿಗಳಿಗೆ ಗ್ರಂಥ ಬರೆಯಲಿಕ್ಕೆ ಬರುತ್ತಿದ್ದಿಲ್ಲವೇನು? ಭಾಸರನಂಥ ಇಂಗ್ರಜಿಯಲ್ಲಿ, ಅಡ್ಡಿಸನ್ ಸ್ಕಾಟ್ ಪ್ರಭೃತಿಗಳಿಗೆ ಬರೆಯುವುದು ಅಗಾಧವಾಗಿದ್ದಿಲ್ಲ. ಮಾತ್ರ ಅವರು ಬರೆದಿದ್ದರೆ ನಿಜವಾಗಿ ಮೂರ್ಖರೆಂದೆನ್ನಿಸಿಕೊಳ್ಳುತ್ತಿದ್ದರು. ಮಹಾ ಭಾರತದ ಕಾಲದಲ್ಲಿ ಧನುರ್ಬಾಣಗಳಿಂದ ಯುದ್ಧ

ಮಾಡುತ್ತಿದ್ದರು. ಆಗಿನ ವೀರರ ಧನುರ್ವಿದ್ಯಾ ಕೌಶಲವನ್ನು ವ್ಯಾಸರು ಬಹು ರಮಣೀಯವಾಗಿ ವರ್ಣಿಸಿರುವರೆಂದು ನಾವು ಬಿಲ್ಲು ಬಾಣಗಳನ್ನು ಹಿಡುಕೊಂಡು ಹಲಹಲಲಲವೆಂದು ತಲೆ ಭಾರವಾದ ಕಿರೀಟ ಹಾಕಿಕೊಂಡು ನಿಂತರೆ ಎಷ್ಟು ಉಪಹಾಸಕ್ಕೆ ಪಾತ್ರರಾಗುವೆವು! ಈ ಹಳಗನ್ನಡ ಪ್ರಿಯರೇ ಪ್ರಚಲಿತವಾದ ಕನ್ನಡ ಪ್ರಸಾರಕ್ಕೆ ಕಾಲ್ತೊಡಕಾಗಿರುವರು. ಈ ಹೊಸಗನ್ನಡಕ್ಕೆ ಹೊಸ ಮಾದರಿಯ ಚಾಲನಿಯನ್ನು ಕೊಟ್ಟು ರಸಾಲಂಕಾರಗಳನ್ನು ವ್ಯಕ್ತಪಡಿಸುವಂತೆ ಸದ್ವಸ್ತು ವರ್ಣನೆಯುಳ್ಳ ಗ್ರಂಥಗಳನ್ನು ಪಂಡಿತರು ಬರೆಯುಹತ್ತಿದರೆ ಮಹಾರಾಷ್ಟ್ರ ಭಾಷೆಯು ಎಷ್ಟು ಹಿಂದುಳಿದಿರುವುದೆಂಬುದನ್ನು ನಾವು ಹಿಂತಿರುಗಿ ನೋಡಬಹುದು. ಭಾಷಾ ಸೌಕರ್ಯಕ್ಕಾಗಿಯೇ ಮಹಾರಾಷ್ಟ್ರೀಯರು ಶಬ್ಧ, ಸಂಧಿಗಳ ಗೋಜಿಗೆ ಹೋಗಲಿಲ್ಲ. ಅರ್ಥ ಗಾಂಭೀರ್ಯದ ಕಡೆಗೇ ಅವರ ದೃಷ್ಟಿಯಿದ್ದದ್ದರಿಂದ ಮಹಾರಾಷ್ಟ್ರ ಭಾಷೆಯು ಈಗಿದ್ದ ಸ್ಥಿತಿಗೆ ಬಂದಿತು."(ಇಂದಿರಾ–ಪು. ೧೪೨–೧೪೩)

ಕೆರೂರರಿಗೆ ಉತ್ತರ ಕರ್ನಾಟಕದಲ್ಲಿದ್ದ ಮರಾಠಿ ಭಾಷೆಯ ಪ್ರಭಾವ ಮತ್ತು ಅಲ್ಲಿನ ವೃತ್ತಿಪರ ನಾಟಕ ಮಂಡಳಿಗಳಿಗೆ ಸ್ಥಳೀಯ ಕನ್ನಡಿಗರು ಮನಸೋತಿದ್ದು ಈ ಮಾತುಗಳ ಹಿನ್ನೆಲೆಯಾಗಿದೆ. ಜೊತೆಗೆ ಸಾಹಿತಿಗಳು ಹೊಸತನಕ್ಕೆ ಒಗ್ಗಿಕೊಳ್ಳದೆ ಹಳೆ ಮಾದರಿಯನ್ನು, ವಸ್ತುವನ್ನು ಅನುಸರಿಸಿ ಕಾವ್ಯ ಸೃಷ್ಟಿಸುತ್ತಿದ್ದರ ಬಗ್ಗೆ ಅಸಮಾಧಾನವಿರುವುದು. ಭಾಷೆ ಸರಳವಿದ್ದಾಗ ಸಾಹಿತ್ಯವನ್ನು ಸಾಮಾನ್ಯರು ಮೆಚ್ಚಿ ಸ್ವೀಕರಿಸುತ್ತಾರೆ. ಅಂತಹ ಸಾಹಿತ್ಯ ರಚನೆಯ ಅಗತ್ಯವಿದೆ. ಜಗತ್ತಿನ ಅನೇಕ ಭಾಷೆಯ ಸಾಹಿತ್ಯವು ಕಾಲದಿಂದ ಕಾಲಕ್ಕೆ ಬದಲಾವಣೆ ಮಾಡಿಕೊಂಡೆ ಬಂದಿದೆ. ಇದು ಕನ್ನಡ ಸಾಹಿತ್ಯಕ್ಕೂ ಅನ್ವಯ. ಕಾಲಧರ್ಮಕ್ಕೆ ಅನುಗುಣವಾಗಿ ಸಾಹಿತ್ಯದ ನೆಲೆಗಳು ಬದಲಾಗಬೇಕು ಎಂಬುದು ಅವರ ಧೋರಣೆ. ವಾಸ್ತವ ಜೀವನಕ್ಕೆ ಸಾಹಿತ್ಯ ಸ್ಪಂದಿಸುವಂತೆ ಇದ್ದಾಗ ಮಾತ್ರ ಅದು ಜನರನ್ನು ತಲುಪುತ್ತದೆ.

ಆದರೆ ರಾಜಗೋಪಾಲಕೃಷ್ಣರಂತಹ ಅನೇಕರು ಕನ್ನಡದ ಜೊತೆ ಸಂಸ್ಕೃತವೂ ಬೆರೆತಿರಬೇಕೆನ್ನುವರು. ಅವರ 'ಜಯವಾಲ್ಮೀಕಿ'ಯ ಮುನ್ನುಡಿಯಲ್ಲಿ "ಕನ್ನಡವು ಅತೀ ಮಧುರವಾದ ಭಾಷೆ, ಯೋಗ್ಯ ಪ್ರದೇಶಗಳಲ್ಲಿ ಸಂಸ್ಕೃತ ಭಾಷೆಯ ಸಮ್ಮೇಳನವಾಗಲೇಬೇಕು. ಕನ್ನಡಕ್ಕೆ ಸಂಸ್ಕೃತವು ಸಹಯೋಗಿಯಾಗದಿದ್ದರೆ ಅಂದವಿಲ್ಲ." ಅಲ್ಲದೆ ಅನುವಾದವು ಪ್ರೌಢಭಾಷೆಯಲ್ಲೇ ಪರಿವರ್ತನೆಯಾಗಬೇಕು ಎನ್ನುವುದನ್ನು ಕುರಿತು "ಪ್ರೌಢಭಾಷೆಯಲ್ಲೇ ಪರಿವರ್ತನೆಯಾಗದಿದ್ದರೆ, ಕಾರ್ತಸ್ವರಕ್ಕೆ ಕಬ್ಬುನವನ್ನು ಬೆಸುಗೆ ಮಾಡಿದಂತಾಗುವುದು" ಎಂದಿದ್ದಾರೆ. (ಇದಕ್ಕೆ ವಿರುದ್ದವಾದ ಹೇಳಿಕೆಯು ೧೧ನೇ ಶತಮಾನದ ೨ನೇ ನಾಗವರ್ಮನು ಸಂಸ್ಕೃತ ಮತ್ತು ಕನ್ನಡವನ್ನು ಸೇರಿಸಿದರೆ ತುಪ್ಪ ಮತ್ತು ಎಣ್ಣೆಯನ್ನು ಒಟ್ಟಿಗೆ ಸೇರಿಸಿದಂತೆ ಸರಿ ಬಾರದು ಎಂದಿದ್ದಾನೆ.) ರಾಜಗೋಪಾಲಕೃಷ್ಣರವರ ಅನುವಾದದ ಭಾಷೆಯನ್ನು ಈ ಭಾಗದಲ್ಲಿ ನೋಡಬಹುದು.

"ವರ್ಷಾ ನಿಶ್ಯೇಷಿತ, ಶರತೆ ಉಪಸ್ಥಿತ, ಆಕಾಶವು ಪರಿಷ್ಕಾರ; ಮೋಡದ ಲೇಶ ಮಾತ್ರವೂ ಇಲ್ಲ. ಸರ್ವತ್ರ ನೀಲವರ್ಣ, ಘನ ನೀಲ, ಅತ್ಯಂತ ಪ್ರಾಗಾಢವಾದ ನೀಲವರ್ಣ! ವರ್ಣನಾತೀತವಾದ

ಮನೋಹರವಾದ ಅಗಾಧ ನೀಲವರ್ಣದ ಶೋಭಾ ರಾಶಿಯೊಳಗಿಂದ ದೊಡ್ಡ ದೊಡ್ಡ ನಕ್ಷತ್ರಗಳು ವಿಶೇಷ ಪ್ರಭೆಯೊಂದಿಗೆ ಉಜ್ವಲವಾಗಿ ಜ್ವಲನಮಾಡುತ್ತಿದೆ."(ಹೊಸಗನ್ನಡದ ಅರುಣೋದಯ- ಪು. ೪೩೨)

ರಾಜಗೋಪಾಲಕೃಷ್ಣರವರ ಹೇಳಿಕೆಯನ್ನು ವಿರೋಧಿಸುವಂತಹ, ಹೊಸಗನ್ನಡದಲ್ಲಿ ಬರೆದುದನ್ನು ಅಲ್ಲಗಳೆಯುವವರ ಬಗ್ಗೆ ಕೆರೂರರು ಹೀಗೆ ಹೇಳಿದ್ದಾರೆ

"....ಹಳಗನ್ನಡವನ್ನು ಹೊಸಗನ್ನಡದಲ್ಲಿ ಕಲಿಸಿ, ಜಾಣತನವೆಂದು ತಿಳಿದು ಕರ್ಣಕಟುಗಳಾದ ಸಂಧಿಗಳನ್ನು ಮಾಡಿ ಅರ್ಥ ತಿಳಿಯುವುದೊತ್ತಟ್ಟಿಗಿರಲಿ, ಓದಲಿಕ್ಕೂ ಬಾರದಂತಹ ಹೊತ್ತಗೆಗಳನ್ನು ಬರೆದವರೇ ಈಗ ಪಂಡಿತರೆಂದೆನಿಸುವರು....." ಎಂದು ಪಂಡಿತ ಪಾಮರರನ್ನು ಟೀಕಿಸಿ "ಈ ಹಳಗನ್ನಡದ ಪ್ರಿಯರೇ, ಪ್ರಚಲಿತ ಕನ್ನಡ ಪ್ರಸಾರಕ್ಕೆ ಕಾಲ್ತೊಡಕಾಗಿರುವವರು. ಹೊಸಗನ್ನಡಕ್ಕೆ ಮಾದರಿಯ ಚಲನವನ್ನು ಕೊಟ್ಟ ರಸಾಲಂಕಾರಗಳನ್ನು ವ್ಯಕ್ತಪಡಿಸುವಂತೆ ಸದ್ವಸ್ತು ವರ್ಣನೆಯುಳ್ಳ ಗ್ರಂಥಗಳನ್ನು ಪಂಡಿತರು ಬರೆಯ ಹತ್ತಿದರೆ, ಮಹಾರಾಷ್ಟ್ರ ಭಾಷೆಯು ಎಷ್ಟು ಹಿಂದುಳಿದಿರುವುದೆಂಬುದನ್ನು ನಾವು ಹಿಂದಿರುಗಿ ನೋಡಬಹುದು," ಎಂದು ತಿಳಿಸಿದ್ದಾರೆ. (ಇಂದಿರಾ ಮುನ್ನುಡಿ)

ಈ ಹೊಸಗನ್ನಡ ಹಾಗೂ ಹಳಗನ್ನಡ ಬಳಕೆಯು ಕೆಲವೊಮ್ಮೆ ಕೃತಿಕಾರರಿಗೆ ದೊಡ್ಡ ಸಮಸ್ಯೆಯಾಗಿ ಕಾಡಿದ್ದಿದೆ. ಪ್ರಜ್ಞಾಪೂರ್ವಕವಾಗಿ ಹೊಸಗನ್ನಡದಲ್ಲಿ ಬರೆಯಹೊರಟರೂ ಹಳಗನ್ನಡ ಇಲ್ಲವೆ ಸಂಸ್ಕೃತದ ಸೆಳೆತದಿಂದ ಪೂರ್ಣವಾಗಿ ಹೊರಬರಲು ಸಾಧ್ಯವಾಗಿಲ್ಲ. ೧೮೭೪ರಲ್ಲಿ ಗಂಗಾಧರ ಮಡಿವಾಳೇಶ್ವರ ತುರಮುರಿಯವರು ಬಾಣನ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕೃತಿಯ ಮುನ್ನುಡಿಯಲ್ಲಿ ಹೊಸಗನ್ನಡದಲ್ಲಿ ಬರೆಯುತ್ತಿದ್ದೀನ ಎಂದು ಹೇಳಿದರೂ ಸಂಸ್ಕೃತದ ಗದ್ಯದ ಗಾಂಭೀರ್ಯವೇ ಕೃತಿಯಲ್ಲಿ ಕಾಣಬಹುದಾಗಿದೆ. ತುರಮುರಿಯವರು ತಮ್ಮ ಕೃತಿಯಲ್ಲಿ ದಿನಬಳಕೆಯ ನುಡಿಯನ್ನು ಬಳಸಿಕೊಂಡರೆ, ಅಜ್ಞಾತ ವ್ಯಕ್ತಿಯು ಹಳಗನ್ನಡ ಶೈಲಿಯಲ್ಲಿ ಹಾಗೂ ಱ ಟಗಳ ಬಳಕೆಯನ್ನು ಮಾಡಿಕೊಂಡು ಸಂಸ್ಕೃತದ ಶಬ್ದಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾನೆ. ಕನ್ನಡ ವಚನ ಕಾದಂಬರಿ ಈ ಭಾಗವನ್ನು ಗಮನಿಸಿ-

"ಆಮೇಲೆ ಆ ಮುನಿಯು ಅದೇನನೊ ಒಡಂಬಡಿಸುವಂತೆ ನನ್ನೊಂದಿಗೆ ನುಡಿದುದು; ಹೆಣ್ಣೆ, ಇನ್ನು ನಿನ್ನ ಆಕಾರವ ನೋಡಿದರೆ ಬಾಲ್ಯ. ಆದರೂ ಮನಸ್ಸಿನಲ್ಲಿ ಕುದುಬು ಇಲ್ಲ, ಮೋಸವಿಲ್ಲ ಎಂಬ ಹಾಗೆ ಕಾಣಿಸುತ್ತದೆ. ನಾವು ಹೇಳಿದ ಮಾತನ್ನು ಕೇಳೀಯಾ? ಎನಲಾಗಿ ; ಅದಕ್ಕೆ ನಾನು ವಿನಯದಿಂದ ಕೈಮುಗಿದು ಆದರಗೂಡಿ ತಿಳುಹಿದೆನು; ಏನು ಕಾರಣ ಹೀಗೆ ಬುದ್ಧಿಗಲಿಸುತ್ತಿದ್ದೀರಿ? ನಾನು ಎಷ್ಟರವಳು? ಈ ಮೂರು ಲೋಕದಲ್ಲಿಯೂ ಪೂಜೆಗೊಂಬ ನಿಮ್ಮಂಥ ಮುನಿಗಳು ನಮ್ಮಂಥವರನ್ನು ಕಟಾಕ್ಷಿಸುವುದೇ ನಾವು ಮಾಡಿದ ಪುಣ್ಯ. ಒಂದು ಊರಿಗವ ಕೊಟ್ಟು ಮಾಡಿಸಿರಿ ಎಂದು ಹೇಳುವುದೇನು? ಆದುದರಿಂದ ಅವಶ್ಯ ನಾನು ಮಾಡತಕ್ಕ

ಸೇವೆಯನ್ನು ಬುದ್ಧಿಗಲಿಸಿ ನನ್ನಲ್ಲಿ ತಮ್ಮ ಕೃಪೆ ಮಾಡಬೇಕೆಂದು ಬಿನ್ನಹ ಮಾಡಲಾಗಿ ; ಅವರು ಬಹು ಸ್ನೇಹಗೂಡಿ ನನ್ನನ್ನು ತಮ್ಮ ಸಖಿಯಂತೆ, ತಮಗೆ ಉಪಕಾರ ಮಾಡಿದವಳಂತೆ ತಮಗೆ ಪ್ರಾಣಪದವಾಗಿ ಎಣಿಸಿ,...." (ಹೊಸಗನ್ನಡದ ಅರುಣೋದಯ–ಪು. ೫೬೧) ಏಕ ಕಾಲದಲ್ಲಿ ಹೊಸ ವಿಚಾರಗಳು ಪ್ರವೇಶಿದಾಗ ಸ್ಥಳೀಯರಿಗೆ, ಸಂಪ್ರದಾಯಸ್ಥರಿಗೆ, ಭಾಷಾಭಿಮಾನಿಗಳಿಗೆ ಪೂರ್ವದ ಮಾದರಿಗಳೇ ಹೆಚ್ಚು ಹಿತವಾಗಿ ತೋರುವಂತೆ ಈ ಕೃತಿಕಾರನಿಗೆ ಅನಿಸಿರಬಹುದು.

ಇಂಗ್ಲಿಷ್‌ನ ಶಿಕ್ಷಣವು ಕರ್ನಾಟಕವನ್ನು ಪ್ರವೇಶಿಸುವ ಸಂದರ್ಭಕ್ಕಾಗಲೇ ಕನ್ನಡದಲ್ಲಿ ಗದ್ಯ ಮಾದರಿಯ ಕೃತಿ ರಚನೆಗಳು ಅರಂಭವಾಗಿದ್ದವು. ಮುದ್ರಾಮಂಜೂಷ, ಸೌಗಂಧಿಕಾ ಪರಿಣಯ, ಕಲಾವತಿ ಪರಿಣಯ ಕೃತಿಗಳು ಅದರಲ್ಲಿ ಪ್ರಮುಖವಾದವು. ಹಾವನೂರರು ಇದನ್ನು 'ರೋಮ್ಯಾಂಟಿಕ್ ಪದ್ಧತಿ'ಯ ಹೊಸ ಕಾದಂಬರಿಯು 'ಕಲಾವತಿ ಪರಿಣಯದ' ಮೂಲಕ ಎಂದಿದ್ದಾರೆ. ಭಾಷೆ ಹಾಗೂ ಶೈಲಿಯೂ ಹೊಸಗನ್ನಡದ ಲಕ್ಷಣದ ಮಾದರಿಯಲ್ಲಿವೆ.

"ಕಲಾವತಿಯ ಮಾತು : 'ನಾನು ಧರ್ಮವಶಳಾಗಿ ತಡೆದಿರುವೆನು. ಇಷ್ಟಕ್ಕೆ ನೀವು ನನ್ನನ್ನು ತೊರೆಯುವುದಾದರೆ ನಿಮ್ಮ ಅಂಗಸಂಗ ಹೇಗೂ ಮಾಡಿ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಕುವರನಂದ ನಿಮ್ಮ ನಿಗ್ರಹ ಮಾಡಿಸುವೆ". (ಹೊಸಗನ್ನಡದ ಅರುಣೋದಯ–ಪು. ೫೩೦).

ಈ ಕೃತಿಯನ್ನು ಕುರಿತಂತೆ "ಇದು ೧೮೧೫ರ ಸುಮಾರಿಗೆ ಧಂಡಕ ಗದ್ಯದಲ್ಲಿ ರಚಿತವಾದದ್ದು. ಈ ಕೃತಿಯೇ ಕನ್ನಡದ ಮೊದಲ ಕಾದಂಬರಿ ಎಂದು ತಿಳಿಯಬಹುದಾಗಿದೆ" ಎಂದು ಗೋವಿಂದ ಪೈಗಳು ೧೯೫೦ರ ತಮ್ಮ ಮುಂಬಯಿ ಸಾಹಿತ್ಯ ಸಮ್ಮೇಳನದಲ್ಲಿ ಹೇಳಿದ್ದಾರೆ. ಈ ಕೃತಿಯು ಅತಿಮಾನುಷ ಶಕ್ತಿಗಳ ಹಿನ್ನೆಲೆ ಹಾಗೂ ಐತಿಹಾಸಿಕ ಅಂಶದ ಹಿನ್ನೆಲೆಯನ್ನು ಹೊಂದಿದೆ. ಇದು ಆಧುನಿಕ ಕಾದಂಬರಿಯ ವಸ್ತು ವಿಷಯವನ್ನು ಒಳಗೊಂಡಿಲ್ಲವಾದರೂ ಹೆಣ್ಣು ಮಗಳೊಬ್ಬಳ ದಿಟ್ಟ ನಿರ್ಧಾರ ಹಾಗೂ ಆಕೆಯ ಸಾಹಸಮಯ ಗುಣ ಮುಖ್ಯವಾದದ್ದು

ಅನ್ಯ ಭಾಷೆಯ ಅನುವಾದದ ಸಂದರ್ಭದಲ್ಲಿ ಎದುರಾಗುವ ಮತ್ತೊಂದು ಸಮಸ್ಯೆ ಹೊಸ ಪದಗಳ ಬಳಕೆ. ಹೊಸ ವಿಚಾರಗಳು ಜನರಿಗೆ ತಲುಪಬೇಕಾದರೆ, ಕೆಲವೊಮ್ಮೆ ಅಪರಿಚಿತ ಪದಗಳು ಸಾಹಿತ್ಯದ ಮೂಲಕ ಭಾಷೆಯನ್ನು ಪ್ರವೇಶಿಸುತ್ತದೆ. ಆಗ ಮಡಿವಂತಿಕೆಯ ಪ್ರಶ್ನೆಗಳು ಹಾಗು ಅದರ ಸ್ವೀಕರಣೆಯ ಬಗ್ಗೆ ಗೊಂದಲಗಳು ಉಂಟಾಗುತ್ತದೆ. ಸಂಪ್ರದಾಯದ ವಿಚಾರಗಳು ಇಲ್ಲವೆ ಅಪರಿಚಿತ ವಸ್ತುಗಳು ಆ ಕೃತಿಯ ಮುಖ್ಯ ಭಾಗವೆಂದಾದರೆ ಅದನ್ನು ಬಿಡಲು ಸಾಧ್ಯವಿಲ್ಲ. ಅಂತಹ ಸಂದರ್ಭಗಳು ಅನುವಾದದ ಸಂದರ್ಭದಲ್ಲಿ ಎದುರಾಗುತ್ತವೆ. ಆದರೆ ಹೊಸ ಪದಗಳ ಸ್ವೀಕರಣೆ ಅವಶ್ಯಕ ಹಾಗೂ ಅನಿವಾರ್ಯವಾದುದು ಎಂಬುದನ್ನು ಕುರಿತು ಡಿವಿಜಿಯವರು ಹೇಳಿರುವ ಹೇಳಿಕೆ ಇಲ್ಲಿ ಪ್ರಸ್ತುತ.

"ಅನ್ಯ ದೇಶಗಳ ಅಭಿಪ್ರಾಯವನ್ನೂ, ಜ್ಞಾನವನ್ನೂ ನಮ್ಮ ಜನರಿಗೆ ಪರಿಚಯ ಮಾಡಿಕೊಡಬೇಕಾದರೆ ಕೆಲವು ಅಪರಿಚಿತ ಪದಗಳನ್ನು ಉಪಯೋಗಿಸಲೇ ಬೇಕಾಗುತ್ತದೆ. ಈ

ನೂತನ ಪದ ಸೃಷ್ಟಿಯ ಕಾರ್ಯವು ಕಷ್ಟದ ಕೆಲಸವೇ ಹೌದು. ಆ ಕೆಲಸವನ್ನು ಮಾಡಿದ ಮೇಲೆ ಅದು ಜನರಲ್ಲಿ ರೂಢಿಗೆ ಬರುವವರೆಗೂ ಅವರಿಗೆ ಕಷ್ಟವಾಗಿ ತೋರುವುದು ನಿಜ. ಆದರೆ ಒಂದು ಭಾಷೆಯನ್ನು ಬೆಳೆಸಿ ಅದರ ಜನವನ್ನು ಮೇಲಕ್ಕೆತ್ತಬೇಕೆಂದು ಆಶೆ ಪಡುವವರು ಇಂಥಾ ಕಷ್ಟಕ್ಕೆ ಸಿದ್ಧರಾಗಿರಬೇಕು. ಇಷ್ಟು ಮಟ್ಟಿನ ಕಷ್ಟವನ್ನು ಕನ್ನಡ ಭಾಷಣಕರ್ತರೂ ಲೇಖಕರೂ ಸಹಿಸಲು ಸಿದ್ಧರಾದರೆ, ಕನ್ನಡದಲ್ಲಿ ಒಂದು ಹೊಸ ಕಾಂತಿಯೂ ಉಂಟಾಗುವುದು ಅಸಾಧ್ಯವಾಗದು." (ಆಧುನಿಕ ಕನ್ನಡ ಕವಿಗಳ ಕಾವ್ಯ ಬಿಜ್ಞಾಸೆ -ಪು. ೧೦೪)

ಟಿ.ಪಿ ರೈಸ್‌ರವರ ಕನ್ನಡ ಸಾಹಿತ್ಯದ ಭಾಷೆ ಕುರಿತಂತೆ ತಮ್ಮ ಆಲೋಚನೆ ಹೀಗೆ ವ್ಯಕ್ತವಾಗಿದೆ. "ಈಗಿನ ಕಾಲದ ಒಟ್ಟು ಸಾಹಿತ್ಯ ಗದ್ಯವಾಗಿದ್ದು; ಪ್ರಾಚೀನ ಭಾಷೆ ಹಾಗೂ ಪ್ರಕಾರವನ್ನು ಹೊಸ ಭಾಷೆ ಹಾಗೂ ಬರವಣಿಗೆಯ ಶೈಲಿ ಆವರಿಸಿದೆ ಹಾಗು ಸಾಮಾನ್ಯ ವಿದ್ಯಾವಂತನೂ ಓದುವಂತಾಗಿದೆ."[2](ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೪೬)

ಒಟ್ಟಾರೆ ವಿದ್ವಾಂಸರ ಪ್ರಕಾರ ಕಾದಂಬರಿಯ ಭಾಷೆ ಸರಳ ಹಾಗೂ ಸ್ಥಳೀಯವಾಗಿರಬೇಕು. ಸಾಮಾನ್ಯರೂ ಸಾಹಿತ್ಯವನ್ನು ಓದುವಂತೆ ಆಗಬೇಕು. ಆಗ ಮಾತ್ರ ಸಾಹಿತ್ಯ ನಿರ್ಮಾಣದ ಸಾರ್ಥಕತೆ ಸಾಧ್ಯವಾಗುತ್ತದೆ. ಇಂತಹ ಆಲೋಚನೆ ಹೊಸಗನ್ನಡ ಸಾಹಿತ್ಯದ ಚಿಂತನೆಗಳಲ್ಲಿ ಒಂದು. ಇದಕ್ಕೆ ಅನುವಾದಿತ ಕೃತಿಗಳು ಪ್ರೇರಣೆ ನೀಡಿದವು.

### ವಸ್ತು

ವಸಾಹತುಶಾಹಿ ವ್ಯವಸ್ಥೆಯು ಭಾರತೀಯ ಸಾಮಾಜಿಕ ಪರಿಸರದ ಮೇಲೆ ಉಂಟುಮಾಡಿದ ಪ್ರಭಾವ ಪ್ರಮುಖವಾದದ್ದು. ಅಧಿಕಾರದ ಚುಕ್ಕಾಣಿಯನ್ನು ಹಿಡಿಯುವ ಹಿನ್ನೆಲೆಯಲ್ಲಿ ಅನೇಕ ಬದಲಾವಣೆಗಳು, ಹೊಸ ಕಾಯ್ದೆಗಳು, ಹೊಸ ಮಾದರಿಯ ಶಿಕ್ಷಣ ನೀತಿ ಇವು ಭಾರತೀಯರ ಆಲೋಚನೆಗಳ ಮೇಲೆ ಹೊಸ ಬೆಳಕನ್ನು ಚೆಲ್ಲಿತು. ಬ್ರಿಟಿಷರು ಇಲ್ಲಿನ ವ್ಯವಸ್ಥೆಯನ್ನು ತಮ್ಮ ಆಡಳಿತಕ್ಕೆ ಪೂರಕವಾಗಿ ಬದಲಾಯಿಸಿಕೊಳ್ಳಲು ಹಂತ ಹಂತವಾಗಿ ಪ್ರಯತ್ನಿಸಿದರು. ಇಲ್ಲಿನ ಜನರ ದೌರ್ಬಲ್ಯಗಳನ್ನು ತಮಗೆ ಅನುಕೂಲವಾಗುವಂತೆ ಬಳಸಿಕೊಂಡರು. ಜಾತಿ ವ್ಯವಸ್ಥೆ, ಶಿಕ್ಷಣ, ಸ್ತ್ರೀ ಶಿಕ್ಷಣ, ವಿಧವಾವಿವಾಹ, ಅಧಿಕಾರ ಅಸ್ತಾಂತರ, ಬಾಲ್ಯ ವಿವಾಹ ಮುಂತಾದ ವಿಚಾರ ಕುರಿತಂತೆ ಬದಲಾವಣೆ ತರುವ ಯತ್ನ ನಡೆಸಿದರು. ಉದಾಹರಣೆಗೆ '೧೮೫೬ರಲ್ಲಿ ಬ್ರಿಟೀಷರು ತಂದ ವಿಧವಾ ವಿವಾಹಕ್ಕೆ ಸಂಬಂಧಿಸಿದಂತೆ ೧೫ನೇ ಆಕ್ಟನ್ನು ಗಮನಿಸಬಹುದು.' ಇವರು ಸ್ತ್ರೀಯರಿಗೂ ಶಿಕ್ಷಣ ನೀಡಬೇಕೆಂದು ಪ್ರಯತ್ನಿಸಿದರು. ಇಂಗ್ಲಿಷ್ ಮಾದರಿಯ ಶಿಕ್ಷಣದ

---

2 'it is evident that the bulk of the literature will hence forth be in verse, and that a vocabulary and style intelligible to all readers of ordinary education will more and more take the place of archaic words and forms"

ಜೊತೆಗೆ ಇಂಗ್ಲಿಷ್ ಭಾಷೆಯನ್ನು ಕಲಿಸಿದರು. ಅಲ್ಲದೆ ಅವರ ಸಾಹಿತ್ಯದ ಪರಿಚಯ ನೀಡಿದರು. ಕ್ರೈಸ್ತ ಮಿಶನರಿಗಳು ಧರ್ಮ ಪ್ರಚಾರಕ್ಕಾಗಿ ಬೈಬಲ್ ಹಾಗೂ ಅನೇಕ ಕೃತಿಗಳನ್ನು ಅನುವಾದ ಮಾಡಿದರು. ಇದೆಲ್ಲದ ಪರಿಣಾಮ ಕನ್ನಡ ಸಾಹಿತ್ಯದ ಚಿಂತನೆಗಳು ಬದಲಾದವು.

ಪಿ.ಮಂಗೇಶರಾವ್‌ರವರು ಇಂಗ್ಲಿಷ್ ಸಾಹಿತ್ಯದ ಅನುಕರಣದಿಂದ ಕನ್ನಡ ಸಾಹಿತ್ಯದಲ್ಲಿ ಆದ ಬದಲಾವಣೆಯನ್ನು ಕುರಿತು "ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ.... ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ, ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ, ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್ ಶಕ್ತಿಯನ್ನು ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಲ್ಲಿ ಬರಬಹುದೆಂದೂ, ಹಳಗನ್ನಡಕ್ಕಿಂತ ನಡುಗನ್ನಡವನ್ನು ಹೆಚ್ಚಾಗಿ ಪ್ರಯೋಗಿಸುವರೆಂದೂ" ಹೇಳಿದ್ದಾರೆ (ಕನ್ನಡ ಎರಡನೆಯ ಪದ್ಯಪುಸ್ತಕ–ಮುನ್ನುಡಿ) ಈ ವಿಚಾರಗಳೇ ಹೊಸಗನ್ನಡ ಸಾಹಿತ್ಯದ ಚಿಂತನೆಗಳಾಗಿವೆ. ಹಿಂದಿನ ಅಲೌಕಿಕ ಸಾಹಿತ್ಯದ ಲಕ್ಷಣಗಳನ್ನು ನಿರಾಕರಿಸಿ ವಾಸ್ತವತೆಯ ರೂಪವನ್ನು ನೀಡಿರುದೇ ೧೯ನೇ ಶತಮಾನದ ಮಹತ್ತರ ಬದಲಾವಣೆ.

ಇಂತಹ ಒಂದು ಬದಲಾವಣೆ ಕನ್ನಡ ಸಾಹಿತ್ಯಕ್ಕೆ ಅಗತ್ಯವಾಗಿತ್ತು. ಕೂಪಮಂಡೂಕದಂತಿದ್ದ ಮನಸ್ಥಿತಿಗೆ ಜಗತ್ತಿನ ಹೊಸ ಮಾದರಿಯ ಜೀವನ ಕ್ರಮದ ಪರಿಚಯವಾಯಿತು. ಅಲೌಕಿಕ ಮತ್ತು ಅಸಂಭವನೀಯ ವಿಚಾರಗಳ ಬಗೆಗಿನ ಚಿಂತನೆಗಿಂತ ಕಾದಂಬರಿಯ ವಸ್ತು ವಾಸ್ತವಿಕ ವಿಚಾರಗಳು, ಸಮಸ್ಯೆಗಳು ಅಲ್ಲದೆ ಮಾನವೀಯ ಮೌಲ್ಯಗಳನ್ನು ಒಳಗೊಂಡಿರಬೇಕು. ಇ.ಎಂ.ಫಾಸ್ಟರನ ಪ್ರಕಾರ "ಕಥೆಯು ನಾವೆಲ್‌ನ ಮೂಲಭೂತ ಘಟಕವಾಗಿದೆ. ಆದರೆ ಕಥೆಯೇ ನಾವೆಲ್‌ನಲ್ಲಿ ಪ್ರಧಾನವಲ್ಲ. ಅದಕ್ಕಿಂತಲೂ ಉನ್ನತ ಸಂವಿಧಾನವನ್ನು ನಾವೆಲ್ ಹೊಂದಿದೆ" ಹಾಗೂ "ಕಾಲಾನುಕ್ರಮವಾದ ಘಟನೆಗಳ ಸರಮಾಲಿಕೆಯಾಗಿರುವ ಕಥೆಯನ್ನು ಒಳಗೊಂಡೂ ನಾವೆಲ್ ಮೌಲ್ಯಾತ್ಮಕ ಜೀವನವನ್ನು ಪ್ರತಿನಿಧಿಸುತ್ತವೆ. ಕಥೆ ಕೇವಲ ಘಟನೆಗಳ ಕಾಲಾನುಕ್ರಮ ಜೋಡಣೆಯಾದರೆ ನಾವೆಲ್ ಕಾರಣಗಳನ್ನು ಶೋಧಿಸುತ್ತದೆ" ಎಂದು ಹೇಳುತ್ತಾನೆ. ಆದ್ದರಿಂದ ಕಥನ ಪ್ರಕಾರಕ್ಕಿಂತ ನಾವೆಲ್‌ನ ಸಂವಿಧಾನ ರಚನೆ ಭಿನ್ನವಾದದ್ದು. ಕೇವಲ ಇಂಗ್ಲಿಷ್ ಕಾದಂಬರಿಗಳಷ್ಟೇ ಅಲ್ಲದೆ ಅಲ್ಲಿನ ಅನೇಕ ವೈಚಾರಿಕ ಲೇಖನಗಳು ಅನುವಾದಗೊಂಡು ಅನೇಕ ಸಾಮಾಜಿಕ ವಿಚಾರಗಳ ಮೇಲೆ ಹೊಸ ಆಲೋಚನೆಗಳು ಮೂಡುವಂತೆ ಮಾಡಿದವು. ಅವುಗಳಲ್ಲಿ ಪ್ರಮುಖವಾದ ಲೇಖನಗಳೆಂದರೆ 'ಹೆಣ್ಣು ಮಕ್ಕಳ ಬಲತ್ಕಾರ ವಿದ್ಯಾಭ್ಯಾಸ', 'ಅಬಲೋನ್ನತಿ ಮಾಲಾ', 'ಬರೋಡಾ ಸಂಸ್ಥಾನದಲ್ಲಿನ ವಿದ್ಯಾಭ್ಯಾಸ', 'ಹಿಂದೂ ದೇಶದ ಸ್ತ್ರೀಯರು' ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಯಿತು. ರೊದ್ದ ತಿರುಮಲಾರ್ಯನು 'ಸ್ತ್ರೀ ಶಿಕ್ಷಣದ ಅವಶ್ಯಕತೆ'ಯನ್ನು ಕುರಿತಂತೆ ಗ್ರಂಥವೊಂದನ್ನು ರಚಿಸಿದನು. ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿನ ಸ್ತ್ರೀಪರ ಚಿಂತನೆಗಳನ್ನು ಕುರಿತು ಬರೆದ ಲೇಖನಗಳು ಅನುವಾದವಾದವು. ಇದರಲ್ಲಿ ಮರಾಠಿಯ ಪಂಡಿತ ರಮಾಬಾಯಿಯ

'ಸ್ತ್ರೀ ಧರ್ಮನೀತಿ' ಪುಸ್ತಕವು ಅನುವಾದಗೊಂಡು ಮೈಸೂರಿನ ಬಲಿಕಾ ಪಾಠಶಾಲೆಯಲ್ಲಿ ಪಠ್ಯವಾಯಿತು. ಈ ಲೇಖನಗಳಲ್ಲಿ ವ್ಯಕ್ತವಾದಂತಹ ವಿಚಾರಗಳು ಕನ್ನಡ ಕಾದಂಬರಿಯ ಮೇಲೆ ಪ್ರಭಾವ ಉಂಟುಮಾಡಿದವುಗಳಲ್ಲಿ ಒಂದು. ಆ ಲೇಖನಗಳಲ್ಲಿನ ವಿಚಾರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ನೀಡಲಾಗಿದೆ.

ಬರೋಡ ಸಂಸ್ಥಾನದಲ್ಲಿನ ವಿದ್ಯಾಭ್ಯಾಸ ಲೇಖನದಲ್ಲಿ ಬರೋಡ ಸಂಸ್ಥಾನದಲ್ಲಿ ಹೆಣ್ಣುಮಕ್ಕಳ ಜೀವನ ಚಿತ್ರಣ ಅನಾವರಣಗೊಂಡಿದೆ. ೧೫೦೦ಕ್ಕೂ ಹೆಚ್ಚು ಮಹಿಳೆಯರು ಒಂದೆಡೆ ಸೇರಿ ತಮ್ಮ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವ ಸಂದರ್ಭವನ್ನು ಇಲ್ಲಿ ನೀಡಲಾಗಿದೆ. ಶಿಕ್ಷಣ ಕಲಿತ ಹೆಣ್ಣು ಮಕ್ಕಳಿಂದಾಗುವ ಕಾರ್ಯವನ್ನು ಕುರಿತು ಹೀಗೆ ಹೇಳುತ್ತಾರೆ. "ವಿದ್ಯಾವತಿಯರಾದ ಸ್ತ್ರೀಯರು ಸ್ವಧರ್ಮವನ್ನು ಅನುಸರಿಸಿ ಕುಲಪತಿಯನ್ನಾಗಿಯೂ, ಮಕ್ಕಳನ್ನು ಧರ್ಮಮಾರ್ಗ ಪ್ರವೃತ್ತರನ್ನಾಗಿ ಮಾಡುವುದರಲ್ಲಿ ನಿರತವಾಗಿಯೂ ಇದ್ದರೆ ಸ್ತ್ರೀ ವಿದ್ಯಾಭ್ಯಾಸವನ್ನು ಯಾರೂ ನಿಂದಿಸಲಾರರು. ವಿದ್ಯೆಯ ಫಲವು ಇಂಥಾದುದೆಂದು ಜನರು ತಿಳಿದರೆ ಸ್ತ್ರೀ ವಿದ್ಯಾರ್ಥಿ ವೃದ್ಧಿಯಲ್ಲಿ ತಾವೇ ಬದ್ಧಕಂಕಣರಾಗಿ ನಿಲ್ಲುವರು. ಇತರ ಜನಾಂಗಗಳಲ್ಲಿ ಸ್ತ್ರೀ ವಿದ್ಯಾಭ್ಯಾಸವು ಪ್ರಾಚುರ್ಯಕ್ಕೆ ಬರಲು ಮುಖ್ಯ ಕಾರಣವಾಗಿದೆ. ಗೃಹ ಕೃತ್ಯಗಳನ್ನು ನಿರ್ವಹಿಸುವುದರಲ್ಲಿ ಚತುರತೆಯಿಂದಲೂ, ಪತಿಗಳಿಗೆ ಮುಖ್ಯ ಸಹಾಯರೆಂತಲೂ ಹೊಗಳಿಸಿಕೊಳ್ಳುವ ಕೆಲವು ಮಂದಿ ಒಳ್ಳೆಯವರಾದ ವಿದ್ಯಾವತಿಯರನ್ನೂ ಇತರ ಜನಾಂಗಗಳಲ್ಲಿ ನಾನು ಕೇಳಿಯೂ ಬಲ್ಲೆ. ನೋಡಿಯೂ ಬಲ್ಲೆ. ಇಲ್ಲಿಯೂ ಅಂಥವರು ಇರಬೇಕಾಲ್ಲವೆ?"(ವಿದ್ಯಾದಾಯಿನಿ – ಏಪ್ರಿಲ್ ೧೯೦೦ ಭಾಗ ೮ ಸಂಚಿಕೆ ೪). ಸ್ತ್ರೀ ಶಿಕ್ಷಣ ಹಾಗೂ ಸ್ವಾತಂತ್ರ್ಯ ಕುರಿತಂತೆ ವಿದೇಶಿಯರಲ್ಲಿ ಇದ್ದ ಧೋರಣೆಗೂ; ಭಾರತೀಯರ ಮನಸ್ಥಿತಿಗೂ ಸಾಕಷ್ಟು ವ್ಯತ್ಯಾಸವಿತ್ತು. ಇಲ್ಲಿ ಸ್ತ್ರೀ ಶಿಕ್ಷಣ ಕುರಿತು ಮಾತುಗಳನ್ನಾಡುತ್ತಿದ್ದರೂ ಆ ಶಿಕ್ಷಣ ಆಕೆಯ ಕೌಟುಂಬಿಕ ಅಭಿವೃದ್ಧಿಗಾಗಿ ಮಾತ್ರ. ಆದರೆ ಪಾಶ್ಚಿಮಾತ್ಯ ಚಿಂತನೆಯೇ ಬೇರೆಯಾಗಿತ್ತು. ಭಾರತೀಯ ಪರಿಸರ ಸ್ತ್ರೀಯರಿಗೆ ಸ್ವಾತಂತ್ರ್ಯದ ಜೊತೆಗೆ ಅದರ ಎಲ್ಲೆಯನ್ನೂ ನಿಗದಿಪಡಿಸಿದ್ದರು. ಇಂದಿರಾ ಕಾದಂಬರಿಯ ಮುನ್ನುಡಿಯನ್ನು ಇಲ್ಲಿ ನೆನಪಿಸಬಹುದು.

ಸ್ತ್ರೀ ಶಿಕ್ಷಣದ ಮಹತ್ವವನ್ನು ಕುರಿತಂತೆ 'ಹೆಣ್ಣುಮಕ್ಕಳ ಬಲತ್ಕಾರ ವಿದ್ಯಾಭ್ಯಾಸ' ಎಂಬ ಲೇಖನವನ್ನು ಪ್ರಕಟಿಸಿದರು. ಇದರಲ್ಲಿ ಯೂರೋಪಿನ ರಾಷ್ಟ್ರಗಳಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸ ಮತ್ತು ಅದರಿಂದಾಗುವ ಪ್ರಯೋಜನವನ್ನು ಕುರಿತು "ವಿದ್ಯಾವತಿಯರಾದ ತಾಯಿಯರಿರುವ ಯೂರೋಪ್ ಖಂಡದಲ್ಲಿ ಮಕ್ಕಳು ಸುಶಿಕ್ಷಿತರಾಗಿ ಬೆಳೆವುದರ ದೆಶೆಯಿಂದಲೇ ಆ ಖಂಡದಲ್ಲಿರುವ ಜನರು ಈ ಭೂಮಂಡಲವನ್ನೆಲ್ಲಾ ಅಲ್ಲಾಡಿಸುವಷ್ಟು ಎಂದರೆ ಬೆರಗುಪಡಿಸುವಷ್ಟು ಚತುರರಾಗಿರುವರು. ಈ ದೇಶದಲ್ಲಾರೋ ವಿದ್ಯಾ ಕಲಿಯದಿರುವ ತಾಯಿಯರೆ ಬಹಳ. ಅವರು ಮಕ್ಕಳು ಶಿಕ್ಷಣಕ್ಕೆ ಗಮನಕೊಡುವುದೂ ಕಡಿಮೆ. ಮಕ್ಕಳು ಹೇಗಾದರೂ ಬೆಳೆದರೆ ಸಾಕೆಂದು ಉದಾಸೀನರಾಗುವುದರಿಂದಲೂ ಕೆಲವರು ಚಿಕ್ಕ ಮಕ್ಕಳಿಗೆ ವಿನೋದಕ್ಕೆಂದು ಸುಳ್ಳು ಹೇಳುವ, ಮೋಸ ಮಾಡುವ, ಹಟಹಿಡಿಯುವ, ಸೋಮಾರಿಗಳಾಗುವ ಅಥವಾ ಜಿತೇಂದ್ರಿಯರಾಗದೇ

ಇರುವುದಕ್ಕೆ ಅವಕಾಶವಾಗುವ ಮಾತುಗಳನ್ನೇ ಆಗಾಗ್ಗೆ ಕಲಿಸುತ್ತಾ ಅವರ ಸ್ವಭಾವವನ್ನು ಕೆಡಿಸುವರು......... ತಾಯಿಯರು ವಿದ್ಯಾವತಿಯರಾಗುವುದರಿಂದ ಮಕ್ಕಳನ್ನು ಸುಶಿಕ್ಷೆಯಲ್ಲಿಡುವುದಕ್ಕೆ ಅನುಕೂಲವಾಗುವುದೆಂಬುದೊಂದೇ ಅಲ್ಲ ಇನ್ನೂ ಅನೇಕ ಪ್ರಯೋಜನಗಳು ಇರುವುವು." (ವಿದ್ಯಾದಾಯಿನಿ–ಪು. ೨೪೭). ಈ ಆಲೋಚನೆಯು ಇಂದಿರಾ, ಭಾಗೀರಥಿಯಂತಹ ಕಾದಂಬರಿಗಳಲ್ಲಿ ಅಭಿವ್ಯಕ್ತವಾಯಿತು.

'ಸುದರ್ಶನ' ಪತ್ರಿಕೆಯಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ಅನೇಕ ಲೇಖನಗಳು ಪ್ರಕಟವಾದವು. ಇದರಲ್ಲಿ ಬಾಲಿಕಾ ವಿವಾಹದ ಬಾಧಕಗಳ ಕುರಿತು ಲೇಖನಗಳನ್ನು ಪ್ರಕಟಿಸಿ; ಇದಕ್ಕೆ ವಿರುದ್ಧವಾಗಿರುವ ಹಿಂದೂ ಶಾಸ್ತ್ರಾಧಾರಗಳನ್ನು ವಿವರವಾಗಿ ನೀಡಲಾಯಿತು. ಕೊನೆಗೆ ಇದರಲ್ಲಿ "ಈ ಆಧಾರಗಳಿಂದ ಯೌವನಸ್ಥ ಸ್ತ್ರೀಯರ ವಿವಾಹವೇ ಶಾಸ್ತ್ರ ಪ್ರಕಾರಯುಕ್ತ"ವೆಂಬ ನಿರ್ಣಯಕ್ಕೆ ಬರಲಾಯಿತು. ಅಲ್ಲದೆ ಈ ಲೇಖನದಲ್ಲಿಯೂ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಲಾಯಿತು. ಇದು ಈ ಪತ್ರಿಕೆಯ ಸಂಪಾದಕರ ಲೇಖನ.

"ಸ್ತ್ರೀಯರಿಗೆ ವಿದ್ಯಾಭೂಷಣವು ಅಗತ್ಯವಿಲ್ಲವೆಂಬ ಹಾಗೆ ಅನೇಕರ ಅಭಿಪ್ರಾಯವಿದೆ. ಸ್ತ್ರೀಯರು ವಿದ್ಯಾವತಿಯಾದರೆ ದುರ್ಗುಣವಂತರಾದರಂತ ತಿಳಿಯುತ್ತಾರೆ. ಈ ಅಭಿಪ್ರಾಯ ತಪ್ಪು. ಇದು, ಹುಡುಗರು ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದರೆ ಹೆಂಡ ಕುಡಿಯುತ್ತಾರೆಂಬುದಕ್ಕೆ ಸರಿ. ಯಾರಾದರೂ ಒಬ್ಬಿಬ್ಬರು ಇಂಗ್ಲಿಷ್ ಕಲಿತುಕೊಂಡವರಲ್ಲಿ ಹೆಂಡ ಯಾ ಮದ್ಯಪಾನ ಮಾಡಿರಬಹುದು. ಅವರು ಇಂಗ್ಲಿಷ್ ಕಲಿತಿದ್ದಾರೆಂಬುದರಿಂದ ಆ ಅಭ್ಯಾಸ ಮಾಡಿದ್ದಾರೆಂತ ತಿಳಿಯಕೂಡದು...." ಎಂದಿದ್ದಾರೆ. ಇವರೆ ೧೮೯೬ರ ಫೆಬ್ರುವರಿ ಸಂಚಿಕೆಯಲ್ಲಿ "ಸ್ತ್ರೀಯರು ವಿದ್ಯಾಲಂಕೃತರಾದರೆ ಅವರಿಗೂ ಅವರ ಒಡಹುಟ್ಟಿದವರಿಗೂ ಒಡಯಿರತಕ್ಕವರಿಗೂ ಆನಂದಕರ ಮತ್ತು ಶ್ರೇಯಸ್ಕರ. ಈ ಮಾತಿಗೆ ವಿರೋಧವಾಗಿ ಕನ್ನಡದಲ್ಲಿ ಒಂದು ಉಪನ್ಯಾಸವನ್ನು ತಯಾರಿಸಿ ಕಳುಹಿಸಿದವರಿಗೆ ಬರುವ ಏಪ್ರಿಲ್ ತಿಂಗಳಲ್ಲಿ ೫ರೂ. ಉಚಿತವಾಗಿ ನಾವು ಕಳುಹಿಸಿಕೊಡುವೆವು. ಸ್ತ್ರೀಯರು ವಿದ್ಯೆ ಕಲಿಯಲಿಕ್ಕೆ ಏನೂ ಯೋಗ್ಯರೆಲ್ಲವೆಂತ ಕಾರಣಗಳು ಉದಾಹರಣೆಗಳು ಕೊಟ್ಟು ತೋರಿಸಬೇಕು." ಎಂದು ಬಹಿರಂಗವಾಗಿ ಹೇಳಿಕೆಯನ್ನು ನೀಡಿದರು. (ವಿದ್ಯಾದಾಯಿನಿ – ನವೆಂಬರ್ – ೧೯೧೯ ೨೬/೧೧ ೨೪೬)

ವಿಧವಾ ವಿವಾಹ ನಿಷೇಧಿಸುವುದನ್ನು ಕುರಿತಂತೆ ನಾಗಪುರದ ಬ್ರಾಹ್ಮಣನೊಬ್ಬನು ಒಂದು ಕೃತಿಯನ್ನು ರಚಿಸಿದ್ದನು. ನಮ್ಮ ಶಾಸ್ತ್ರಾಧಾರಗಳನ್ನು ಇದರ ಹಿನ್ನೆಲೆಯಲ್ಲಿ ಪ್ರಶ್ನಿಸಿ ಸಂಸ್ಕೃತದಲ್ಲಿ ಬರೆದಿದ್ದನು. ವಿಲ್ಕಿನ್‌ಸನ್ ಎಂಬ ಆಂಗ್ಲೀಯನು ಇದನ್ನು ಅನುವಾದಿಸಿ ಟೀಕಾರೂಪದಲ್ಲಿ ತನ್ನ ಅಭಿಪ್ರಾಯವನ್ನು ಸೇರಿಸಿ ಬರೆದನು. ಇದರ ಕಾಲ ೧೮ನೇ ಶತಮಾನ. ಅನೇಕರು ಈ ಕೃತಿಯನ್ನು ಬೇರೆ ಬೇರೆ ಭಾಷೆಗಳಲ್ಲಿ ಅನುವಾದಿಸಿದರು. ಕನ್ನಡದಲ್ಲಿ ಈ ಕೃತಿ ಲಭ್ಯವಿದ್ದು ಇದು ಮರಾಠಿಯಿಂದ ಅನುವಾದವಾಗಿ ೧೮೫೨ರಲ್ಲಿ ಅಚ್ಚಾಗಿದೆ. ಇದಕ್ಕೆ ಸಂಬಂಧಿಸಿದಂತೆ ಸುಬ್ರಹ್ಮಣ್ಯ ಶಾಸ್ತ್ರಿ ಹಾಗೂ

ಶಿವಶಂಕರ ಶಾಸ್ತ್ರಿ ಇಬ್ಬರು ಸೇರಿ ಸ್ತ್ರೀಯರ ಪುನರ್ವಿವಾಹ ಕುರಿತಂತೆ ಲೇಖನವನ್ನು ಬರೆದರು. ಇದರಲ್ಲಿ ಸ್ತ್ರೀಯರು ಪುನರ್ವಿವಾಹದ ಸಾಧಕ ಬಾಧಕಗಳನ್ನು ಚರ್ಚಿಸಿದ್ದಾರೆ. ಇಂತಹ ವಿಚಾರಗಳು ಅಂದಿನ ಕಾದಂಬರಿಗಳ ಮೇಲೆ ಪ್ರಭಾವ ಉಂಟು ಮಾಡಿರಬಹುದು. ಮರಾಠಿಯ ಯಮುನಾ ಪರ್ಯಟನ, ಕನ್ನಡದ ಇಂದಿರಾಬಾಯಿ, ಇಂದಿರಾ ಕಾದಂಬರಿಗಳ ವಸ್ತು ಇದೆ ಆಗಿದೆ.

೧೮೮೯ರಲ್ಲಿ ವೆಂಕಟರಂಗೋ ಕಟ್ಟಿಯವರು 'ವಿಧವಾ ವಪನ ಅನಾಚಾರ ಮಂಡನ'ವೆಂಬ ಮತ್ತು 'ವಿಧವೆಯರ ಇತಿಹಾಸ' ಎನ್ನುವ ಗ್ರಂಥಗಳನ್ನು ರಚಿಸಿದರು. ಇದಕ್ಕೆ ಪ್ರೇರಣೆ ಅವರೇ ಹೇಳಿರುವಂತೆ ಅವರ ಜೀವನದಲ್ಲಿ ನಡೆದ ಒಂದು ಘಟನೆ ಹಾಗೂ ಸರಕಾರದಿಂದ ಬಿಡುಗಡೆಯಾದ 'ಬಾಲವಿವಾಹ ಮತ್ತು ಅಸಮ್ಮತ ವೈಧವ್ಯ' ಎಂಬ ಇಂಗ್ಲೀಷ್ ಪುಸ್ತಕವು ಪ್ರಕಟವಾದದ್ದು.

ಈ ಗ್ರಂಥ ರಚನೆಯ ಕಾರಣವನ್ನು ಶ್ರೀಯುತರು ಹೀಗೆ ಹೇಳಿದ್ದಾರೆ :

"ಈ ವಿಷಯವನ್ನು ನನ್ನ ಮನಸಿನಲ್ಲಿ ಸೇರಲಿಕ್ಕೆ ಒಂದು ಅತ್ಯಂತ ಖೇದಕಾರಕವಾದ ಸಂಗತಿಯು ಕಾರಣವಾಯಿತು. ಅದು ಹ್ಯಾಗಂದರೆ– ಸುಮಾರು ಯೇಳೆಂಟು ವರ್ಷಗಳ ಹಿಂದೆ ವೊಬ್ಬ ಸ್ನೇಹಿತನ ಮನೆಯಲ್ಲಿ ಬ್ರಾಹ್ಮಣ ಭೋಜನವಾಗುತ್ತಿತ್ತು. ಅಲ್ಲಿ ನಾನು ಹೋಗಿದ್ದೇನು. ಯಾವತ್ತು ಜನರು ಕೂಡಿದ ಮೇಲೆ ಯೆಲೆಗಳನ್ನು ಹಾಕುವ ಕಾಲಕ್ಕೆ ನಾನು ಸಹಜವಾಗಿ ನೆರೆದ ಜನರನ್ನು ನೋಡಬೇಕೆಂದು ಪಂಕ್ತಿಯಲ್ಲಿ ಅಡ್ಡಾಡುತ್ತ ಹೋಗುತ್ತಿರುವಾಗ ವೊಂದು ಸ್ಥಳದಲ್ಲಿ ಹತ್ತು ವರ್ಷದೊಳಗಿನ ವಯಸ್ಸುಳ್ಳಂಥ ಹುಡಿಗೆಯರು ಐದಾರು ಜನರು ಯೆಲೆಗಳನ್ನು ಹಾಕಿಕೊಂಡು ಹರಟೆ ಕೊಚ್ಚುತ್ತ ಕೂತಿರುವದನ್ನು ಕಂಡೆನು. ಅವರಲ್ಲಿ ಯೇಳೆಂಟು ವರ್ಷದ ವಿಧವೆಯಾದ ಹುಡಿಗಿಯೊಬ್ಬಳಿದ್ದಳು. ಆ ಬಡ ಹುಡಿಗೆಯ ಕೂದಲನ್ನು ತೆಗೆದಿದ್ದರು; ಕೈಯಲ್ಲಿ ಬಳೆಗಳಿದ್ದಿಲ್ಲ. ಮೈಯಲ್ಲಿ ಕುಬ್ಬಸವಿದ್ದಿಲ್ಲ; ಕೊರಳಲ್ಲಿ ಯೇನೂ ಇದ್ದಿಲ್ಲ..... ನಾನು ಬಹು ಕೌತುಕದಿಂದ ಆಕೆಯನ್ನು ನೋಡುತ್ತ ನಂತಿರುವಷ್ಟರಲ್ಲಿ ಅತ್ತ ಕಡೆಯಿಂದ ದೊಡ್ಡ ದೊಡ್ಡ ನಾಮಗಳನ್ನೂ ಮುದ್ರೆಗಳನ್ನೂ ಹಚ್ಚಿಕೊಂಡವನೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದು ಆ ಅನಾಥ ವಿಧವೆಯನ್ನು ನೋಡಿ ಕೆಕ್ಕರಿಸಿ ಅಂದದ್ದು–

ಬ್ರಾ. – ಏನೇ, ನೀನು ಇಲ್ಲಿ ಯಾಕೆ ಕೂತಿ? ಏಳು ಅಲ್ಲಿಂದ.

ಹುಡಿಗೆಯು :– ಯಾಕೋ, ನಿನ್ನದೇನು ಉಪದ್ರ ಹೋಗು, ನಾನು ಇಲ್ಲಿಂದ ಯೇಳುವದಿಲ್ಲ ......

ಬ್ರಾ. – ನೀನು ಮಡಿಯಾದವಳು, ಅವರ ಸಂಗಡ ಕೂಡ್ರಬಾರದು, ಏಳು ಬೇಗ, ಇಲ್ಲದಿದ್ದರೆ ತಳಿಸುತ್ತೇನೆ."

ಈ ಪ್ರಸಂಗದಿಂದಾಗಿ ಪತ್ರಿಕೆಯಲ್ಲಿ ಈ ರೀತಿಯಾದ ಹೇಳಿಕೆಯನ್ನು ನೀಡಿದರು. "ಆದರೆ ವಿಧವಾ ವಪನವು ಶಾಸ್ತ್ರ ವಿರುದ್ಧವಿರುತ್ತದೆಂಬ ಬಗ್ಗೆ ನಾವು ಈ ಪರಿಯಾಗಿ ಕಂಠಶೋಷ ಮಾಡಿದ್ದು ನೋಡಿ, ಕ್ರಿಯಾ ಕರ್ಮಾದಿಗಳನ್ನು ಮಾಡಿಸಿ ಹೊಟ್ಟೆ ಹೊರಕೊಳ್ಳುತ್ತಿರುವಂಥ ಭಿಕ್ಷುಕರು ಇದು ಪಿಷ್ಟಪೇಷಣವಿರುತ್ತದೆಂದೆನ್ನಬಹುದು..... ಈ ಧರ್ಮಬೋಧಕರು ಮಾಡುವದಿನ್ನೊಂದು ಕಾಯಕವೇನೆಂದರೆ. ಅವರು ಬಹುತರ ವಿಧವೆಗಳ ಗೊಡವೆಗೆ ಹೋಗದೆ, ಅವರ ಅಜ್ಞಾನಿಗಳಾದ ತಾಯಿ ತಂದೆಗಳ ಕಿವಿಯನ್ನು ಊದಿಬಿಡುತ್ತಾರೆ...... ಧರ್ಮಬೋಧಕರು ಪರದೆಯ ಮರೆಗೆ ಕೂತು ಸೂತ್ರವನ್ನು ಯೆಳೆಯುವ ಕೃತ್ಯ ಮಾತ್ರ ಚಾತುರ್ಯದಿಂದ ಮಾಡುತ್ತಿರುತ್ತಾರೆ". (ವಿದ್ಯಾದಾಯಿನಿ–ಪು. ೨೩೯)



ನಂತರದಲ್ಲಿ ಅವರಿಗೆ ಪ್ರೇರಣೆಯಾದದ್ದು ಇಂಗ್ಲಿಷ್‌ನ ಕೃತಿಗಳು. ಅದರಲ್ಲಿ ವಿಧವಾ ವಪನವನ್ನು ನಿಲ್ಲಿಸಿದ್ದಾದರೆ ವಿಧವೆಯರ ಪುನರ್ವಿವಾಹಕ್ಕೆ ಅನುಕೂಲವಾಗುವುದು ಎಂದು ಸೂಚಿಸಿದರು. ಅಲ್ಲದೆ ಹಿಂದೂ ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿದ ನಂತರವೇ 'ವಿಧವಾ ವಪನ ಅನಾಚಾರ'ವನ್ನು ಕನ್ನಡ, ಮರಾಠಿ – ಎರಡೂ ಭಾಷೆಯಲ್ಲಿ ಇಂಗ್ಲಿಷ್‌ನ ಸಾರದೊಂದಿಗೆ ಪ್ರಕಟಿಸಿದರು. ಪೀಠಿಕೆಯಲ್ಲಿ ಮಠಾಧಿಕಾರಿಗಳ ಅಭಿಪ್ರಾಯವನ್ನು ಆಹ್ವಾನಿಸಿದರು. ಇದೇ ಸಂದರ್ಭದಲ್ಲಿ (೧೮೮೪) ಮುಂಬಯಿಯ 'ಕನ್ನಡ ಸುವಾರ್ತೆ' ಪತ್ರಿಕೆಯಲ್ಲಿ ಮದ್ರಾಸದ ಸಾರಸ್ವತ ಜನಾಂಗದವರು ವಿಧವಾ ವಿವಾಹಗಳ ಬಗ್ಗೆ ತಮ್ಮಲ್ಲಿ ಚರ್ಚಿಸಿ ಎರಡು ನಿರ್ಣಯಕ್ಕೆ ಬಂದರು; ಒಂದನೆಯದು, ೧೫ ವರ್ಷದ ಒಳಗಿನ ಗಂಡು ಹಾಗೂ ೧೦ ವರ್ಷದ ಒಳಗಿನ ಹುಡುಗಿಯರಿಗೆ ಮದುವೆ ಮಾಡಬಾರದು. ಎರಡನೆಯದು ಗರ್ಭದಾನವಾಗಿರದ ವಿಧವೆಯರು ಪುನರ್ವಿವಾಹ ಮಾಡಿಕೊಳ್ಳಬಹುದು. ಇದಕ್ಕೆ ಸಮಾಜದ ಸಮ್ಮತಿ ಬೇಕಷ್ಟೆ ಎಂದು ಹೇಳಿ ಪ್ರಕಟಿಸಿದರು. ಅಲ್ಲದೆ ಅದರ ಪ್ರತಿಗಳನ್ನು ಬೇರೆ ಬೇರೆ ಊರುಗಳಿನ ತಮ್ಮ ಸಮಾಜದವರಿಗೆ ಕಳುಹಿಸಿದರು.

ಮುಂದೆ ಬಾಲ್ಯವಿವಾಹದಿಂದಾಗುವ ಸಮಸ್ಯೆ, ಸ್ತ್ರೀಯರ ಬ್ರಹ್ಮಚರ್ಯ ನಿಯಮ, ಪುರುಷರಿಗೆ ಏಕಪತ್ನಿತ್ವ ಮುಂತಾದಂತೆ ಮದ್ರಾಸದ ಆಲೋಚನೆಗಳಿಗೆ ಭಿನ್ನಾಭಿಪ್ರಾಯಗಳು ವ್ಯಕ್ತವಾದವು. ಇದಕ್ಕೆ ಸಂಬಂಧಿಸಿದಂತೆ ಗುಳ್ವಾಡಿ ವೆಂಕಟರಾಯರು ತಮ್ಮ ಪ್ರತಿಕ್ರಿಯೆಯಲ್ಲಿ ಪ್ರೌಢ ವಿವಾಹ, ವಿಧವಾ ವಿವಾಹಗಳ ಅನುಮೋದನೆಯ ಬಗ್ಗೆ ಬೇರೆಯ ಪ್ರಮಾಣವನ್ನು, ಸೂಚನೆಯನ್ನು, ನಮ್ಮ ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಅದು ಹೇಗೆ ವ್ಯಕ್ತವಾಗಿದೆ ಎಂಬುದನ್ನು ತಿಳಿಸಿದ್ದಾರೆ. ಅಲ್ಲದೆ ಬದಲಾವಣೆಯ ಕಾಲದ ನಿಯಮ. ಸಮಾಜ ಕಾಲಕ್ಕೆ ತಕ್ಕಂತೆ ಹೊಸತನವನ್ನು ಸ್ವೀಕರಿಸುವಂತೆ, ನಮ್ಮ ದೃಷ್ಟಿಕೋನವೂ ಬದಲಾಗಬೇಕು ಎಂದು ಹೇಳುತ್ತಾರೆ.

"ಯಾವದೊಂದು ಕೆಲಸವನ್ನು ನಮ್ಮ ಪೂರ್ವಜರು ಮಾಡಿಲ್ಲವೆಂದಾಕ್ಷಣ ನಾವೂ ಮಾಡಬಾರದೆಂದು ಅರ್ಥವಲ್ಲ. ಅವರು 'ತಂತೀ, ಟಪ್ಪಾಲು, ಉಗಿಹಡಗ, ಹೊಗೆ ಬಂಡಿ' ಇವುಗಳನ್ನು ಬಳಸಲಿಲ್ಲ; ಅವು ಈಗ ನಮಗೆ ತ್ಯಾಜ್ಯವಾಗಬಹುದೆ?" ಎಂದು ಪ್ರಶ್ನಿಸಿದ್ದಾರೆ.

ವೆಂಕಟರಂಗೋಕಟ್ಟಿಯವರು ಬಹಳ ಕಟ್ಟುನಿಟ್ಟಾಗಿ ಸಂಪ್ರದಾಯವನ್ನು ಆಚರಿಸುತ್ತಿದ್ದರು ಎಂಬುದರ ಬಗ್ಗೆ ಅನೇಕರು ವಿವರಿಸಿದ್ದಾರೆ. ಆದರೆ ಅವರ ಸ್ತ್ರೀಪರವಾದ ಚಿಂತನೆಯಲ್ಲಿ ವಿಶಿಷ್ಟವಾದ ಕಾಳಜಿಯನ್ನು ಪಡೆದಿದ್ದರು. ಕಟ್ಟಿಯವರಿಗೆ ಇಂಗ್ಲಿಷ್ ಶಿಕ್ಷಣವಿತ್ತು. ಇದರಿಂದ ಇಂಗ್ಲಿಷ್ ಸಾಹಿತ್ಯದ ಪರಿಚಯವು ಅವರಲ್ಲಿ ಹೊಸ ಆಲೋಚನೆಗಳನ್ನು ಹುಟ್ಟಿಹಾಕಿತು. ಅಲ್ಲದೆ ಭಾರತೀಯ ಸಾಹಿತ್ಯದ ವಿಚಾರಗಳು ಅವರಿಗೆ ತಿಳಿದಿತ್ತು. ಆದರೆ ಈ ಗ್ರಂಥವನ್ನು ಬರೆದುದ್ದಕ್ಕೆ ಕಾರಣವನ್ನು ಈ ರೀತಿ ನೀಡಿದ್ದಾರೆ.

"ನಾವು ನೋಡಿರುವಂತೆ ವಿಧವೆಯರ ಕೇಶ ಮುಂಡನವನ್ನು ಬೌದ್ಧ ಧರ್ಮದಿಂದ ಎರವಲು ಪಡೆಯಲಾಗಿದೆ. ಬೌದ್ಧ ಸನ್ಯಾಸಿಗಳು ಇತರೆ ಧಾರ್ಮಿಕರಂತೆ ಕೇಶ ಮುಂಡನ ಮಾಡಿಸಿ ಕೆಂಪು ವಸ್ತ್ರ ಧರಿಸುತ್ತಾರೆ. ಅದೇ ಸಮಯದಲ್ಲಿ ಕಂಚುಕಿ, ಗಾಜಿನ ಮಣಿ ಸರ ನಡುವಿನ ಬಳೆಗಳು, ಹಣೆಯ ಮೇಲಿನ ಕೆಂಪು ತಿಲಕವನ್ನು ತ್ಯಜಿಸಿರುತ್ತಾರೆ. ಇವತ್ತಿನ ಬರ್ಮದ ಸನ್ಯಾಸಿನಿಯರನ್ನು ನೋಡಿದಾಗ ಸತ್ಯ ಗೊತ್ತಾಗುತ್ತದೆ. ಯಾವುದೇ ವಿರೋಧಾಭಾಸವಿಲ್ಲದೆ ಇಂದಿನ ವಿಧವೆಯರ ವಸ್ತ್ರ, ಕೇಶ ಮುಂಡನದ ರೀತಿಯೆಲ್ಲವೂ ಬೌದ್ಧ ಸನ್ಯಾಸಿಗಳ ಯಥಾವತ್ ತರ್ಜುಮೆ ಎಂದು ಊಹಿಸಬಹುದು."[3](ಹೊಸಗನ್ನಡ ಸಾಹಿತ್ಯದ ಉದಯಕಾಲ-೨೩೯)ಇಂತಹ ಆಚಾರಗಳನ್ನು ನಡೆಸುವ ತಂದೆತಾಯಿಯರಿಗೆ ಹಾಗು ಅದನ್ನು ಹುಟ್ಟಿಹಾಕಿರುವ ಧರ್ಮಬೋಧಕರನ್ನು ಕುರಿತು ಹೀಗೆ ಹೇಳಿದ್ದಾರೆ.

ಈ ಗ್ರಂಥಗಳನ್ನು ಬರೆಯಲಿಕ್ಕೂ ಇದರ ಬಗೆಗೆ ಲೇಖಕರು ಶ್ರಮಿಸಲಿಕ್ಕೂ ಅವರ ಸಾಧಾರಣ ಪ್ರಿಯತೆ ಮತ್ತು ತತ್ವಶ್ರದ್ಧೆಗಳೇ ಕಾರಣ. ಆ ಕಾಲದಲ್ಲಿ ಶ್ರೀಯುತರು ಈ ಪುಸ್ತಕವನ್ನು ತಮ್ಮ ಸ್ವಂತ ಖರ್ಚಿನಿಂದ ಮುದ್ರಿಸಿದ್ದಲ್ಲದೆ, ಅದನ್ನು ಎಲ್ಲ ಪತ್ರಕರ್ತರಿಗೂ ಕಳಿಸಿ ಅದರ ಬಗ್ಗೆ ಜಾಹೀರು ಮಾಡಬೇಕೆಂದು ಕೇಳಿಕೊಂಡರು. ಅಷ್ಟೇ ಅಲ್ಲದೆ, ಪುಸ್ತಕದ ಕೊನೆಯಲ್ಲಿ ಒಂದು ಜಾಹೀರು ಪತ್ರಿಕೆಯನ್ನು ಪ್ರಸಿದ್ಧಿಸಿ ಶಕೆ ೧೪೫೦ರ ಮೊದಲಿನ ಯಾವ ಧರ್ಮ ಶಾಸ್ತ್ರಗ್ರಂಥದಲ್ಲಿಯೂ ವಿಧವಾವಪನಕ್ಕೆ ಶಾಸ್ತ್ರಾಧಾರವಿದ್ದರೆ ತೋರಿಸಿಕೊಡಬೇಕೆಂದೂ, ಹಾಗೆ ತೋರಿಸಿಕೊಟ್ಟವರಿಗೆ ೫೦೦ ರೂಪಾಯಿ ಬಹುಮಾನ ಕೊಡುವುದಾಗಿಯೂ ಸಾರಿದರು.

---

3. "From what we have seen ...... we are led to believe that the shaving of widows was also borrowed from Buddhism..... These (Buddhist) nuns shaved their heads and wore red cloth like religious men, relinquishing at the same time the short petty coat or kanchuki, the glass beads in their necks, the bangles on their wrists and the red mark on their fore-head....... The nuns of Burma at the present day prove the truth of these facts. It may there-fore be assumed without fear of contradiction that the present dress of our widows, including the shaving of their heads, is a faithful copy of the Buddhist nuns of yore."

ಸುದರ್ಶನ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ 'ಮಂಗೂನಾಗೂ'ನ ಸಂಭಾಷಣೆಯಲ್ಲಿಯೂ ಸ್ತ್ರೀ ಶಿಕ್ಷಣ ಕುರಿತು ಚರ್ಚಿಸಿದ್ದಾರೆ. "ಸ್ತ್ರೀಯರು ವಿದ್ಯಾಲಂಕೃತರಾದರೆ ಅವರಿಗೂ ಅವರ ಒಡವುಟ್ಟಿದವರಿಗೂ, ಒಡಯಿರತಕ್ಕವರಿಗೂ ಆನಂದಕರ ಮತ್ತು ಶ್ರೇಯಸ್ಕರ. ಈ ಮಾತಿಗೆ ವಿರೋಧವಾಗಿ ಕನ್ನಡದಲ್ಲಿ ಒಂದು ಉಪನ್ಯಾಸವನ್ನು ತಯಾರಿಸಿ ಕಳುಹಿಸಿದವರಿಗೆ ಬರುವ ಏಪ್ರಿಲ್ ತಿಂಗಳಿನಲ್ಲಿ ೫ರು. ಉಚಿತವಾಗಿ ನಾವು ಕಳುಹಿಸಿಕೊಡುವೆವು. ಸ್ತ್ರೀಯರು ವಿದ್ಯೆ ಕಲಿಯಲಿಕ್ಕೆ ಏನೂ ಯೋಗ್ಯರಲ್ಲವೆಂತ ಕಾರಣಗಳೂ ಉದಾಹರಣೆಗಳೂ ಕೊಟ್ಟು ತೋರಿಸಬೇಕು."(ಸುದರ್ಶನ ೧೮೯೬, ಫೆಬ್ರವರಿ) ಈ ಅಂಶಗಳು ಆರಂಭದಲ್ಲಿ ಬಂದಂತಹ ಇಂದಿರಾಬಾಯಿ, ಭಾಗೀರಥಿ, ಇಂದಿರಾದಂತಹ ಕಾದಂಬರಿಗಳಲ್ಲಿ ಕಾಣಬಹುದು.

ಗುಲ್ವಾಡಿಯರ ಕಾದಂಬರಿಗೆ ಸ್ತ್ರೀಪರ ಆಲೋಚನೆಗಳು ಲಭ್ಯವಾಗಿದ್ದು ಇಂಗ್ಲಿಷ್‌ನ ಶಿಕ್ಷಣ ಹಾಗೂ ಸಾಹಿತ್ಯದ ಪರಿಚಯದಿಂದ ಎಂದೇ ಹೇಳಬಹುದು. ಇದು ಅವರ ಮಾತಿನಲ್ಲೇ ವ್ಯಕ್ತವಾಗಿದೆ. "ಜನರಿಗೆ ಸುಶಿಕ್ಷೆಯಿಲ್ಲ; ಸ್ವಧರ್ಮ ಯಾವುದೆಂದು ಅವರಿಗೆ ತೋರಿಸಲು ಶ್ರೀಗಳವರು ಅಲ್ಲಲ್ಲಿ 'ಆಂಗ್ಲೋ-ಸಂಸ್ಕೃತ' ಪಾಠಶಾಲೆಗಳನ್ನು ತೆರೆಯಬೇಕು' ಎಂದು ಸೂಚಿಸುತ್ತಾರೆ. ಇವರ ಈ ಆಲೋಚನೆ ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿ ಇಂದಿರಾಬಾಯಿಯಲ್ಲಿ ಅನಾವರಣಗೊಂಡಿದೆ.

ಗುಲ್ವಾಡಿಯವರೇ ಬರೆದ ಮತ್ತೊಂದು ಪುಟ್ಟ ಕಾದಂಬರಿ 'ಭಾಗೀರಥಿ'. ಇದು ಕೂಡ ಹೆಣ್ಣು ಮಗಳೊಬ್ಬಳ ಜೀವನದ ಕಥೆ. ವಿದ್ಯಾವಂತೆಯಾದ ಈಕೆ ಜನರಲ್ಲಿ ಇದ್ದಂತಹ ಭಯಕ್ಕೆ ಕಾರಣವಾದ ನಾನಾ ಮೂಢತ್ವಗಳನ್ನು ವಾಚಕರಿಗೆ ತೋರಿಸುವ ಪಾತ್ರ. ದಿನ ನಿತ್ಯ ಜೀವನದಲ್ಲಿ ಆಚರಿಸುವ ಮೂಢನಂಬಿಕೆಗಳಾದ ಮುತ್ತೈದೆಯರು, ಚೆನ್ನಮಣೆಯಲ್ಲಿ ಕೂರಬಾರದು, ಮಕ್ಕಳಿಗೆ ಕನ್ನಡಿ ತೋರಿಸಿದರೆ ಮೂಕರಾಗುತ್ತಾರೆ, ಒಬ್ಬರಿಗೆ ರೋಗರುಜಿನಗಳು ಬಂದರೆ ಬಲಿ ತೆಗೆಯುವುದು, ಗ್ರಹ ಶಾಂತಿ ಮಾಡುವುದು ಮುಂತಾದ ಬಗ್ಗೆ ತನ್ನ ಗೆಳತಿ ಲೀಲಾವತಿಗೆ ಬುದ್ಧಿ ಹೇಳಿ ಆಕೆಯ ಪರಿವರ್ತನೆಗೆ ಪ್ರಯತ್ನಿಸುವ ಚಿತ್ರಣ ಈ ಕಥೆಯಲ್ಲಿದೆ.

ಬದಲಾವಣೆ ಪ್ರಕೃತಿ ನಿಯಮ, ಇದು ಎಲ್ಲಾ ವಿಷಯಕ್ಕೂ ಅನ್ವಯವಾಗುತ್ತದೆ. ಮನುಷ್ಯನ ಜೀವನ, ಭಾಷೆ, ಪ್ರಕೃತಿ ಬದಲಾದಂತೆ ಅದರೊಡನೆ, ತಾನೂ ಬದಲಾಗುತ್ತಾ ಹೋಗುತ್ತದೆ. ಬದಲಾವಣೆ ಹರಿಯುವ ನೀರಿನಂತೆ. ನಿಂತ ನೀರು ಕೊಳೆಯುತ್ತದೆ. ಆದರೆ ಹರಿಯುವ ನೀರು ಹೊಸದನ್ನು ಮೈಗೂಡಿಕೊಂಡು ಸಮುದ್ರದಲ್ಲಿ ಸೇರಿ ವಿಸ್ತಾರಗೊಳ್ಳುತ್ತದೆ. ಅಂತೆಯೇ ಸಾಹಿತ್ಯವೂ ಪರಿಸರಕ್ಕೆ ತಕ್ಕಂತೆ ಬದಲಾಗಬೇಕು. ಕನ್ನಡ ಸಾಹಿತ್ಯವೂ ಇಂತಹ ಬದಲಾವಣೆಯನ್ನು ಸ್ವೀಕರಿಸಿದ್ದೇ ಇಂತಹ ಹೊಸ ಆಲೋಚನೆಗಳು ಹೊಸ ಸಾಹಿತ್ಯ ಪ್ರಕಾರದಲ್ಲಿ ಮೂಡಿಬರಲು ಸಾಧ್ಯವಾಯಿತು. ಅಲ್ಲದೆ ಭಾರತೀಯ ಪರಿಸರಲ್ಲಿ ಸಾಹಿತ್ಯ ಕುರಿತಂತೆ ಬೇಸರದ ಛಾಯೆ ಮೂಡಲಾರಂಭಿಸಿದ್ದ ಕಾಲದಲ್ಲಿ ಇಂತಹ ಆಲೋಚನೆಯ ಹೊಸ ಗಾಳಿ ಬೀಸುವಂತಾಗಿದ್ದು ಕಾವ್ಯದ ದಿಕ್ಕನ್ನೆ ಬದಲಾಯಿಸಿತು. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಪೂರ್ಣಸತ್ಯವಾಗಿತ್ತು. ವಚನ ಸಾಹಿತ್ಯ, ದಾಸ ಸಾಹಿತ್ಯ,

ರಗಳೆಯಂತಹ ಹೊಸ ಪ್ರಯೋಗಗಳೂ ಹೆಚ್ಚು ಪ್ರಭಾವಶಾಲಿಯಾಗಿರಲಿಲ್ಲ. ಅಲ್ಲದೆ ಆಧ್ಯಾತ್ಮದ ಲೇಪನ ಹಚ್ಚಿಕೊಂಡೆ ಸಾಹಿತ್ಯ ರಚನೆಯಾಗುತ್ತಿತ್ತು.

ಆಂಗ್ಲ ಕವಿ Dougles Bush ಹೇಳುವಂತೆ "ಒಂದು ಹಳೆಯ ರೀತಿಯ ಬಗ್ಗೆ ಬೇಸರ ಬರಲು ಮುಖ್ಯ ಕಾರಣ ಅದು ತನ್ನ ಕಾರ್ಯವನ್ನು ಪರಿಣತಿಯಿಂದ ಪೂರೈಸಿ ಅನಂತರ ಕಾಲಧರ್ಮಕ್ಕನುಗುಣವಾಗಿ ದುರ್ಬಲವಾಗುತ್ತ ಕೊನೆಗೆ ಸತ್ವಹೀನವಾಗುವುದೇ ಎಂದು ಸ್ಥೂಲವಾಗಿ ಹೇಳಬಹುದು. ಯಾವುದೋ ಒಂದು ಕಾವ್ಯ ರೂಪವು ತನ್ನ ಸಂಪೂರ್ಣ ಫಲವನ್ನು ಕೊಟ್ಟ ಮೇಲೂ ಬರಡಾಗಿ ನಿಂತಿದ್ದರೆ, ಅದನ್ನು ಉರುಳಿಸಬೇಕೆಂಬ ಭಾವನೆ ಸಹಜವಾಗಿಯೇ ಬರುತ್ತದೆ. ಈ ಸಂಪೂರ್ಣ ಫಲ ಕೊಟ್ಟ ಮೇಲೂ ಬರಡು ಮರವನ್ನು 'ಅಜ್ಜ ಹಾಕಿದ ಆಲದ ಮರ'ವೆಂದು ಕಡಿಯಬಾರದೆನ್ನುವ ಪ್ರವೃತ್ತಿಯೇ ಸೂತ್ರದಾಯನೆಂದು ಹೇಳಬಹುದು. ಈ ಸಂಪ್ರದಾಯ ಶರಣತೆಯು ಪ್ರತಿಯುಗದಲ್ಲಿಯೂ ಇರುತ್ತದೆ. ಇದಕ್ಕೆ ವಿರೋಧವಾದ ಹೊಸತನ ತೇಜಸ್ಸು ಕ್ರಾಂತಿಯಾಗಿ ಕಾಣಿಸಿಕೊಳ್ಳುತ್ತದೆ. ಕ್ರಾಂತಿ ಬಲಗೊಂಡು ಸಂಪ್ರದಾಯವನ್ನು ಮುರಿಯುತ್ತದೆ. ಆ ಕಾಲಕ್ಕೆ ತಕ್ಕಂತೆ ಬದಲಾವಣೆಗಳು ಆಗಿಯೇ ತೀರುತ್ತವೆ. ಆದುದರಿಂದ ಕಾವ್ಯವು ಈ ಸಂಪ್ರದಾಯ ಮತ್ತು ಕ್ರಾಂತಿಯ ಅನವರತವೂ ಅನಿವಾರ್ಯವೂ ಆದ ಪ್ರಯೋಗದಿಂದ ತನ್ನ ತೇಜಸ್ಸನ್ನೂ, ಸತ್ವವನ್ನೂ ಹೆಚ್ಚಿಸಿಕೊಳ್ಳುತ್ತದೆಂದು ಹೇಳಬಹುದು". (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ – ಹಿನ್ನೆಲೆ–ಪು. ೬).

೧೯ನೇ ಶತಮಾನದ ಪೂರ್ವ ಸಾಹಿತ್ಯಕ್ಕಿಂತ ಭಿನ್ನ ಸಾಹಿತ್ಯದ ರಚನೆಯ ಅಗತ್ಯತೆಯನ್ನು ಕುರಿತಂತೆ ಪತ್ರಿಕೆಗಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಸುಹಾಸಿನಿ ಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನದಲ್ಲಿ "ಆ ಪಂಡಿತರು – ಬಿಡಬೇಕೆಂದು ಹೇಳುವ ಪಂಜ್ತೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಉತ್ತಮ ನಾಯಕಸ್ತನವೇ ತಮಗೆ ಕರ್ತವ್ಯವೆಂದು ಚಾನಸದಿಂದ ಭಗವತ್ಪರವಾದ ನಾಮಾಂತರಗಳಿಂದೊಪ್ಪುವ ರಾಮಾಯಣ, ಭಾಗವತ, ಭಾರತಾದೀ ಪುರಾಣಗಳನ್ನು ಅತಿಶಯೋಕ್ತಿ ಪುಂಜವಾದ ಕಿರಾತಾರ್ಜುನೀಯ, ವೃಷಭೇಂದ್ರವಿಜಯ, ಮೊದಲಾದ ಕಾವ್ಯಗಳನ್ನು ಒಂದೇ ಅಚ್ಚಿನಲ್ಲಿ ಕೆತ್ತಿದ ಒಡವೆಗಳಂತೆ ರಚಿಸಿದರೇ ಹೊರತು, ಐಹಿಕಸಾಧಕವಾಗಿಯೂ, ಪಾಮರ ಜನ ಪಠನೀಯವಾಗಿಯೂ, ಲೋಕದ ವಾಸ್ತವ ಗುಣವರ್ಣನ ಪರವಾಗಿಯೂ ಇರುವ ಇತಿಹಾಸಗಳನ್ನು ಬರೆಯಲಿಲ್ಲ"ವೆಂದು ಹೇಳಿದ್ದಾರೆ. (ಸುಹಾಸಿನಿ–ಪು. ೪೫)

ಇಂತಹ ಹೊಸ ಆಲೋಚನೆವುಳ್ಳ ಕೃತಿಕಾರರಲ್ಲಿ ಗಳಗನಾಥರು ಆರಂಭದ ಶ್ರೇಷ್ಠ ಕಾದಂಬರಿಕಾರರಲ್ಲಿ ಒಬ್ಬರು. ಇವರು ಹೆಚ್ಚು ಮರಾಠಿ ಭಾಷೆಯಿಂದಲೆ ಅನುವಾದ ಮಾಡುತ್ತಿದ್ದರು. ಹರಿನಾರಾಯಣ ಆಪ್ಟೆಯವರು ಮರಾಠಿಯಲ್ಲಿ ರಚಿಸಿದ ಕಾದಂಬರಿಗಳನ್ನು ಹೆಚ್ಚಾಗಿ ಅನುವಾದಿಸಿದರು. ಇವರ ಕಾದಂಬರಿಗಳು ಹೆಚ್ಚಾಗಿ ರೂಪಾಂತರಗಳೆ. ಅವರೇ ಹೇಳುವಂತೆ "ನನ್ನ ಆಯುಷ್ಯದಲ್ಲಿ ನಾನು ಕೈ. ವಾ. ಆಪ್ಪಟೆಯವರ 'ಕಮಲ ಕುಮಾರಿ' ಎಂಬ ಒಂದು ಕಾದಂಬರಿಯ ಹೊರತು ಯಾವ ಕಾದಂಬರಿಯನ್ನು ಅಕ್ಷರಶಃ ಭಾಷಾಂತರ ಮಾಡಿರುವುದಿಲ್ಲ. ಬೇಕಾದವರ ಕಾದಂಬರಿಯಿರಲಿ

ನಾನು ಹಾಗೂ ನನ್ನ ಕನ್ನಡಿಗರು, ಎಂಬ ಜೋಡನ್ನು ಮರೆಯದೆ ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು, ಬೇಡಾದಲ್ಲಿ ಕುಗ್ಗಿಸಿರುವೆನು, ಬೇಕಾದಲ್ಲಿ ಹೊಸ ವಿಷಯವನ್ನು ಸೇರಿಸಿರುವೆನು, ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದು ಹಾಕಿರುವೆನು ಆ ಕಾದಂಬರಿಯೇ ನನ್ನ ಕೈಗೊಂಬೆಯಲ್ಲದೆ ನಾನು ಕಾದಂಬರಿಯ ಕೈಗೊಂಬೆಯಾಗಿರುವುದಿಲ್ಲ" (ಗಳಗನಾಥ) ಎಂದಿದ್ದಾರೆ.

ಅಂದಿನ ಪತ್ರಿಕೆಗಳಲ್ಲಿ ಇಂಗ್ಲಿಷ್‌ನ ಕಾದಂಬರಿಗಳನ್ನು ಅನುಸರಿಸಿ ಕಾದಂಬರಿಗಳನ್ನು ರಚಿಸಲು ಸಂಪಾದಕರೆ ಸೂಚನೆಗಳನ್ನು ನೀಡುತ್ತಿದ್ದರು. ತೆಲುಗಿನ 'ಚಿಂತಾಮಣಿ' ಎಂಬ ಪತ್ರಿಕೆ ಕಾದಂಬರಿ ರಚನೆಗಾಗಿ ಸ್ಪರ್ಧೆಯೊಂದನ್ನು ಏರ್ಪಡಿಸಿತ್ತು. ಅದರ ಪ್ರಕಟಣೆಯಲ್ಲಿ 'ನೀವು ಕಾದಂಬರಿಯನ್ನು ಬರೆಯುವಾಗ ವಾಲ್ಟರ್ ಸ್ಕಾಟ್ ಮತ್ತು ಜೂಲ್ಸ್ ವರ್ನ್ ಇಂಥವರನ್ನು ಮಾದರಿಯಾಗಿ ಇಟ್ಟುಕೊಳ್ಳಿರಿ'. ಎಂದು ಪ್ರಕಟಿಸಿದರು. ಈ ಇಬ್ಬರ ಕಾದಂಬರಿಗಳೂ ಹೆಚ್ಚು ವಾಸ್ತವ ಸಂಗತಿಗಳನ್ನು ಒಳಗೊಂಡಿವೆ. ಕಾರಣ ಬಂಗಾಳಿ ಇಲ್ಲವೆ ಮರಾಠಿ ಕೃತಿಗಳು ಹೆಚ್ಚಾಗಿ ರೂಪಾಂತರಗಳನ್ನೆ ಮಾಡಿದವು. ಇದರಿಂದ ಪ್ರೇರಿತರಾದ ಕನ್ನಡಿಗರೂ ಅದನ್ನೇ ಅನುಸರಿಸಿದ್ದರಿಂದಲೇ ಸಂಪಾದಕರು ಹೀಗೆ ಹೇಳಿರಬಹುದು.

ಅದ್ಭುತ ರಮ್ಯ ಶೃಂಗಾರ ಪೂರ್ಣ ಕಥಾನಕಗಳು ಮನೆಯಲ್ಲೇ ಕುಳಿತು ಮನರಂಜನೆಗಾಗಿ ಪಠಿಸುವವರಿಗಾಗಿ ರಚಿತವಾಗುತ್ತಿದ್ದವುಗಳಿಗಿಂತ ಅಂದರೆ ಈ ಸಾಂಪ್ರದಾಯಿಕ ಕಥನಗಳಿಂದ ಭಿನ್ನವಾದದ್ದು ನಾವೆಲ್ "ಸಂಕೀರ್ಣವಾದ ಕಥಾ ಸಂವಿಧಾನವನ್ನು, ವಾಸ್ತವಿಕ ಜೀವನವನ್ನೂ ಪ್ರತಿನಿಧಿಸುವ ಪಾತ್ರ ಮತ್ತು ಘಟನೆಗಳನ್ನು ಅದು ಹೊಂದಿರಬೇಕು. ಆದುದರಿಂದ ತನ್ನ ಲಕ್ಷಣದಲ್ಲಿ ನಾವೆಲ್ ಪಾತ್ರ ಚಿತ್ರಣ, ಕಥಾ ಸಂವಿಧಾನಗಳನ್ನು ಹೊಂದಿದ, ವಾಸ್ತವಿಕ ನಿರೂಪಣೆಯುಳ್ಳ ಕಾಲ್ಪನಿಕ ರಚನೆ, ಭೂತಯಾ ವರ್ತಮಾನ ಕಾಲದ ಚಿತ್ರಣವಿರುವ ಸುದೀರ್ಘ ಕಥನ" ಎಂದು ಪಾಶ್ಚಾತ್ಯ ವಿದ್ವಾಂಸ ಹೇಳಿದ್ದಾನೆ.

ಕನ್ನಡ ಕಾದಂಬರಿಯ ಇತಿಹಾಸವನ್ನು ನೋಡಿದಾಗ ಆರಂಭದಲ್ಲಿ ಪ್ರಮುಖವಾಗಿ ಮೂರು ಬಗೆಯನ್ನು ಕಾಣಬಹುದಾಗಿದೆ. ಅದು ಭಾಷಾಂತರ ಇಲ್ಲವೆ ರೂಪಾಂತರ ಇಲ್ಲವೆ ಸ್ವತಂತ್ರ ಕಾದಂಬರಿಗಳು ಈ ಎರಡು ರೀತಿಯ ವಸ್ತುವನ್ನು ಅನುಸರಿಸಿವೆ.

೧. ಪೌರಾಣಿಕ ಕಾದಂಬರಿಗಳು

೨. ಐತಿಹಾಸಿಕ ಕಾದಂಬರಿಗಳು

೩. ಸಾಮಾಜಿಕ ಕಾದಂಬರಿಗಳು

**೧. ಪೌರಾಣಿಕ ಕಾದಂಬರಿಗಳು**

೧೮೧೫ರಲ್ಲಿ ಯಾದವನಿಂದ ರಚಿತವಾದ 'ಕಲಾವತಿ ಪರಿಣಯ' ಹಾಗೂ ೧೮೨೦ರಲ್ಲಿ ಮುಮ್ಮಡಿ ಕೃಷ್ಣರಾಜರಿಂದ ರಚಿತವಾದ 'ಸೌಗಂಧಿಕಾ ಪರಿಣಯ' ಕೃತಿಗಳಿಂದ ಕನ್ನಡ ಸಾಹಿತ್ಯದಲ್ಲಿ

ಗದ್ಯ ಸಾಹಿತ್ಯ ಆರಂಭವಾಯಿತು. ಇವು ಸ್ವತಂತ್ರ ಕಲ್ಪನಾ ಪೌರಾಣಿಕ ಕಥೆಯಾಗಿವೆ. ಆದರೆ ನಾವೆಲ್‌ನ ಲಕ್ಷಣಕ್ಕೆ ಹತ್ತಿರವಾಗಿಲ್ಲ. ಇದಾದ ನಂತರದಲ್ಲಿ ೧೮೭೪ರಲ್ಲಿ ಚೆ.ಸೀತಾರಾಮ ಶಾಸ್ತ್ರಿಗಳಿಂದ ರಚಿತವಾದ 'ವಿಕ್ರಮಾರ್ಕ ಚರಿತ್ರೆ'ಯು ಪೌರಾಣಿಕ ಕತೆಯನ್ನೊಳಗೊಂಡ ಕಾದಂಬರಿಯಾಗಿದೆ. ನಂತರದಲ್ಲಿ ಗಂಗಾಧರ ಮಡಿವಾಳೇಶ್ವರರಿಂದ ರಚಿಸಲ್ಪಟ್ಟ 'ಬಾಣ ಕಾದಂಬರಿ'ಯೂ ಪೌರಾಣಿಕ ಕಾದಂಬರಿಯೇ ಆಗಿದೆ. ಹೀಗೆ ಬೆರಳೆಣಿಕೆಯಷ್ಟು ಮಾತ್ರ ಪೌರಾಣಿಕ ಕಾದಂಬರಿಗಳು ರಚನೆಯಾದವು. ಮೊದಲೆರಡು ಕಾದಂಬರಿಗಳ ಭಾಷೆ, ಶೈಲಿಗಿಂತ ನಂತರದಲ್ಲಿ ಬಂದ ಕಾದಂಬರಿಗಳು ಭಿನ್ನವಾಗಿವೆ.

ಸ್ವತಂತ್ರ ಸಾಮಾಜಿಕ ಕಾದಂಬರಿಗಳು ರಚನೆಯಾಗುವ ಕಾಲದಲ್ಲೂ ವಿರಳವಾಗಿ ಪೌರಾಣಿಕ ಕಾದಂಬರಿಗಳು ರಚನೆಯಾದವು. ಆದರೆ ಹೆಚ್ಚು ಪ್ರಾಶಸ್ತ್ಯ ದೊರೆತಿಲ್ಲ. ೧೯೧೦ ನಂತರದಲ್ಲಿ ದೊರೆತಿರುವ ರೋಣೂರ್ ವೆಂಕಟರಾಮಶಾಸ್ತ್ರಿಗಳ ಸಚಿತ್ರ ಶ್ರೀ ಭಾಗವತ ಕಥಾ ಸಂಗ್ರಹ, ಮುಳಿಯ ತಿಮ್ಮಪ್ಪಯ್ಯನವರ ಚಂದ್ರಾವಲೀವಿಲಾಸಂ, ಎಚ್.ವಿ. ಶ್ರೀನಿವಾಸ ಮೂರ್ತಿಯವರು ಜನ್ನ ಕವಿಯ ಯಶೋಧರ ಚರಿತೆಯನ್ನು ಆಧರಿಸಿ ಬರೆದಿರುವ ಸುವ್ರತ ಕರ್ಮಫಲದಂತಹ ಕಾದಂಬರಿಗಳು ಉಪಲಬ್ಧವಾಗಿವೆ. ಇದಕ್ಕೆ ಕಾರಣವನ್ನು ಸೂಕ್ಷ್ಮವಾಗಿ ಗಮನಿಸಿದರೆ ಪುರಾಣ ಕೃತಿಗಳಿಂದ ಬೇಸತ್ತ ಜನರಿಗೆ ಅದರ ಬಗ್ಗೆ ಅನಾದರ ಉಂಟಾಗಿದ್ದು ಹಾಗೂ ಹೊಸ ಮಾದರಿಯ ಕೃತಿಗಳು, ಅದರ ವಸ್ತು ಜನರನ್ನು ಆಕರ್ಷಿಸಿದ್ದು ಮುಖ್ಯವಾಗಿ ಗುರುತಿಸಬಹುದು.

**೨. ಐತಿಹಾಸಿಕ ಕಾದಂಬರಿಗಳು**

ಕೆಂಪುನಾರಾಯಣನ ಮುದ್ರಾಮಂಜೂಷ ಕೃತಿಯು ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳ ರಚನೆಯ ಮೊದಲನೆಯ ಹಂತವಾಗಿದೆ. ಈ ಕೃತಿಯನ್ನು ವಿಶಾಖದತ್ತನ ಮುದ್ರಾರಾಕ್ಷಸ ಎಂಬ ಸಂಸ್ಕೃತ ನಾಟಕದ ಐತಿಹಾಸಿಕ ವಸ್ತುವಿನ ಎಳೆಯಿಂದ ಕಾದಂಬರಿ ಮಾದರಿಗೆ ರೂಪಾಂತರಗೊಳಿಸಿದ್ದಾರೆ. ಇದರ ಲಕ್ಷಣವನ್ನು ಕುರಿತು "ಈ ಕೃತಿಯು ರೂಪಾಂತರ ಪ್ರಕ್ರಿಯೆಯ ಆರಂಭದ ಹೆಜ್ಜೆಯಾಗಿದೆ ಆದರೆ ಭಾಷೆ ಹಾಗೂ ಶೈಲಿಯಲ್ಲಿ ಏಕರೂಪವಿಲ್ಲದೆ ವಿಷಮಿಕೆ ಇದೆ" ಎಂದಿದ್ದಾರೆ.

ಈ ಕೃತಿ ರಚನೆಯ ೨೫ ವರ್ಷಗಳ ನಂತರದಲ್ಲಿ ಇಂಗ್ಲಿಷ್ ಸಾಹಿತ್ಯದ ಸಂಪರ್ಕ ಹಾಗೂ ಪ್ರಭಾವದಿಂದ ಅನುವಾದದ ಮೂಲಕ ಪೂರ್ಣ ಪ್ರಮಾಣದ ಕಾದಂಬರಿಯೊಂದು ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು. ೧೮೫೭ರಲ್ಲಿ 'ರಾಬಿನ್‌ಸನ್ ಕ್ರೂಸೋ' ಎಂಬ ಕಾದಂಬರಿ ಭಾಷಾಂತರವು (ಅನುವಾದ) ಎಸ್.ಬಿ. ಕೃಷ್ಣಸ್ವಾಮಿ ಅಯ್ಯಂಗಾರ್‌ರಿಂದ ಆಯಿತು. ಇದಲ್ಲದೆ ಮಿಸ್ ಎಜ್‌ವರ್ಥ್ ಎಂಬುವಳ 'ನಿರ್ಭಾಗ್ಯ ಮುರದ' ಮುಖ್ಯವಾದದ್ದು. ಈ ಕಾದಂಬರಿಗಳು ಭಾರತೀಯ ಕಾದಂಬರಿ ಪರಂಪರೆಗೆ ಶ್ರೀಕಾರ ಹಾಡಿದವು.

'ಸೂರ್ಯಕಾಂತ' ಕಾದಂಬರಿ ರಚನೆಯವರೆಗೂ ಕನ್ನಡದಲ್ಲಿ ಅನುವಾದಗೊಂಡ ಕಾದಂಬರಿಗಳಲ್ಲಿ ಐತಿಹಾಸಿಕ ಕಾದಂಬರಿಗಳೇ ಹೆಚ್ಚು. ೧೮೯೨ರಲ್ಲಿ ರಚನೆಯಾದ ಈ ಕಾದಂಬರಿ

ಮೇಲ್ನೋಟಕ್ಕೆ ಐತಿಹಾಸಿಕ ಕಾದಂಬರಿಯಂತೆ ಕಂಡರೂ ಅದು ಸಾಮಾಜಿಕ ಕಾದಂಬರಿಯೇ ಆಗಿದೆ. ನಂತರದಲ್ಲಿ ಮಲ್ಲಿಕಾರ್ಜುನ ಕಂಬಾರರು ಗೂಳಪ್ಪ ಕೊಟ್ಟಪ್ಪ ಅರಳಿಯವರ 'ಕರ್ನಾಟಕ ಶಾರ್ಯಸಾಗರ'ವೇ ಮೊದಲ ಸ್ವತಂತ್ರ ಐತಿಹಾಸಿಕ ಕಾದಂಬರಿ ಎಂದಿದ್ದಾರೆ. 'ಕಲಾವತಿ ಪರಿಣಯ'ವು ಹೊಸ ಮಾದರಿಯ ಕಥಾವಸ್ತುವನ್ನು ಒಳಗೊಂಡಿದ್ದರೂ ಕೂಡ ನಾವೆಲ್ ಲಕ್ಷಣಕ್ಕೆ ಹೊಂದಿಕೆಯಾಗಿಲ್ಲ. ಕಾರಣ ಇದರಲ್ಲೂ ಅಲೌಕಿಕ ಅಂಶಗಳಾದ ರಾಕ್ಷಸಿ, ಮುನಿ, ಪವಾಡಗಳ ವರ್ಣನೆ ಹೆಚ್ಚಾಗಿಯೆ ಇದೆ. ಅಲ್ಲದೆ ಇಂತಹ ಐತಿಹಾಸಿಕ, ಪೌರಾಣಿಕ ಕಾದಂಬರಿಗಳ ರಚನೆಯ ಬಗ್ಗೆಯೂ ಜನರು ಒಲವು ತೋರುತ್ತಿದ್ದರು. ಆಗಿನ ಪತ್ರಿಕೆಗಳಲ್ಲಿ ಇಂತಹ ಕಾದಂಬರಿ ರಚನೆ ಕುರಿತು–

"........ಉದಾತ್ತವಾದ ನೈತಿಕ ತತ್ವಗಳನ್ನು ಸುಲಭವಾದ ಭಾಷೆಯಲ್ಲಿ ಎಂಬ ನಮ್ಮ ಉದ್ದೇಶವನ್ನು ಮುಂದಿಟ್ಟುಕೊಂಡು ಬರೆದ ಐತಿಹಾಸಿಕ ಇಲ್ಲವೆ ಪೌರಾಣಿಕ ಕಾದಂಬರಿಗಳನ್ನು ಯಾರಾದರೂ ನಮ್ಮ ಕಡೆಗೆ ಕಳುಹಿಸಿಕೊಟ್ಟರೆ ಆನಂದದಿಂದ ಸ್ವೀಕರಿಸಿ, ಯೋಗ್ಯವೆಂದು ಕಂಡುಬಂದರೆ, ಅದನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸುವೆವು" ಎಂದು ಶ್ರೀ ಸರಸ್ವತೀ ಮಂದಿರ ಧಾರವಾಡದ ವ್ಯವಸ್ಥಾಪಕರು ಪದ್ಮನೀ ಪತ್ರಿಕೆಯಲ್ಲಿ ಜಾಹೀರು ನೀಡಿದ್ದರು. (ವಿದ್ಯಾದಾಯಿನಿ) ಆದರೆ ಈ ಕೃತಿಗಳನ್ನು ಬರೆಯುವಾಗ ಯಾವುದು ನಿಜವಾದ ಸಂಗತಿ, ಯಾವುದು ಅಲ್ಲವೆಂಬ ವಿಚಾರವನ್ನು ಅಗತ್ಯವಾಗಿ ಮಾಡಬೇಕೆಂದು ತಮ್ಮ ವಿಜ್ಞಾಪನೆಯಲ್ಲಿ ತಿಳಿಸಿದ್ದಾರೆ.

ಸ್ವತಂತ್ರವಾದ ಕಾದಂಬರಿ ಮೊದಲು ಪ್ರವೇಶ ಪಡೆದದ್ದು ಬಂಗಾಳದಲ್ಲಿ. ಬಂಗಾಳದ ಕಾದಂಬರಿಯ ಇತಿಹಾಸವನ್ನು ಗಮನಿಸಿದರೆ ಕಾದಂಬರಿ ಪ್ರಕಾರವು ರಚನೆಯಾದದ್ದು ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಾದರೂ ಅಲ್ಲಿ ರಚನೆಯಾದ ಆರಂಭದ ಕಾದಂಬರಿಗಳು ಐತಿಹಾಸಿಕ ಕಾದಂಬರಿಗಳೇ. ಭಾರತೀಯ ಪರಿಸರದಲ್ಲಿದ್ದ ರಾಜಕೀಯ ವಿಚಾರಗಳನ್ನು ಬಂಗಾಳಿ ಕಾದಂಬರಿಕಾರರು ಕೃತಿಯ ವಸ್ತುವಾಗಿಸಿಕೊಂಡರು. ಬಂಕಿಮಚಂದ್ರರು ಆರಂಭಿಕ ಕಾದಂಬರಿಕಾರರು. ಇವರಿಗೆ ಮೊದಲು ಗದ್ಯ ಕೃತಿಗಳನ್ನು ಅನೇಕರು ರಚಿಸಿದ್ದರೂ, ಕಾದಂಬರಿಯ ನಿರ್ದಿಷ್ಟ ರೂಪ ತೋರಿಸಿಕೊಟ್ಟವರು ಬಂಕಿಮರೆ. ಕನ್ನಡಕ್ಕೆ ಅನುವಾದವಾದ ಕಾದಂಬರಿಗಳಲ್ಲಿ ಬಂಕಿಮರ ಕಾದಂಬರಿಗಳೇ ಹೆಚ್ಚು. ಕನ್ನಡಕ್ಕೆ ಕಾದಂಬರಿಯನ್ನು ಮೊದಲು ಪರಿಚಯಿಸಿದ ಕೀರ್ತಿ ಬಿ.ವೆಂಕಟಾಚಾರ್ಯರಿಗೆ ಸಲ್ಲುತ್ತದೆ. ಬಂಗಾಳಿಯಿಂದ ಈಶ್ವರಚಂದ್ರ ವಿದ್ಯಾಸಾಗರರ 'ಭ್ರಾಂತಿ ವಿಲಾಸ' ಕಾದಂಬರಿಯು ೧೮೭೭ರಲ್ಲಿ ಅನುವಾದವಾಯಿತು. ಇದು ಷೇಕ್ಸ್‌ಪಿಯರ್‌ನ 'ದಿ ಕಾಮೆಡಿ ಆಫ್ ಎರರ್ಸ್' ನಾಟಕದ ರೂಪಾಂತರವಾಗಿದೆ. ಇದರ ಅನುವಾದದ ಉದ್ದೇಶವನ್ನು ಕುರಿತು ಕನ್ನಡ ಸಾಹಿತ್ಯಕ್ಕಿದ್ದ ಮಡಿವಂತಿಕೆಗೆ ವಿರುದ್ಧವಾದ ಅಸಂಪ್ರದಾಯ ಪ್ರಕಾರವಾದ್ದರಿಂದ ಈ ಕೃತಿಯನ್ನು ಅನುವಾದಿಸಿದ್ದಾಗಿ ಹೇಳಿದ್ದಾರೆ. ಅಂದರೆ ವಸ್ತು ಹಾಗೂ ಮಹಾಕಾವ್ಯದ ಲಕ್ಷಣಕ್ಕಿಂತ ಭಿನ್ನವಾದ ಸಾಹಿತ್ಯವಾದ ಕೃತಿ ಇದಾಗಿತ್ತು. ನಂತರದಲ್ಲಿ ಬಂಕಿಮರ ಕಾದಂಬರಿಗಳು ಅನುವಾದಗೊಂಡವು. ಇವರ ಕಾದಂಬರಿಗಳಲ್ಲಿ ಬ್ರಿಟಿಷರ ಆಡಳಿತ ವ್ಯವಸ್ಥೆಯನ್ನು ವಿರೋಧಿಸುವುದಕ್ಕಿಂತ ಅಲ್ಲಿದ್ದಂತಹ ಮೊಘಲರ ಆಳ್ವಿಕೆಯ ವಿರೋಧದ ದನಿ ಹೆಚ್ಚಾಗಿತ್ತು. ಭಾರತೀಯರಲ್ಲಿ ದೇಶಾಭಿಮಾನ, ಭಾಷಾಭಿಮಾನ

ಬೆಳೆಸುವಂತಹ ಚಿಂತನೆಗಳೇ ವ್ಯಕ್ತವಾಗಿದ್ದವು. ಬಂಕಿಮಚಂದ್ರರಲ್ಲದೆ ರಮೇಶಚಂದ್ರ, ನನಿಲಾಲ, ಕೃಷ್ಣವಿಹಾರ ಸೇನ್‌ನಂತಹ ಅನೇಕರು ಇದೇ ಮಾದರಿಯ ವಸ್ತುಗಳನ್ನಿಟ್ಟುಕೊಂಡೇ ಕಾದಂಬರಿಗಳನ್ನು ರಚಿಸಿದರು. ಬಿ.ವೆಂಕಟಾಚಾರ್ಯರು ತಮ್ಮ ಮೊದಲ ಕಾದಂಬರಿಯಲ್ಲಿ ಹೇಳಿರುವ ಮಾತಿನ ಹಿನ್ನೆಲೆಯೂ ಇದೇ ಆಗಿದೆ. ಅಂದರೆ ದೇಶ, ಭಾಷೆ, ಸಂಸ್ಕೃತಿಯ ಬಗ್ಗೆ ಅಭಿಮಾನ ಹಾಗೂ ಆಲೋಚನೆಯನ್ನು ಮೂಡಿಸುವಂತಹ ಗ್ರಂಥಗಳ ಪಠನೆ ಅಂದಿನ ಸಮಾಜಕ್ಕೆ ಅವಶ್ಯವಾಗಿತ್ತು. ಇವರ ದುರ್ಗೇಶನಂದಿನಿ, ದೇವಿ ಚೌಧುರಾಣಿ, ಆನಂದಮಠ, ಕಪಾಲ ಕುಂಡಲಾ ಮುಂತಾದ ಕಾದಂಬರಿಗಳು ಐತಿಹಾಸಿಕ ವಿಚಾರಗಳ ಹಿನ್ನೆಲೆಯನ್ನು ಹೊಂದಿವೆ. ಇವರು ಕಾದಂಬರಿಯು ಹಂತಹಂತವಾಗಿ ನಿರ್ದಿಷ್ಟ ರೂಪವನ್ನು ಪಡೆದುಕೊಂಡ ಬಗೆ ಮತ್ತು ಕಾರಣವನ್ನು ಹೀಗೆ ಹೇಳಿದ್ದಾರೆ

"…..ಪೂರ್ವದಲ್ಲಿ ಅಲೌಕಿಕವಾದ ಅಪ್ರಾಕೃತ ಘಟನಾವಳಿಗಳನ್ನು, ಅಸ್ವಾಭಿಕವಾದ ಮಾನವ ಚರಿತ್ರೆಯನ್ನುಳ್ಳ ಕಥೆಗಳನ್ನೂ ಓದಿ ಜನರು ತೃಪ್ತರಾಗುತ್ತಿದ್ದುದು ಕ್ರಮಕ್ರಮವಾಗಿ ನಿಂತುಹೋಗುತ್ತಾ ಬಂದಿತೆಂದು…..ಅದಕ್ಕೆ ಬದಲಾಗಿ ಸ್ವಾಭಾವಿಕ ಘಟನೆಗಳನ್ನುಳ್ಳ ನೈಸರ್ಗಿಕ ಮನುಷ್ಯ ವಿಷಯಕವಾದ ವರ್ಣನೆಯನ್ನು ಮಾಡುವ ಪದ್ಧತಿ ಪ್ರಾರಂಭವಾಯಿತು. ಆದರಾಗಲೂ ಮನುಷ್ಯರಿಗೆ ಅಪ್ರಾಕೃತ ಶಕ್ತಿಗಳನ್ನಾರೋಪಿಸಿ ವರ್ಣನೆ ಮಾಡುವುದು ತಪ್ಪಲಿಲ್ಲ. ಅದು ಕೆಲವುಕಾಲ ನಡೆದುಬಂದುದರಲ್ಲಿಯೂ ಪಾಠಕರಿಗೆ ಅಭಿರುಚಿಯೂ ತಪ್ಪಿಹೋಯಿತು. ತರುವಾಯ ಐತಿಹಾಸಿಕ ಘಟನಾವಳಿಗಳನ್ನವಲಂಭಿಸಿ ಗ್ರಂಥಗಳನ್ನು ಬರೆಯುವ ಸಂಪ್ರದಾಯವು ಪ್ರಾರಂಭವಾಗಿ ಆ ಗ್ರಂಥಗಳು ಕೆಲವು ಕಾಲ ಪಠನೀಯಗಳಾಗಿದ್ದು, ಕೆಲವು ಲೇಖಕರು ಆ ಗ್ರಂಥಗಳಲ್ಲಿಯೂ ನಾಯಕರಾದ ವೀರಪುರುಷರ ಚರಿತ್ರೆಯನ್ನೂ ಅವರ ಕಾರ್ಯಗಳನ್ನೂ ಅಪ್ರಾಕೃತವಾಗಿ ವರ್ಣನೆ ಮಾಡತೊಡಗಿದುದರಿಂದ ಅವುಗಳಲ್ಲಿಯೂ ವೈರಾಗ್ಯ ಉಂಟಾಯಿತು. ಅಲ್ಲದೆ ಕ್ರಮೇಣ ಅವುಗಳಲ್ಲಿ ವರ್ಣಿತರಾದ ನಾಯಕರಾದ ವೀರಪುರುಷರ ಸಹಜವಾದ ನಡತೆಯೂ ಕಾರ್ಯಗಳೂ ಸಾಧಾರಣ ಜನರಿಗೆ ಅಸಾಧಾರಣವಾಗಿ ಕಂಡುಬಂದುವಲ್ಲದೆ, ಕೆಲವು ಪ್ರಮೇಯಗಳಲ್ಲಿ ಈ ಗ್ರಂಥಗಳು ಪೂರ್ವೋಕ್ತ ಕಟ್ಟುಕಥೆಗಳಿಗೆ ಹತ್ತಿರ ಹೋಲಿಕೆಯಾಗುವ ಸಂಭವವೂ ಕಂಡಿತು. ಆದುಕಾರಣ ಆ ಸಂಪ್ರದಾಯ ಗ್ರಂಥಗಳೂ ಕೆಲವು ದಿನಗಳಲ್ಲಿಯೇ ವಿರಳವಾಗುತ್ತಾ ಬಂದು, ಇತಿಹಾಸ ಸಂಬಂಧವಾದ ನಾವೆಲಿಗೆ ಬದಲಾಗಿ ಗ್ರಾಹಸ್ಥ್ಯ ಸಂಬಂಧವಾದ ನಾವೆಲುಗಳು ಪ್ರಾರಂಭವಾಗಿ, ಕ್ರಮೋನ್ನತಿಯಾಗಿ ಸ್ವಾಭಾವಿಕವಾದುದಾಗಿಯೂ, ಮನುಷ್ಯ ಚರಿತ್ರ ಪರಿಚಾಯಕವಾದುದಾಗಿಯೂ, ಮನುಷ್ಯನ ಅದ್ವ್ಯವಹಾರ ನಡತೆಗಳಿಗೆ ಮೂಲಸೂತ್ರ ಜ್ಞಾಪಕಜನಕವಾದುದಾಗಿಯೂ ಇರುವ ಉತ್ಕೃಷ್ಟವಾದ ನಾವೆಲುಗಳ ಸೃಷ್ಟಿಯಾಯಿತು" (ಹೊಸಗನ್ನಡದ ಅರುಣೋದಯ –ಪು. ೩೬)

ಅಂತಹ ವಿಚಾರಗಳ ಸಾಹಿತ್ಯ ಕೃತಿಗಳು ಬಂಗಾಳಿ ಸಾಹಿತ್ಯದ ಜೊತೆಗೆ ಮರಾಠಿಯಲ್ಲೂ ಅದೇ ವೇಳೆಯಲ್ಲಿಯೇ ರಚನೆಯಾದವು. ತಮ್ಮ ಸ್ವತಂತ್ರ ಕೃತಿಗಳಲ್ಲೂ ಇಂತಹ ವಿಚಾರಗಳನ್ನು ವಸ್ತುವನ್ನಾಗಿಸಿಕೊಂಡರು. ಇವರು ತಮ್ಮ ಕಾದಂಬರಿಯಾದ 'ಕನ್ನಡಿಗರ ಕರ್ಮಕಥೆ'ಯನ್ನು ಬರೆಯುವ ಹಿನ್ನೆಲೆಯನ್ನು ಹೀಗೆ ಹೇಳಿದ್ದಾರೆ. "……..ಕನ್ನಡಿಗರ ವೈಭವಗಳನ್ನು ವ್ಯಕ್ತಪಡಿಸಿ, ಕನ್ನಡಿಗರ

ಹೃದಯದ ಚಲನವಲನವನ್ನುಂಟು ಮಾಡುವ ಕನ್ನಡಿಗರ ಕಾದಂಬರಿಗಳು ಪ್ರಕಟವಾಗದಿರುವುದು ಲಾಂಛನವಲ್ಲವೇ? ಇದರಿಂದ ಕನ್ನಡಿಗರ ಔದಾಸೀನ್ಯವೂ, ಅಭಿಮಾನ ಶೂನ್ಯತೆಯೂ ಚೆನ್ನಾಗಿ ವ್ಯಕ್ತವಾಗುವುವು...."(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು, ೩೮)

ಗಳಗನಾಥರು ರೂಪಾಂತರಿಸಿದ ಕಾದಂಬರಿಗಳಲ್ಲಿ ಹೆಚ್ಚಿನವು ರಜಪೂತ ವೀರರು ಹಾಗೂ ಇತರೆ ಮರಾಠಿ ವೀರರ ಕಥೆಗಳೆ ಆಗಿವೆ. ಈ ಮಾದರಿ ಕಾದಂಬರಿಗಳಲ್ಲಿ ಹಿಂದೂ ವೀರರು ಮುಸಲ್ಮಾನರ ದಬ್ಬಾಳಿಕೆಯ ವಿರುದ್ಧ ಹೋರಾಡಿದ ವಿಷಯವೇ ಮುಖ್ಯವಾಗಿ ಬಂದಿರುತ್ತದೆ. ಇವರು ಅನುವಾದಿಸಿದ ಕಾದಂಬರಿಗಳು ಕಮಲಕುಮಾರಿ, ಈಶ್ವರೀ ಸೂತ್ರ, ಛತ್ರಪತಿ, ಮರಾಠರ ಅಭ್ಯುದಯ, ಶಿವಪ್ರಭುವಿನ ಪುಣ್ಯ, ಸ್ವರಾಜ್ಯ ಸುಗಂಧ, ಕುರುಕ್ಷೇತ್ರ ಇತ್ಯಾದಿ.

ಗಳಗನಾಥರಿಗೆ ಧಾರ್ಮಿಕ ವಿಚಾರದಲ್ಲಿ ಹೆಚ್ಚು ಆಸಕ್ತಿ ಇದ್ದಂತೆ ತೋರುತ್ತದೆ. ಕಾದಂಬರಿಗಳಲ್ಲಿ ಧಾರ್ಮಿಕ ವಿಚಾರಗಳು ಮೂಲ ವಸ್ತುವಾಗಿದೆ. ಅವರೆ ಹೇಳುವಂತೆ–"ಧಾರ್ಮಿಕ ಲೇಖನಗಳಿಗೆ ತುಂಬಾ ಆಶ್ರಯಕೊಡುತ್ತಿರುವ 'ಸದ್ಬೋಧ ಚಂದ್ರಿಕೆ'ಯಲ್ಲಿ 'ಕಮಲ ಕುಮಾರಿ'ಯು ಪ್ರಸಿದ್ಧವಾದದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ; ಯಾಕೆಂದರೆ ಕಮಲ ಕುಮಾರಿಯಂಥ ಧರ್ಮಿಷ್ಠ ಸಾಧ್ವಿಯು, ಹಾಗೂ ತಾನಾಜಿಯಂಥ ಧರ್ಮನಿಷ್ಠ ಹಾಗೂ ರಾಜನಿಷ್ಠ ವೀರನ ಪವಿತ್ರವಾದ ವರ್ಣನೆಗಳಿಗೆ ಇದಕ್ಕಿಂತ ಪವಿತ್ರವಾದ ಸ್ಥಳವು ದೊರೆಯುವುದು ದುರ್ಲಭವು . ಜನರಲ್ಲಿ ಸಾತ್ವಿಕ ಭಾವವನ್ನು ಹೆಚ್ಚಿಸುವುದೇ ಸಜ್ಜನರ ಧರ್ಮವಾಗಿರುವುದು. ಆ ಸಾತ್ವಿಕ ಭಾವದ ಅಭಿವೃದ್ಧಿಗೆ ಈ ಕಾದಂಬರಿಯು ಸಹಾಯ ಮಾಡಬಹುದೆಂದು ನಾನು ನೆನಿಸುತ್ತೇನೆ! ಯಾಕೆಂದರೆ, ಈ ಕಾದಂಬರಿಯ ಪ್ರಧಾನ ಪಾತ್ರಗಳು ಧರ್ಮ ಶ್ರದ್ಧೆಯುಳ್ಳವುಗಳಾಗಿರುತ್ತವೆ." (ಗಳಗನಾಥರು – ೨೬) ಎಂದು ಅವರು ಕಾದಂಬರಿಯ ಪ್ರಸ್ತಾವನೆಯಲ್ಲಿ ಹೇಳಿರುವುದನ್ನು ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ.

ಇವರ ನಂತರದ ಕಾದಂಬರಿ 'ಮರಾಠರ ಅಭ್ಯುದಯ' ಶಿವಾಜಿಯ ಬದುಕಿನ ಚಿತ್ರಣದ ವಸ್ತುವನ್ನು ಒಳಗೊಂಡಿದೆ. ಇದರಲ್ಲಿ "ಹೀಗೆ ಈ ಕಾದಂಬರಿಯೊಳಗಿನ ಧೀರೋದಾತ್ತ ಪಾತ್ರಗಳಿಂದ ನಾವು ಸದ್ಗುಣಗಳನ್ನು ಸ್ವೀಕರಿಸಿ, ನಮ್ಮ ನಮ್ಮ ಧರ್ಮಗಳಲ್ಲಿ ಶ್ರದ್ಧೆಯುಳ್ಳವರೂ, ದೇವರಲ್ಲಿ ಭಕ್ತಿಯುಳ್ಳವರೂ, ಇಂಗ್ಲಿಷ್ ಸರಕಾರದ ವಿಷಯವಾಗಿ ನಿಷ್ಠೆಯುಳ್ಳವರೂ ಆಗತಕ್ಕದ್ದು" ಎಂದು ಹೇಳಿರುವುದು ಚೋದ್ಯವಾಗಿದೆ.

ಇವರ ಮತ್ತೊಂದು ಪ್ರಮುಖ ಕಾದಂಬರಿ 'ಕುಮುದಿನಿ'. ವರ್ಡ್ಸ್‌ವರ್ತ್‌ನ 'Laodamia' ಎಂಬ ಕವಿತೆಯ ಭಾವವನ್ನು ಗ್ರಹಿಸಿ ಈ ಕಾದಂಬರಿಯನ್ನು ಬರೆದಿರುವುದಾಗಿ ಹೇಳಿದ್ದಾರೆ. ಈ ಕಾದಂಬರಿಯನ್ನು ಕುರಿತು ಅವರೆ ಹೇಳುವಂತೆ "೧೯೦೩-೦೪ನೆಯ ಸುಮಾರಿಗೆ ಆಗಿನ ಮುಂಬಯಿ ಸರಕಾರ ಪ್ರಾಥಮಿಕ ಕ್ರಮಿಕ ಪಠ್ಯಪುಸ್ತಕಗಳನ್ನು ತಯಾರಿಸಲು ಒಂದು ಸಮಿತಿಯನ್ನು ನೇಮಿಸಿತ್ತು." ಗಳಗನಾಥರು ಆ ಕಮಿಟಿಯ ಕೆಲಸಕ್ಕಾಗಿ ನೇಮಕವಾಗಿದ್ದರು. ಆ ಒಂದೂವರೆ ವರ್ಷದ ಅವಧಿಯಲ್ಲಿ ಗಳಗನಾಥರಿಗೆ ಪ್ರಸ್ತುತ ಕಾದಂಬರಿಯನ್ನು ಅನುವಾದ ಮಾಡುವ ಅವಕಾಶ ದೊರೆಯಿತು. ಅದನ್ನು

ಅವರೇ "ಕಮಲ ಕುಮಾರಿ"ಯ ಪ್ರಸ್ತಾವನೆಯಲ್ಲಿ ಹೇಳಿರುವರು.

ಇವರು ರಜಪೂತರ ಕಥೆಗಳನ್ನು ಹೆಚ್ಚಾಗಿ ತಮ್ಮ ಕಾದಂಬರಿಯ ವಸ್ತುವನ್ನಾಗಿಸಿಕೊಂಡರು ಕ್ಷಾತ್ರತೇಜ, ತಿಲೋತ್ತಮೆ ಅಥವಾ ಸರಸ ಪ್ರೇಮ, ರಾಜಸಿಂಹ, ಧಾರ್ಮಿಕ ತೇಜ, ಸತ್ಯಸಾರಸುಖ ಮುಂತಾದವು. ಕ್ಷಾತ್ರತೇಜವನ್ನು ೧೯೧೪ರಲ್ಲಿ ಬರೆದಾಗ ಅದರ ಪ್ರಸ್ತಾವನೆಯಲ್ಲಿ "ಪುಣೆಯು ಮಹಾರಾಷ್ಟ್ರ ಭಾಷೆಯ ಮುಖ್ಯಸ್ಥಾನವಷ್ಟೇ? ಅಲ್ಲಿ ಕೆಲವು ಒಳ್ಳೆಯ ಪುಸ್ತಕಗಳು ನನಗೆ ಓದಲಿಕ್ಕೆ ಸಿಕ್ಕವು. ಅವುಗಳಲ್ಲಿ ಪ್ರಸಿದ್ಧ ಕಾದಂಬರಿಕಾರರಾದ ರಾ. ರಾ. ಹರಿನಾರಾಯಣ ಅಪಟೆಯವರು ಬರೆದ 'ಗಡ ಆಲಾ ಪಣಸಿಂಹ ಗೇಲಾ' ಎಂಬ ಹೆಸರಿನ ಐತಿಹಾಸಿಕ ಕಾದಂಬರಿಯು ಒಂದಾಗಿತ್ತು. ಅದನ್ನು ನಾನು ಒಂದೇ ಸಮನೆ ಓದಿ ಮುಗಿಸಿದೆನು; ಇದಲ್ಲದೆ ಆ ಕಾದಂಬರಿಯ ಉತ್ಪತ್ತಿಯ ಮೂಲ ಕಾರಣವಾದ ಸಿಂಹಗಢವನ್ನು ನೋಡುವ ಸುಯೋಗವೂ ಆಗ ನನಗೆ ಒದಗಿತು. ರಾ.ರಾ. ಹರಿನಾರಾಯಣ ಅಪಟೆಯವರಂಥ ರಸಿಕರು ಬರೆದ ಕಾದಂಬರಿಯ ವಾಚನ, ಅದಕ್ಕೆ ಸಂಬಂಧಿಸಿದ ಸಿಂಹಗಡದಂತ ಭಯಂಕರವಾದ ದುರ್ಗದ ಪ್ರತ್ಯಕ್ಷಾವಲೋಕನ ಇವೆರಡೂ ಏಕಸಮಯಾವಚ್ಛೇದದಿಂದ ಒದಗಿದ್ದರಿಂದ ಆ ಸುರಸವಾದ ಕಾದಂಬರಿಯನ್ನು ಕನ್ನಡಕ್ಕೆ ಪರಿವರ್ತಿಸಬೇಕೆಂಬ ಇಚ್ಛೆಯು ನನಗೆ ಉತ್ಪನ್ನವಾಯಿತು."

ಇವರ ಮತ್ತೊಂದು ಕಾದಂಬರಿ 'ಶಿವಪ್ರಭುವಿನ ಪುಣ್ಯ'. "ಇದು ಶಿವಾಜಿಯ ಅನಂತರದ ಕಥೆಯನ್ನು ನಿರೂಪಿಸುತ್ತದೆ. ಶಿವಾಜಿಯ ಮಗನಾದ ಸಂಭಾಜಿ ಮತ್ತು ಔರಂಗಜೇಬನ ನಡುವೆ ನಡೆದ ಯುದ್ಧ, ನಂತರ ಸಂಭಾಜಿಯ ತಮ್ಮ ರಾಜಾರಾಮ ಮತ್ತು ಸಂಭಾಜಿಯ ಹೆಂಡತಿ ಔರಂಗಜೇಬನ ವಿರುದ್ಧ ಹೋರಾಡಿದ ಕಥೆ" (ಗಳಗನಾಥ–ಪು. ೨೮)

ಗಳಗನಾಥರಿಗೆ ಕುರುಕ್ಷೇತ್ರ ಕಾದಂಬರಿ ಬರೆಯುವ ವೇಳೆಗೆ ಈ ರೀತಿಯ ಐತಿಹಾಸಿಕ ಕಾದಂಬರಿಗಳ ರಚನೆ ಚೆನ್ನಾಗಿ ಕರಗತವಾಗಿತ್ತು. ಇದರ ಲಕ್ಷಣ ಅವರ ಕಲ್ಪಿತ ಕಾದಂಬರಿಯಾಗಿದೆ. ಅವರೇ ಹೇಳುವಂತೆ "ಈ ಶ್ರೀಮಂತರಾದ ಉಮಾ–ರಮೆಯರ ವೃತ್ತಾಂತವನ್ನು ಬರೆಯುವಾಗ ನಮಗೆ ಪರಮಾವಧಿ ದುಃಖವಾಗುತ್ತದೆ; ಯಾಕೆಂದರೆ ಇವರು ಕಾದಂಬರಿಯೊಳಗಿನ ಕಾಲ್ಪನಿಕ ಪಾತ್ರಗಳಲ್ಲ.. ಇದೊಂದು ಕಲ್ಪಿತ ಕಾದಂಬರಿಯಾಗಿದ್ದು, ಇವರಿಬ್ಬರು ಕಲ್ಪಿತ ಸ್ತ್ರೀಯರಾಗಿದ್ದಾರೆ. ಇಂಥ ಸುಕುಮಾರಿಯನ್ನು ಇಷ್ಟು ದೂರ ಕರೆತಂದು ಈ ಪರಿಯ ಸಂಕಟಕ್ಕೆ ನಾವು ಎಂದೂ ಗುರಿಮಾಡುತ್ತಿದ್ದಿಲ್ಲ. ಅಷ್ಟು ಕಠಿಣ ಹೃದಯವು ನಮ್ಮದಲ್ಲವೆಂತಲೂ ವಾಚಕರಿಗೆ ಹೇಳಬಹುದು. ಹಿಂದಕ್ಕೆ ನಾವು "ಕುಮುದಿನಿ" ಕಾದಂಬರಿಯಲ್ಲಿ ಜಿನ್ನ ಓಬಲನ ಕ್ರೂರತನವನ್ನು ವರ್ಣಿಸುವಾಗ ನಮ್ಮ ಕಣ್ಣೀರುಗಳುದುರಿದವು. ಆದರೆ ಮಾಡುವದೇನು? ನಡೆದದ್ದನ್ನು ನಡೆದ ಹಾಗೆ ವರ್ಣಿಸಿದ್ದರೆ ನಿರ್ವಾಹವಿಲ್ಲ!" ಎಂದು ಗಳಗನಾಥರೆ ಹೇಳಿದ್ದಾರೆ.

ಆಪ್ಟೆಯವರು ಕನ್ನಡಿಗರ ಇತಿಹಾಸಕ್ಕೆ ಸಂಬಂಧಿಸಿದಂತೆ ಬರೆದಿದ್ದ ಒಂದು ಕಾದಂಬರಿಯನ್ನು ಗಳಗನಾಥರು "ಕನ್ನಡಿಗರ ಕರ್ಮಕಥೆ" ಅಥವಾ "ವಿಜಯನಗರದ ನಾಶ" ಎಂಬ ಹೆಸರಿನಿಂದ

ರೂಪಾಂತರಿಸಿದರು. ಇದು ಕೃಷ್ಣದೇವರಾಯನ ಕಾಲಕ್ಕೆ ಸಂಬಂಧಿಸಿದ ಕಥೆ. ಆತನ ಅಳಿಯ ರಾಮರಾಯನು ಮುಸಲ್ಮಾನರ ಮೋಸಕ್ಕೆ ಬಲಿಯಾದ ಕಥೆಯನ್ನು ಇದರಲ್ಲಿ ಬರೆಯಲಾಗಿದೆ. ಅಪಟೆಯವರು ಇದನ್ನು Robert Swell ರವರ 'A forgotten Empire' ಎಂಬ ಗ್ರಂಥವನ್ನು ಆಧರಿಸಿ ಬರೆದಿದ್ದಾರೆ. ಇದರ ಮುನ್ನುಡಿಯಲ್ಲಿ ಕಾದಂಬರಿ ಪ್ರಕಾರದ ಸ್ವೀಕರಣೆ ಕುರಿತಂತೆ–

"ಹಿಂದಕ್ಕೆ ಕರ್ನಾಟಕದಲ್ಲಿ ಚಾಲುಕ್ಯ, ಕದಂಬ, ರಾಷ್ಟ್ರಕೂಟ ಮೊದಲಾದ ಪ್ರಸಿದ್ಧ ರಾಜ ವಂಶಗಳು ಆಗಿರುವುದನ್ನು ಇತಿಹಾಸವು ಸಾರುತ್ತಿರುವುದು. ಈಗ ಸರಾಸರಿ ಮೂನ್ನೂರು ಐವತ್ತು ವರ್ಷಗಳ ಹಿಂದೆ ವಿಜಯನಗರವೆಂಬ ಜಗತ್ಪ್ರಸಿದ್ಧ ಕನ್ನಡಿಗರ ರಾಜ್ಯವು ಹೇಗೆ ವೈಭವದಿಂದ ಮೆರೆಯುತ್ತಿತ್ತೆಂಬುದನ್ನು ಕನ್ನಡಿಗರೆಲ್ಲರೂ ಬಲ್ಲರು. ಅಂದ ಬಳಿಕ ಕನ್ನಡಿಗರ ವೈಭವಗಳನ್ನು ವ್ಯಕ್ತಪಡಿಸಿ ಕನ್ನಡಿಗರ ಹೃದಯದ ಚಲನವಲನವನ್ನುಂಟು ಮಾಡುವ ಕನ್ನಡಿಗರ ಕಾದಂಬರಿಗಳು ಪ್ರಕಟವಾಗದಿರುವುದು ಲಾಂಛನವಲ್ಲವೇ?" (ಗಳಗನಾಥ–ಪು. ೩೫)ಎಂದಿದ್ದಾರೆ

ಗಳಗನಾಥರಿಗೆ ರಜಪೂತರ ಶೌರ್ಯದ ಬಗ್ಗೆ ಬಹಳ ಅಭಿಮಾನವಿದ್ದಂತೆ ಕಾಣುತ್ತದೆ. ಅವರ ಕಾದಂಬರಿಗಳಲ್ಲಿ ಈ ಅಂಶವನ್ನು ಹೆಚ್ಚಾಗಿ ಕಾಣಬಹುದಾಗಿದೆ. 'ಕ್ಷಾತ್ರತೇಜ' ಕಾದಂಬರಿಯು ಇದೆ ಹಿನ್ನೆಲೆಯನ್ನು ಹೊಂದಿದೆ. ಅವರು ತಮ್ಮ ಪ್ರಸ್ತಾವನೆಯಲ್ಲಿ ಹೀಗೆ ಹೇಳಿದ್ದಾರೆ "ಈ ಪುಸ್ತಕವು ರಾ.ರಾ. ಹರಿನಾರಾಯಣ ಅಪಟೆಯವರು ಮಹಾರಾಷ್ಟ್ರದಲ್ಲಿ ಬರೆದಿದ್ದ 'ರೂಪನಗರಚಿ ರಾಜಕನ್ಯ' (ರೂಪನಗರದ ರಾಜಕನ್ನೆ) ಎಂಬ ಐತಿಹಾಸಿಕ ಕಾದಂಬರಿಯ ಆಧಾರದಿಂದ ಬರೆದದ್ದಾಗಿದೆ. ಇದರಲ್ಲಿ ಔರಂಗಜೇಬನಿಗೂ ರಜಪೂತರಿಗೂ ನಡೆದ ಒಂದು ಯುದ್ಧ ಪ್ರಸಂಗದ ವರ್ಣನೆಯಿದ್ದು, ಇದರಿಂದ ಔರಂಗಜೇಬನ ಹಾಗೂ ರಜಪೂತರ ಗುಣಸ್ವಭಾವಾದಿಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರಜಪೂತರ ಕ್ಷಾತ್ರತೇಜಸ್ಸು ಚೆನ್ನಾಗಿ ವ್ಯಕ್ತವಾಗಿರುವುದರಿಂದ ಇದಕ್ಕೆ 'ಕ್ಷಾತ್ರತೇಜ'ವೆಂಬ ಹೆಸರನ್ನೂ, ಸ್ವಾಮಿಭಕ್ತಿಯ ಉದಾಹರಣೆಗಳು ಅಲ್ಲಲ್ಲಿ ವ್ಯಕ್ತವಾಗಿರುವುದರಿಂದ ಇದಕ್ಕೆ 'ಸ್ವಾಮಿಭಕ್ತಿಯ ಪ್ರದರ್ಶನ' ವೆಂಬ ಮತ್ತೊಂದು ಹೆಸರನ್ನೂ ಇಟ್ಟಿರುತ್ತದೆ ಎಂದು ಹೇಳಿದರು.

೧೯೧೭ರಲ್ಲಿ ಪ್ರಕಟವಾದ "ತಿಲೋತ್ತಮೆ" ಅಥವಾ "ಸರಸಪ್ರೇಮ"ವನ್ನು ಅಂದಿನ ವಾಚಕರು ಬಹುವಾಗಿ ಮೆಚ್ಚಲಿಲ್ಲವೆಂದು ಕಾಣುತ್ತದೆ. ಯಾಕೆಂದರೆ ಕಾದಂಬರಿಯ ಪ್ರಸ್ತಾವನೆಯಲ್ಲಿ ಗಳಗನಾಥರೇ ಇದರ ವಸ್ತುವನ್ನು ಕುರಿತು "ಈವರೆಗೆ 'ಚಂದ್ರಿಕೆ'ಯ ದ್ವಾರದಿಂದ ಪ್ರಸಿದ್ಧವಾಗಿದ್ದ ಹಲವು ಕಾದಂಬರಿಗಳಲ್ಲಿ ಈ 'ತಿಲೋತ್ತಮೆ' ಎಂಬ ಕಾದಂಬರಿಯು ಮನೋರಂಜನ ದೃಷ್ಟಿಯಿಂದ ಕೆಲವರಿಗೆ ಅಷ್ಟು ಉಜ್ವಲವಾಗಿ ತೋರದಿದ್ದರೂ, ಇದರೊಳಗಿನ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣ ಪಂಡಿತ ಪಾತ್ರಗಳ ಯೋಗದಿಂದ ಇದು ಬಹು ಮಹತ್ವದ್ದಾಗಿರುವುದೆಂದು ನಾವು ಹೇಳದೆ ಇರಲಾರದವರು." ಎಂದು ಬರೆದಿರುವರು.

ಬಂಗಾಲಿಯ ಸುಪ್ರಸಿದ್ಧ ಕಾದಂಬರಿಕಾರರಾದ ಬಂಕಿಮಚಂದ್ರರು ಬರೆದ "ಮೃಣಾಲಿನಿ"ಯು ಬಂಗಾಲಿಯಿಂದ ಮರಾಠಿಗೆ ಅನುವಾದಗೊಂಡಾಗ ಅದನ್ನು ಓದಿ ಗಳಗನಾಥರು ಮೆಚ್ಚಿ ಕನ್ನಡಕ್ಕೆ

ಅನುವಾದ ಮಾಡಿದರು. "ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವುದು. ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರವೆಷ್ಟು ! ಶಾಬಾಸ್ ! ಕಾದಂಬರಿಕಾರರಿದ್ದರೆ ಬಂಕಿಮಚಂದ್ರರಂಥ ಕಾದಂಬರಿಕಾರರಿರಬೇಕು" ಎಂದು ಗಳಗನಾಥರು ಉದ್ಗಾರ ತೆಗೆದರು. ಬಂಗಾಳದಲ್ಲಿ ಬ್ರಿಟಿಷರು ಅಧಿಕಾರ ಸ್ಥಾಪನೆಯ ಚುಕ್ಕಾಣಿ ಹಿಡಿದಿದ್ದರೂ ಅಲ್ಲಿನ ಸಾಹಿತಿಗಳು ಸ್ಥಳೀಯವಾಗಿ ಅಧಿಕಾರವನ್ನು ನಡೆಸುತ್ತಿದ್ದ ಮೊಘಲರ ಆಳ್ವಿಕೆಯನ್ನು ವಿರೋಧಿಸುವಂತಹ ಕೃತಿಗಳನ್ನೇ ರಚಿಸಿದರು. ರವೀಂದ್ರನಾಥ ಠಾಕೂರರ ಜನಗಣಮನ ಗೀತೆಯೂ ಈ ವ್ಯವಸ್ಥೆಯ ಫಲವೇ ಆಗಿರಬಹುದು.

ಗಳಗನಾಥರ ಪ್ರಥಮ ಪ್ರಯತ್ನವಾದ "ಪ್ರಬುದ್ಧ ಪದ್ಮನಯನೆ" ಎಂಬುದೇ ಸ್ವತಂತ್ರ ಕೃತಿ. ೧೮೯೮ರಲ್ಲಿ ಮೊದಲು ಈ ಕಾದಂಬರಿಯು ಧಾರವಾಡದ "ವಾಗ್ಭೂಷಣ" ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ಈ ಕಾದಂಬರಿಯ ಪ್ರಸ್ತಾವನೆಯಲ್ಲಿ ಲೇಖಕರು "ಕಥಾಸಂವಿಧಾನವು ನನ್ನ ಸ್ವಂತ ಕಲ್ಪನೆಯದಿದ್ದು ಅವಾಂತರ ಭಾಗದ ಹತ್ತೆಂಟು ಪುಟಗಳು ಮಾತ್ರ ಅನ್ಯ ಕಾದಂಬರಿಗಳ ಸಹಾಯದಿಂದ ಬರೆಯಲ್ಪಟ್ಟಿವೆ. ಇಷ್ಟರ ಹೊರತು ಇದರಲ್ಲಿ ಬೇರೆ ಗ್ರಂಥಗಳ ಎಂಜಲವು ಬಹುತರವಾಗಿ ದೊರೆಯಲಾರದು".(ಗಳಗನಾಥ-ಪು. ೪೫) ಎಂದು ಹೇಳಿರುವರು. ಆದರೆ ಆ ಹತ್ತೆಂಟು ಪುಟಗಳು ಯಾವುವು ಮತ್ತು ಯಾವ ಅನ್ಯ ಕಾದಂಬರಿಗಳಿಂದ ಆಯ್ದುಕೊಂಡವು ಎಂಬುದು ಮಾತ್ರ ಖಚಿತವಾಗಿ ತಿಳಿಯುವುದಿಲ್ಲ. ಆದರೆ ಇಂತಹ ಕೃತಿ ರಚನೆಗೆ ತಮ್ಮ ಹಿಂದಿನ ಕಾದಂಬರಿಯ ಪ್ರೇರಣೆಯನ್ನು ಗಮನಿಸಬಹುದು. ಗಳಗನಾಥರು ಅನುವಾದ ಕಾರ್ಯದಲ್ಲಿ ಪಳಗಿದ ಕೈ. ಈ ಅನುಭವವೇ ಈ ಕಲ್ಪನಾ ಕಾದಂಬರಿಗೆ ಮಾದರಿಯಾಗಿದೆ.

ಅಲ್ಲದೆ ಪ್ರಬುದ್ಧ ಪದ್ಮನಯನೆ ಕಾದಂಬರಿಯ ವೈಶಿಷ್ಟ್ಯವನ್ನು ಕುರಿತು "ಈ ಕಾದಂಬರಿಯು ಮುಖ್ಯವಾಗಿ ಶೃಂಗಾರ-ವೀರ-ಶೋಕಾದ್ಭುತ ರಸ ಪ್ರಧಾನವಾಗಿರುವುದು" ಎಂದು ಲೇಖಕರು ಹೇಳಿರುವಂತೆ, ಅಂತಹ ರಸ ಪ್ರಧಾನವಾದ ದೃಶ್ಯಗಳನ್ನು ಕಾದಂಬರಿಯಲ್ಲಿ ತಂದಿದ್ದಾರೆ. ಪದ್ಮನಯನೆಯನ್ನು ಕುರಿತು ಮೇಘನಾದನು, "ಕೋಮಲವಾದ ನಿನ್ನ ಚರಣಗಳು ಮೊಲೆ-ಮುಡಿ-ತಿಗಗಳ ಭಾರದಿಂದ ರಕ್ತವರ್ಣವನ್ನು ಹೊಂದಿವೆ. ನಿನ್ನ ಸೂಕ್ಷ್ಮವಾದ, ಕಟಿಯು ಮುಡಿ-ಮೊಲೆಗಳ ಭಾರವನ್ನೂ ಹೊರಲಾರದೆ ಬಾಗಿದೆ. ನಿನ್ನ ಕೆಳದುಟಿಯು ಹಲ್ಲುಗಳಿಂದ ಆಗುವ ಆಘಾತವನ್ನು ತಡೆಯದಾಗಿದೆ. ಇಲ್ಲಿಯವರೆಗೆ ನಿನ್ನನ್ನು ನಿಲ್ಲಗೊಟ್ಟು ಈ ಕ್ರೂರನಾದ ಮೇಘನಾದನು. ಮಹಾಪರಾಧಿಯಾಗಿರುವನು. ಬಾ, ನನ್ನ ಪಾರ್ಶ್ವಭಾಗದಲ್ಲಿ ವಿಶ್ರಮಿಸು" ಎಂದು ನುಡಿದು ಅವಳ ಕೈಯನ್ನು ಹಿಡಿಯಹೋಗುವನು. ಇಂತಹ ಅನೇಕ ದೃಶ್ಯಗಳು ಇದರಲ್ಲಿ ಕಾಣಬಹುದು. ಗಳಗನಾಥರು ಈ ಕಾದಂಬರಿಗೆ ಕಥಾವಸ್ತುವನ್ನು ಮುಖ್ಯವಾಗಿ ೧೬೧೬ರಲ್ಲಿ ಕೊಚೀನ ಪಟ್ಟಣದಿಂದ 'ಮ್ಯಾನ್ಯೂಅಲ್ ಬಾರಾಡಾಸ್' (Manuel Barradas) ಎಂಬುವನು ಬರೆದ ಪತ್ರವು ಲಿಸ್‌ಬನ್ನಿನ ಹಳೆಯ ಪತ್ರಾಗಾರದಲ್ಲಿ ದೊರೆತಿದ್ದು. ಆದರೆ ಮುಖ್ಯಾಂಶಗಳನ್ನು ಆಂಗ್ಲ ಭಾಷೆಗೆ ಅನುವಾದ ಮಾಡಿ ರಾಬರ್ಟ ಸಿವೆಲ್ಲರು ತಮ್ಮ ಗ್ರಂಥದಲ್ಲಿ ಕೊಟ್ಟಿರುವರು. ಗಳಗನಾಥರಿಗೆ ಈ ಪತ್ರವೇ ಮುಖ್ಯ

ಆಕರವಾಗಿದೆ. ೧೮೯೯ರಲ್ಲಿ ಗೂಳಪ್ಪ ಕೊಟ್ರಪ್ಪ ಅರಳಿಯವರಿಂದ ರಚಿತವಾದ ಕನ್ನಡ ಶೌರ್ಯಸಾಗರವು ಒಂದು ಸ್ವತಂತ್ರ ಕಲ್ಪನಾ ಐತಿಹಾಸಿಕ ಕಾದಂಬರಿಯಾಗಿದೆ. ಇದರ ಭಾಷೆಯೂ ಸರಳವಾಗಿದೆ. ಹೀಗೆ ಕೃತಿಯಲ್ಲಿ ಕಾಲಕ್ರಮೇಣ ಹೊಸ ಚಿಂತನೆಗಳು ರೂಪುಗೊಂಡು ಸ್ವತಂತ್ರ ಕೃತಿಗಳು ರಚನೆಯಾಗಲು ಪ್ರೇರಣೆಯಾದವು.

ಹೀಗೆ ಬಂಗಾಳಿ ಹಾಗೂ ಮರಾಠಿಯಿಂದ ಅನುವಾದಗೊಂಡ ಅನೇಕ ಐತಿಹಾಸಿಕ ಕಾದಂಬರಿಗಳು ಮುಂದೆ ಸ್ವತಂತ್ರ ಕಾದಂಬರಿಗಳು ರಚನೆಯಾಗಲು ಪ್ರೇರಣೆಯಾದವು. ಅಲ್ಲದೆ ಭಾರತ ದೇಶ, ಕನ್ನಡ ನಾಡು, ನುಡಿ, ಜನರ ಬಗ್ಗೆ ಗೌರವಾದರಗಳು ಹುಟ್ಟಿಕೊಳ್ಳಲು ಈ ಕಾದಂಬರಿಗಳು ಪ್ರೇರಣೆಯಾದವು. ಅನ್ಯರ ದಬ್ಬಾಳಿಕೆಗೆ ಒಳಗಾದ ದೇಶವನ್ನು ಸ್ವತಂತ್ರಗೊಳಿಸಲು ಪಣತೊಡುವಂತೆ ಈ ಕಾದಂಬರಿಗಳು ಪ್ರೇರಣೆ ನೀಡಿದುವು.

### ೩. ಸಾಮಾಜಿಕ ಕಾದಂಬರಿಗಳು

ಹೊಸಗನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಕಾದಂಬರಿ ಪ್ರಕಾರವು ಸೂರ್ಯಕಾಂತ ಕಾದಂಬರಿಯ ನಂತರದಲ್ಲಿ ತನ್ನ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಯನ್ನು ಪಡೆಯಿತು. ಅದುವರೆಗೂ ಇದ್ದಂತಹ ಪೌರಾಣಿಕ ಹಾಗೂ ಐತಿಹಾಸಿಕ ವಿಚಾರಗಳಿಗಿಂತ ಆ ಕಾಲದ ವಿಚಾರಗಳನ್ನು ಕಾದಂಬರಿಯ ವಸ್ತುವನ್ನಾಗಿಸಿ ಕೃತಿ ರಚನೆ ಮಾಡುವ ಆಲೋಚನೆ ಆರಂಭವಾಯಿತು. ಇಂದಿರಾಬಾಯಿ ಕಾದಂಬರಿಯವರೆಗೂ ಅನೇಕ ಸ್ವೀಕಾರ ನಿರಾಕಾರಗಳ ಬಗ್ಗೆ ಚರ್ಚೆ ನಡೆದಿದೆ.

ಹೊಸಗನ್ನಡ ಎಂಬುದು ಕೇವಲ ಭಾಷೆ ಹಾಗೂ ಸಾಹಿತ್ಯದ ಹಂತದಲ್ಲಿ ಹೊಸ ಚಿಂತನೆಯ ಮೂಲಕ ಬದಲಾವಣೆಯತ್ತ ಸಾಗುವ ಸಂಕ್ರಮಣದ ಸ್ಥಿತಿ. ಬ್ರಿಟೀಷರ ಆಳ್ವಿಕೆಯ ನಡುವೆ ಅವರ ಸಂಸ್ಕೃತಿಯಿಂದ ಪಡೆದ ಪ್ರಭಾವ ಕನ್ನಡ ಸಮಾಜದ ಹಲವು ವಿಷಯಗಳಿಗೆ ಹೊಸತನ ನೀಡಿತು. ಶಿಕ್ಷಣ, ಧರ್ಮ, ಆಚಾರ-ವಿಚಾರ, ಭಾಷೆ, ವಿಜ್ಞಾನ ಈ ಎಲ್ಲವೂ ಹೊಸಗನ್ನಡ ಚಿಂತನೆಯಲ್ಲಿ ಮೈತಳೆದವು. ಇದಕ್ಕೆ ಸಾಹಿತ್ಯದ ಮುಖೇನ ಉಂಟಾದ ಹೊಸ ಚಿಂತನೆಗಳೆ ಹೊಸಗನ್ನಡ ಸಾಹಿತ್ಯ ಚಿಂತನೆಗಳು.

ಹೊಸಗನ್ನಡದಲ್ಲಿ ಈ ನವೀನತೆಯನ್ನು ಉಂಟುಮಾಡುವುದರಲ್ಲಿ ಅನುವಾದ ಪ್ರಕ್ರಿಯೆ ಬಹುಮುಖ್ಯ ಸ್ಥಾನವಿದೆ. ಅನುವಾದವು ಕನ್ನಡ ಚಿಂತನೆಯನ್ನು ಒರೆಗೆ ಹಚ್ಚುವ ಒರೆಗಲ್ಲಿನಂತೆ ಕೆಲಸಮಾಡಿತು. ಇಲ್ಲಿ ಕೃತಿಯ ಯಥಾವತ್ತಾದ ಅನುವಾದವಾಗದೆ ಭಾವಾನುವಾದದ ಪ್ರಕ್ರಿಯೆ ಹೆಚ್ಚು ಕೆಲಸಮಾಡಿತು. ಉದಾಹರಣೆಗೆ ವಿಧವಾ ವಿವಾಹ ಪದ್ಧತಿಯು ಕೇವಲ ಕನ್ನಡ ಸಮಾಜದ ಚಿಂತನೆಯಾಗಿರದೆ ಪಾಶ್ಚಾತ್ಯ ಹಾಗೂ ಭಾರತೀಯ ಸಾಹಿತ್ಯದ ಮುಖೇನ ಕನ್ನಡ ಸಮಾಜವನ್ನು ಪ್ರವೇಶಿಸಿತು. ೧೮೯೮ರಲ್ಲಿ ಮರಾಠಿಯಲ್ಲಿ ರಚಿತವಾದ 'ರಮಾ ಆಣಿ ಮಾಧವ' ಕಾದಂಬರಿಯು ಭಾರತೀಯ ಸಂದರ್ಭದಲ್ಲಿ ಪೂರ್ಣ ಪ್ರಮಾಣದಲ್ಲಿ ಸಾಮಾಜಿಕ ವಸ್ತುವನ್ನೊಳಗೊಂಡ ಉತ್ತಮ

ಕೃತಿ. ಕನ್ಯಾಶುಲ್ಕಕ್ಕೆ ಸಂಬಂಧಿಸಿದ ವಸ್ತುವನ್ನು ಈ ಕಾದಂಬರಿ ಒಳಗೊಂಡಿದೆ. ಇದಕ್ಕೆ ಪೂರ್ವದಲ್ಲಿ ಈ ವಿಷಯದಲ್ಲಿ ಮರಾಠಿ ಹಾಗೂ ಕನ್ನಡದಲ್ಲಿ ಚರ್ಚೆ ಹಾಗೂ ನಾಟಕಗಳು ರಚನೆಯಾಗಿದ್ದವು. ಈ ಕಾದಂಬರಿ ಕನ್ನಡದಲ್ಲಿ ೧೯೦೦ರ ವೇಳೆಗೆ ಬೆನಗಲ್ ರಾಮರಾಯರಿಂದ ಅನುವಾದವಾಯಿತು. ಈ ಕಾಲಘಟ್ಟದಲ್ಲಿ ಕನ್ನಡದಲ್ಲಿ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ ಇಂದಿರಾಬಾಯಿ ಕಾದಂಬರಿ ಗುಲ್ವಾಡಿ ವೆಂಕಟರಾಯರಿಂದ ರಚನೆಯಾಯಿತು. ಇದರಲ್ಲಿ ಅಂದಿನ ಸಮಾಜದಲ್ಲಿದ್ದ ಬಾಲ್ಯ ವಿವಾಹ, ಮೌಢ್ಯತೆ, ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಮಠಾಧಿಪತಿಗಳ ಬಗ್ಗೆ ಇದ್ದ ಅಂಧಶ್ರದ್ಧೆ ಮುಂತಾದ ವಿಚಾರಗಳನ್ನು ಒಳಗೊಂಡಿದೆ. ಒಬ್ಬ ಸುಶಿಕ್ಷಿತ ಹೆಣ್ಣುಮಗಳೊಬ್ಬಳು ತನ್ನ ಬದುಕನ್ನು ಹೇಗೆ ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಸಾಧ್ಯ ಎಂಬ ವಿಚಾರವನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಈ ಕಾದಂಬರಿಯಲ್ಲಿ ಬರುವ ದೇವಯಾನಿ ಬಾಲ್ಯ ವೈಧವ್ಯಕ್ಕೆ ಗುರಿಯಾದರೂ ದೇವಯಾನಿಗೆ ತಂದೆ ಸುಬ್ಬರಾಯರು ದೇಶಭಾಷೆಯ ಶಾಲೆಯಲ್ಲಿ ಅವಳಿಗೆ ಶಿಕ್ಷಣವನ್ನು ಕೊಡಿಸಿ ಪುನರ್ವಿವಾಹ ಮಾಡಬೇಕೆಂದು ಆಲೋಚಿಸುವ ಹೊಸ ಚಿಂತನೆಗೆ ದ್ಯೋತಕವಾಗಿದೆ

ಈ ಕಾದಂಬರಿಯ ನಂತರದಲ್ಲಿ ಬಂದ ಮತ್ತೊಂದು ಪ್ರಮುಖ ಕಾದಂಬರಿ ಕೆರೂರು ವಾಸುದೇವಾಚಾರ್ಯರ 'ಇಂದಿರಾ'. ಈ ಕಾದಂಬರಿ ಸ್ವತಂತ್ರ ಸಾಮಾಜಿಕ ಕಾದಂಬರಿಯಾಗಿದ್ದರೂ ಇದರಲ್ಲಿ ಬರುವ ವಿಧವಾ ವಿವಾಹದ ಕಲ್ಪನೆ ಹೊರಗಿನಿಂದ ಬಂದದ್ದು ಎಂದು ಅವರೆ ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ.

"ವಿಧವೆಯರ ಪುನರ್ವಿವಾಹಕ್ಕೆ ಶಾಸ್ತ್ರಗಳೊಪ್ಪುತ್ತವೆಂತಲೂ, ಕೆಲವು ಸ್ಥಿತಿಯಲ್ಲಿದ್ದ ವಿಧವೆಯರ ಪುನರ್ವಿವಾಹವನ್ನು ಮಾಡಬೇಕೆಂತಲೂ ಸಾಮಾಜಿಕ ಸುಧಾರಣೇಚ್ಛುಗಳು ಪ್ರತಿಪಾದಿಸುತ್ತಾರೆ. ಮದ್ರಾಸ, ಪುಣೆ, ಕಲ್ಕತ್ತಾ ಮುಂತಾದ ಸ್ಥಳಗಳಲ್ಲಿ ಈ ವಿಷಯದ ಮೇಲೆ ಪ್ರಪಂಡವಾದ ವಾಗ್ದಾನ ನಡೆದು ಕಡೆಗೇನೂ ನಿರ್ಣಯವಾಗದಿದ್ದರೂ ಸಾವಿರಾರು ವಿಧವೆಯರು ಹೊಸ ಗಂಡಂದಿರನ್ನು ಸಂಪಾದಿಸಿಕೊಂಡಿರುವರು."

ಇವರು ತಮ್ಮ ಕಾದಂಬರಿಯಲ್ಲಿ ವಿಧವಾ ಪುನರ್ವಿವಾಹಕ್ಕೆ ಪ್ರೋತ್ಸಾಹವನ್ನು ನೀಡಿದ್ದಾರೆ. ಮೂರು ಮದುವೆಯನ್ನು ಮಾಡಿಕೊಳ್ಳುವ ಪಂಡಿತೆಯ ಪಾತ್ರ ಹಾಗೂ ಬಾಲ್ಯ ವಿಧವೆಯಾಗಿದ್ದ ದೇವಯಾನಿ ಪುನರ್ವಿವಾಹವಾಗಲು ಬಯಸುವಂತಹದ್ದು ಹಾಗೂ ಪುನರ್ವಿವಾಹಕ್ಕೆ ಸಮಾಜದಲ್ಲಿದ್ದ ಕಟ್ಟು ಪಾಡುಗಳು ಹೀಗೆ ವಿಧವಾ ವಿವಾಹಕ್ಕೆ ಸಂಬಂಧಿಸಿದ ಹೊಸ ಆಲೋಚನೆಯನ್ನು ಸಮಾಜಕ್ಕೆ ನೀಡಿದರು.

"ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ ಕುರಿತಂತೆಯೂ ಹೊಸ ಚಿಂತನೆಗಳು ಹೊಸಗನ್ನಡದಲ್ಲಿ ಕಾಣಿಸಿಕೊಂಡವು. ಇಂದಿರಾಬಾಯಿ, ಇಂದಿರಾ, ಸದ್ಗುಣಿ ಕೃಷ್ಣಾಬಾಯಿ ಕಾದಂಬರಿಗಳು ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯದ ಮಹತ್ವದ ಚಿಂತನೆಯನ್ನು ಸಾರಿದವು. ಕೆರೂರರು ಇಂದಿರಾ ಕಾದಂಬರಿಯ ಮುನ್ನುಡಿಯಲ್ಲಿ "ಈಗಿದ್ದ ಪದ್ದತಿಯಂತೆ ಕಲಿತು ವಿದ್ಯಾಸಂಪನ್ನೆಯರಾಗಿ ಉಭಯಕುಲಕ್ಕೂ

ಆನಂದವನ್ನೀಯುವ ಅನೇಕ ಕುಲವಧುಗಳನ್ನು ನಿತ್ಯ ನೋಡುತ್ತೇವೆ. ಆದರೆ ಸಮಾಜದ ಸದ್ಯಃ ಸ್ಥಿತಿಯನ್ನು ಧಿಕ್ಕರಿಸಿ, ಸ್ತ್ರೀಯರು ಪುರುಷರಿಗಿಂತಲೂ ಒಂದು ತೂಕ ಹೆಚ್ಚು ಸ್ವತಂತ್ರರಾಗಿರಬೇಕು. ಅನ್ಯದೇಶದ ಸ್ತ್ರೀಯರಂತೆ ಉಡುಗೆ ತೊಡುಗೆ, ಆಹಾರ ವಿಹಾರಗಳನ್ನು ಮಾಡತಕ್ಕದ್ದು ಇದುವರೆಗೆ ಪುರುಷರಿಗೆ ಸಲ್ಲುತ್ತ ಬಂದ ಮರ್ಯಾದೆಯು ಇನ್ನುಮುಂದವರಿಗೆ ಸಲ್ಲಲವಶ್ಯವಿಲ್ಲ"(ಇಂದಿರಾ–ಮುನ್ನುಡಿ) ಎಂದಿದ್ದಾರೆ.

ಇಂದಿರಾಬಾಯಿ ಹಾಗೂ ಇಂದಿರೆ ಕಾದಂಬರಿಗಳು 'ಕಾದಂಬರಿ' ಪ್ರಕಾರದ ರಚನಾ ವಿನ್ಯಾಸವೂ ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿ ರಚನೆಯಾದ ಕೃತಿಗಳು. ವಸಾಹತುಶಾಹಿ ಆಡಳಿತ ವ್ಯವಸ್ಥೇ ಭಾರತೀಯ ಪರಿಸರದಲ್ಲಿ ಉಂಟುಮಾಡಿದ ಸಂಚಲನಗಳು ಹಾಗೂ ಕ್ಷಿಪ್ರವಾಗಿ ಬದಲಾಗುತ್ತಿದ್ದ ಜನಜೀವನದ ಚಿತ್ರಣ ಇದರ ವಸ್ತು ಪರಂಪರಾಗತವಾದ ಜೀವನ ಶೈಲಿಗಿಂತ ಭಿನ್ನವಾದ ಆಲೋಚನೆಗಳು ಪರಿಸರವನ್ನು ಪ್ರವೇಶಿಸಲು ಹವಣಿಸುವ ಹಂತ ಇದರಲ್ಲಿ ಕಂಡುಬರುತ್ತದೆ. ವಿದ್ಯಾವಂತರಾದ ಯುವ ಪೀಳಿಗೆಯ ಆಲೋಚನೆಗಳು ಅಂದಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳಲ್ಲಿ ಹೇಗೆ ಸ್ಥಿತ್ಯಂತರಗಳನ್ನು ಮಾಡುತ್ತವೆ ಎಂಬುದನ್ನು ವಿವರಿಸುತ್ತದೆ. ಇದರಲ್ಲಿ ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಸ್ತ್ರೀ ಸ್ವಾತಂತ್ರ್ಯ ವಿಚಾರಗಳು ಮುಖ್ಯವಾಗಿದೆ. ಒಂದು ಗಂಡು ಹೆಣ್ಣು ತಾವೇ ಮೆಚ್ಚಿ ವಿವಾಹವಾಗುವುದು ಅಂದಿನ ಕಾಲಕ್ಕೆ ಒಂದು ಕ್ರಾಂತಿಯೇ ಸರಿ. ಇದಲ್ಲದೆ ವಿಧವೆಯಾದ ಮಗಳಿಗೆ ಮತ್ತೆ ಶಿಕ್ಷಣವನ್ನು ನೀಡಿ ಮರುವಿವಾಹಕ್ಕೆ ತಂದೆ ಸಿದ್ಧನಾಗುವ ಅಂಶವೂ ಅಷ್ಟೇ ಮಹತ್ವಪೂರ್ಣ ವಿಚಾರ. ಇಂದಿರೆ ಕಾದಂಬರಿಯಲ್ಲಿ ಇಂದಿರೆ – ರಮಾಕಾಂತ ಇಬ್ಬರೂ ವಿದ್ಯಾವಂತರು. ಆಧುನಿಕತೆಯ ಪ್ರತಿನಿಧಿಗಳಾಗಿ ಈ ಕತೆಯಲ್ಲಿ ಕಾಣಿಸುತ್ತಾರೆ. ಲೇಖಕರು ಈ ಪಾತ್ರಗಳನ್ನು ಮದುವೆಗೆ ಮುಂಚೆ ಇಬ್ಬರು ಮೆಚ್ಚಿ ಓಡಾಡುತ್ತಿದ್ದರಾದರೂ ಅವರಿಬ್ಬರೂ ವಿದ್ಯಾವಂತರು, ಸಂಸ್ಕಾರವಂತರಾಗಿರುವುದರಿಂದ ಯಾವ ಸಂದರ್ಭದಲ್ಲೂ ಎಲ್ಲೆ ಮೀರಿ ವರ್ತಿಸುವುದಿಲ್ಲ. ಎಂಬಂತೆ ಚಿತ್ರಿಸುತ್ತಾರೆ. ಅಲ್ಲದೆ ತನ್ನ ಮದುವೆಯ ಪ್ರಸಂಗದಲ್ಲಿ ನಡೆದ ಮೋಸ ವಿಚಾರ ತಿಳಿದು ಪ್ರತಿಭಟನೆಯನ್ನು ನಡೆಸುತ್ತಾಳೆ.

ಶ್ರೀಮತಿ ಶಾಂತಾಬಾಯಿಯವರ 'ಸದ್ಗುಣಿ ಕೃಷ್ಣಾಬಾಯಿ' ಕಾದಂಬರಿಯೂ ಸ್ತ್ರೀ ಶಿಕ್ಷಣದ ಮಹತ್ವ ಹಾಗೂ ಸ್ತ್ರೀ ಸಮಾಜದ ಸುಧಾರಣೆಯ ಅಗತ್ಯವನ್ನು ಪ್ರತಿಪಾದಿಸುತ್ತದೆ. ಸುಶಿಕ್ಷಿತ ಸ್ತ್ರೀಯರು ತಮ್ಮ ಗಂಡನ ಶ್ರೇಯಸ್ಸಿಗೆ, ಮಕ್ಕಳ ಪಾಲನೆಗಾಗಿ, ದೇಶೋನ್ನತಿಗೆ ಕಾರಣರಾಗುತ್ತಾರೆ ಎನ್ನುವ ಧೋರಣೆಯನ್ನು ಇಟ್ಟುಕೊಂಡು ಕೃಷ್ಣಾಬಾಯಿಯ ಪಾತ್ರವನ್ನು ರಚಿಸಿದ್ದಾರೆ. ಮುಂಬಯಿಯ ಶಾಲೆಯಲ್ಲಿ ಇಂಗ್ಲಿಷ್, ಸಂಸ್ಕೃತ ಭಾಷೆಯನ್ನು ಕಲಿತು ಅಮೇರಿಕೆಯ ಮಹಿಳೆಯಿಂದ ವೈದ್ಯಶಾಸ್ತ್ರದ ಪ್ರಥಮ ಹಂತವನ್ನು ಕಲಿತು ಗಂಡನ ಅಭಿವೃದ್ಧಿಗೆ ಬೆನ್ನೆಲುಬಾಗಿ ನಿಂತು ಆದರ್ಶ ಸ್ತ್ರೀಯಾಗಿ ಕಾಣಿಸುತ್ತಾಳೆ.

ಜಾತಿ ವ್ಯವಸ್ಥೆ, ಮೂಢನಂಬಿಕೆ, ಧರ್ಮದಲ್ಲಿನ ಆಚಾರ ವಿಚಾರಗಳು ಸಮಾಜದಲ್ಲಿನ ಸ್ವಾಸ್ಥ್ಯವನ್ನು ಹೇಗೆ ಕೆಡಿಸುತ್ತವೆ ಎಂಬ ವಿಚಾರಗಳು ಕೂಡ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಇಂದಿರಾಬಾಯಿ

ಕಾದಂಬರಿಯಲ್ಲಿ "ಕ್ರೈಸ್ತ ಧರ್ಮದ ಕೃತಿಗಳು ಜಾತಿಯನ್ನು ಕೆಡಿಸುವಂತಹವು. ಧರ್ಮ ಮೀಟರಿನಲ್ಲಿ ಜಾತಿ ಕೆಡಿಸುವ ಗೋಮಾಂಸದ ಸತ್ವವಿರುವುದರಿಂದ ಅದನ್ನು ಬಾಯಿಯಲ್ಲಿ ಇಡಬಾರದು." ಎನ್ನುವ ವಿಚಾರಗಳು ಪ್ರಸ್ತಾಪವಾಗಿವೆ.

ಧಾರ್ಮಿಕ ಹೆಸರಿನಲ್ಲಿ ಮಠಗಳಲ್ಲಿ ನಡೆಯುವ ಅನಾಚಾರಗಳ ಮೇಲೆ ಬೆಳಕು ಚೆಲ್ಲುವ ಕಾದಂಬರಿಯೇ ಬೋಳಾರ ಬಾಬುರಾವ್‌ರವರ ಕಾದಂಬರಿ 'ವಾಗ್ದೇವಿ' ಪರಂಪರಾಗತವಾಗಿ ಬೆಳೆದು ಬಂದಿರುವ ಧಾರ್ಮಿಕ ವ್ಯವಸ್ಥೆಯಡಿಯಲ್ಲಿ ನಡೆಯುವ ಅಕ್ರಮವನ್ನು ಎತ್ತಿ ಹಿಡಿಯುವ ಪ್ರಯತ್ನ ಹಾಗೂ ಆಡಳಿತ ವರ್ಗದವರ ದುರಾಡಳಿತ ಹಾಗೂ ಅಂತಹ ಅಕ್ರಮ ವ್ಯವಹಾರದಲ್ಲಿ ತಾವೂ ಭಾಗಿಯಾಗಿ ಇಂತಹ ಮಠಗಳಲ್ಲಿ ನಡೆಯುವ ಅನಾಚಾರಗಳನ್ನು ಕುರಿತ ವಿವೇಚನೆ ಈ ಕಾದಂಬರಿಯಲ್ಲಿದೆ.

ರಾಷ್ಟ್ರಪ್ರೇಮ, ಸ್ವಾತಂತ್ರ್ಯದ ಕಲ್ಪನೆಗಳು 'ಕೋಹಿನೂರು' ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಈ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಆಲೋಚನೆಗಳು ಅನುವಾದ ಪ್ರಕ್ರಿಯೆಯ ಫಲವಾಗಿವೆ. ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯದ ಕಲ್ಪನೆಗಳು ಪರಕೀಯ ಸಂಸ್ಕೃತಿಯಲ್ಲಿ ಹೆಣ್ಣು ಬದುಕುತ್ತಿರುವ ವಿಧಾನದ ಅರಿವು ಮೂಡಿದಾಗಿನಿಂದ ಎಂಬುದು ಸ್ಪಷ್ಟವಾದ ಮಾತು. ರಾಷ್ಟ್ರದ ಸ್ವಾತಂತ್ರ್ಯ, ದೇಶಪ್ರೇಮದ ಕಲ್ಪನೆಗಳೂ ಯುರೋಪಿನ ಚಿಂತನೆಗಳು ಭಾರತವನ್ನು ಪ್ರವೇಶಿಸಿದ ಫಲವಾಗಿಯೇ ಇವುಗಳಿಗೆ ಮಾದರಿಯಾಗಿ ನಿಂತದ್ದು ಅನುವಾದ ಪ್ರಕ್ರಿಯೆ.

ಮಲಯಸಿಂಹ ಕೃತಿಯಲ್ಲಿ ತಾವು ಮಾಡಿಕೊಂಡಿರುವ ಮಾರ್ಪಾಟುಗಳನ್ನು ಹಾಗು ಉದ್ದೇಶವನ್ನು ಈ ರೀತಿ ಹೇಳಿದ್ದಾರೆ–"......ಮೂಲ ಗ್ರಂಥದಲ್ಲಿ ಸಹಜವಾಗಿ ಫ್ರೆಂಚರ ಆಚಾರ ವ್ಯವಹಾರಗಳೂ ಯೂರೋಪ್ ಖಂಡದ ಹಲವು ಕಡೆಗಳ ವರ್ಣನೆಗಳಲ್ಲಿ ವಿಶೇಷವಾಗಿ ತುಂಬಿ ಹೋಗಿವೆ. ನಮ್ಮ ದೇಶದ ಬಾಂಧವರಿಗೆ ಅವುಗಳೆಲ್ಲಾ ಪ್ರಾಯಃ ಹಿಡಿಯಲಾರದೆಂದು ಭಾವಿಸಿ, ಕಥಾ ಸ್ವಾರಸ್ಯಕ್ಕೆ ಸ್ವಲ್ಪವೂ ಲೋಪ ಬಾರದಂತೆ ನಮ್ಮ ದೇಶೀಯರ ನಡವಳಿಕೆಗೆ ಅನುಗುಣವಾಗುವಂತೆ ಸ್ಥಳಗಳನ್ನು ಪಾತ್ರಗಳನ್ನೂ ಯೋಚಿಸಿಕೊಂಡು "ರಾಜ ಮಲಯಸಿಂಹ" ಎಂಬ ಹೆಸರನ್ನಿಟ್ಟು ಈ ಗ್ರಂಥವನ್ನು ರಚಿಸಿದ್ದೇನೆ." (ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೩೪)

ಗುಬ್ಬಿ ಮುರಿಗಾರಾಧ್ಯದ ಶೃಂಗಾರ ಚಾತುರ್ಯೋಲ್ಲಾಸಿನಿ. ೧೮೯೬ History of Maraty Literatureದ ಪ್ರಭಾವದಿಂದ ರಚಿಸಲಾಗಿದೆ. ಇದೊಂದು ಸ್ವತಂತ್ರ ಕಾಲ್ಪನಿಕ ಕಥೆಯಾದರೂ ಅದನ್ನು ಕಾರ್ಯರೂಪಗೊಳಿಸುವಲ್ಲಿ ಲೇಖಕರಿಗೆ ಉಂಟಾದ ಗೊಂದಲವನ್ನು ಕುರಿತು ಹೀಗೆ ಹೇಳಿದ್ದಾರೆ.

"ಇಂಗ್ಲಿಷ್‌ನಲ್ಲಿರುವ ಯಾವುದಾದರು ಒಂದು 'ನಾವೆಲ್' ಅನ್ನು ಕನ್ನಡದಲ್ಲಿ ಭಾಷಾಂತರ ಮಾಡಿ ಬರೆಯಬೇಕೆಂಬ ಆಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಆದರೆ

ಅಂತಹ ಒಂದೆರಡು ಇಂಗ್ಲಿಷ್ ಕಾವ್ಯಗಳನ್ನು ಚೆನ್ನಾಗಿ ವಿಚಾರ ಮಾಡುತ್ತ ನೋಡುವಲ್ಲಿ ಕೆಲವು ವಿಷಯಗಳು ನಮ್ಮ ಹಿಂದೂ ಮರ್ಯಾದೆಗಳಿಗನುಸಾರವಾಗಿ ಕಂಡುಬರಲಿಲ್ಲವಾದುದರಿಂದ ಆ ಮಾರ್ಗವನ್ನು ಬಿಡಲೇಬೇಕಾಯಿತು. ನಂತರ ನಮ್ಮಲ್ಲಿಯೇ ಪುರಾಣ ಪ್ರಸಿದ್ಧವಾಗಿ ಪದ್ಯ ರೂಪವಾಗಿರುವ ಯಾವುದಾದರೊಂದು ಇತಿಹಾಸವನ್ನು ಗದ್ಯರೂಪವಾಗಿ ಮಾಡಬೇಕೆಂದು ಆಲೋಚಿಸುವಲ್ಲಿ ಇಂಗ್ಲಿಷ್ ನಾವೆಲ್‌ಗಳ ಮರ್ಯಾದೆಯನ್ನು ಬಿಡಬೇಕಾಗಿ ಬಂದುದರಿಂದ ಅದು ನನ್ನ ಮನಸ್ಸಿಗೆ ಅಭಿರುಚಿಸಲಿಲ್ಲ. ಆದ ಕಾರಣ ವಿಷಯದಲ್ಲಿ ಹಿಂದೂ ಮರ್ಯಾದೆಯನ್ನು ಇಟ್ಟುಕೊಂಡ, ಇಂಗ್ಲಿಷ್ ನಾವೆಲ್ ಪದ್ಧತಿಯನ್ನು ಅನುಸರಿಸಿ ಬರೆಯಲು ಅನುಕೂಲವಾಗುವಂತೆ, ಹೊಸದಾಗಿ ಒಂದು ಕಥೆಯನ್ನು ಕಲ್ಪನೆ ಮಾಡಿಕೊಂಡೆನು."(ಹೊಸಗನ್ನಡದ ಅರುಣೋದಯ–ಪು. ೫೭೪)

ಜೋಸೆಫ್ ಮುಳಿಯಿಲ್‌ರವರ 'ಸುಕುಮಾರಿ' (೧೮೯೫) ಒಂದು ಶೂದ್ರಪರ ಕಾದಂಬರಿ. "ಈ ಕಾಲದಲ್ಲಿ ಇಂಗ್ಲಿಷ್ ಕಲಿತವರಿಗೆ ನೋವೆಲ್ಸ್ ಎಂಬ ಕಾದಂಬರಿಗಳನ್ನು ಓದುವ ಅಭಿರುಚಿ ಶಾನೆ ಹತ್ತಿಯದೆ ಅವುಗಳನ್ನು ಓದಿ ರುಚಿ ಬಲ್ಲವರು ಮಲಯಾಳದಲ್ಲಿಯೂ ಕನ್ನಡದಲ್ಲಿಯೂ ಇಂಥಾ ಪುಸ್ತಕಗಳನ್ನು ತರ್ಜುಮೆ ಮಾಡಲಿಕ್ಕೂ ರಚಿಸಲಿಕ್ಕೂ ಸುರು ಮಾಡಿದ್ದಾರೆ. ಯಾವ ಭಾಷೆಯಲ್ಲಾಗಲೀ ಕಾದಂಬರಿಗಳು ಸಾಧಾರಣವಾಗಿ ಓದುವವರೆಲ್ಲರ ಮುಖ್ಯತಾ ಯೌವನ ಪ್ರಾಯದವರ ಮನಸ್ಸನ್ನು ಕೆಡಿಸುವ ವಿಷ ಬೆರೆಸಿದ್ದಾಗಿರುತ್ತದೆ. ಇದನ್ನು ತಡೆಯುವ ಉದ್ದೇಶವೇ ಈ ಕಾದಂಬರಿ" (ಹೊಸಗನ್ನಡದ ಅರುಣೋದಯ–ಪು. ೫೬೭). ಎಂದು ಸುಕುಮಾರಿ ಎಂಬ ಪುಸ್ತಕವನ್ನು ರಚಿಸಿದ್ದಾರೆ.

ಹೀಗೆ ಕಾದಂಬರಿ ಎಂಬ ಪ್ರಕಾರವು ಹೊಸಗನ್ನಡ ಸಾಹಿತ್ಯದಲ್ಲಿ ರೂಪುಗೊಳ್ಳಲು ಅನುವಾದ ಕೃತಿಗಳು ಪ್ರೇರಣೆಯಾದವು. ಕಾದಂಬರಿಯ ಪ್ರಕಾರ, ವಸ್ತು, ಶೈಲಿ, ತಂತ್ರ, ಭಾಷೆ ಇವುಗಳಲ್ಲಿ ಹೊಸತನವು ೧೯ನೇ ಶತಮಾನದಲ್ಲಿ ಕಾಣಿಸಿಕೊಂಡಿತು. ಸಮಾಜಕ್ಕೆ ಹಾಗು ಒಬ್ಬ ವ್ಯಕ್ತಿಯ ಜೀವನಕ್ಕೆ ಹಿಡಿದ ಕನ್ನಡಿಯಾಗಿ ಈ ಪ್ರಕಾರವು ವಿಶಿಷ್ಟವಾದ ಆಲೋಚನೆಗಳನ್ನು ನೀಡಿತು. ಪಾಶ್ಚಾತ್ಯ ಜನರ ಜೀವನದ ಪರಿಚಯವು ಈ ದೇಸದಲ್ಲಿದ್ದ ಒಂದು ವ್ಯವಸ್ಥಿತ ಸಮಾಜವನ್ನು ಮತ್ತು ಚಿಂತನೆಗಳನ್ನು ಬದಲಾಯಿಸಿತು. ಸಂಕುಚಿತ ಮನಸ್ಸುಗಳು ವಿಶಾಲವಾದ ಆಲೋಚನಾ ಲಹರಿಗೆ ತೆರೆದುಕೊಳ್ಳಲು ಈ ಮಾದರಿ ಪ್ರೇರಣೆಯನ್ನು ನೀಡಿತು.

* * * * *

ಅಧ್ಯಾಯ - ೫

# ಹೊಸ ರೂಪದಲ್ಲಿ ಕಾವ್ಯ

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕಾವ್ಯಕ್ಕೆ ಅಗ್ರಸ್ಥಾನ. ಮಹಾಭಾರತ, ರಾಮಾಯಣ, ಅಭಿಜ್ಞಾನ ಶಾಕುಂತಲದಂತಹ ಮಹಾಕಾವ್ಯಗಳೇ ರಚನೆಯಾಗಿವೆ. ಇಂತಹ ಪೌರಾಣಿಕ ಕಾವ್ಯಗಳೇ ಮುಂದಿನ ಕನ್ನಡ ಕಾವ್ಯ ಸೃಷ್ಠಿಗೆ ಪ್ರೇರಣೆಯಾದುವು. ಕನ್ನಡ ಸಾಹಿತ್ಯ ಪರಂಪರೆಯನ್ನು ನಾವು ಗುರುತಿಸುವುದೇ ಪಂಪನ ಕಾವ್ಯದ ಮೂಲಕ. ಹೊಸಗನ್ನಡ ಕಾಲದ ಪೂರ್ವ ಸಾಹಿತ್ಯದಲ್ಲಿ ಗದ್ಯಕ್ಕಿಂತ ಹೆಚ್ಚಾಗಿ ಕಾವ್ಯ ರಚನೆಯಲ್ಲಿಯೇ ಕವಿಗಳು ಆಸಕ್ತಿ ಹೊಂದಿದ್ದರು. ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ಕಾವ್ಯವೇ ಉತ್ತಮ ಸಾಧನವೆಂಬುದು ಅವರ ಚಿಂತನೆ. ಹಾಗಾಗಿ ಗದ್ಯದ ರಚನೆ ಗೌಣವಾಗಿದೆ.

೧೯ನೇ ಶತಮಾನದ ಭಾರತೀಯ ಪರಿಸರದಲ್ಲಿ ಉಂಟಾದ ಅನೇಕ ಘಟನೆಗಳು ಕಾವ್ಯದ ಸ್ವರೂಪವನ್ನು ಬದಲಾಯಿಸಿತು. ಹೊಸ ರೂಪಕ್ಕೆ ಪ್ರೇರಣೆಯಾಯಿತು. ಇದರಲ್ಲಿ ಇಂಗ್ಲಿಷ್ ಸಾಹಿತ್ಯದ ಅನುವಾದ ಪ್ರಕ್ರಿಯೆ ಮುಖ್ಯವಾದುದು. ಇಡೀ ಜಗತ್ತಿನ ಸಾಹಿತ್ಯದ ಪರಿಚಯ ಇಂಗ್ಲಿಷ್ ಭಾಷೆ ಹಾಗು ಸಾಹಿತ್ಯದ ಕಿಟಕಿಯ ಮೂಲಕ ನೋಡುವಂತಾಯಿತು. ಇದು ಕಾವ್ಯದ ಭಾಷೆ, ಶೈಲಿ, ವಸ್ತು ಮುಂತಾದ ಅಂಶಗಳ ಮೇಲೆ ಹೊಸ ಚಿಂತನೆ ಹರಿಯುವಂತೆ ಮಾಡಿತು. ಈ ಬದಲಾವಣೆಯೆಲ್ಲವೂ ಹೊಸಗನ್ನಡ ಹಾಗೂ ಹೊಸ ಸಾಹಿತ್ಯಚಿಂತನೆ ರೂಪುಗೊಳ್ಳುವಲ್ಲಿ ಪ್ರೇರಣೆಯಾಯಿತು

ಹೊಸಕಾವ್ಯದ ಚಿಂತನೆಗಳು ಅನೇಕ ರೂಪಗಳನ್ನು ಪಡೆದವು. ಭಾವಗೀತೆ, ಪ್ರಗಾಥ, ಕಥನಕಾವ್ಯ, ಸರಳ ರಗಳೆ, ಸುನೀತದಂತಹ ಹೊಸ ಮಾದರಿಗಳು ಪ್ರವೇಶಿಸಿದವು. ಪ್ರಕಾರಗಳಂತೆ ವಸ್ತು, ಛಂದಸ್ಸು ಮುಂತಾದ ವಿಚಾರಗಳು ಹೊಸತನವನ್ನು ಪಡೆಯಿತು. ಈ ಅಂಶಗಳೇ ಕಾವ್ಯ ಸಾಮಾನ್ಯರಿಗೂ ನಿಲುಕುವಂತಾಯಿತು. ಮಾರ್ಗ ಸಾಹಿತ್ಯದ ತೊಡಕುಗಳು ಇಲ್ಲವಾಗಿ ಕಾವ್ಯ ಸರಳತೆಯನ್ನು ಪಡೆದದ್ದು ಇಂಗ್ಲಿಶ್ ಸಾಹಿತ್ಯದ ಅನುವಾದಗಳಿಂದ. ಬಿ.ಎಂ.ಶ್ರೀಯವರ ಮಾತು ಇಲ್ಲಿ ಸೂಕ್ತವಾಗಿದೆ "ಈಗ ಇಂಗ್ಲಿಷ್ ಸಾಹಿತ್ಯ ವೃಷ್ಟಿಯಿಂದ ಹುಚ್ಚು ಹೊಳೆಯಾಗಿ ಮೊರೆಯುತ್ತ ಬಂಡೆಗಳ ನಡುವೆ ನೂರು ಕವಲಾಗಿ ಒಡೆಯುತ್ತಾ, ಜನ್ಮಭೂಮಿಯ ಘಟ್ಟಗಳನ್ನು ತೊರೆದು ದಿವ್ಯ ವೇಗದೊಡನೆ ಕೆಳಕ್ಕೆ ಧುಮುಕಿ, ಸ್ವತಂತ್ರವಾಗಿ, ವಿಸಾರವಾಗಿ, ಬಯಲುನಾಡಿನಲ್ಲಿ ಪಯಿರ ಸಂಮೃದ್ಧಿಯನ್ನು ಪಡೆದು ವಿಹಾರ ಮಾಡಲು ತವಕಿಸುತ್ತಿದೆ" ಎಂದಿದ್ದಾರೆ. (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವ-ಪು, ೫). ಈ ಹೊಸ ಮಾದರಿಗಳು ರೂಪುಗೊಂಡ ಬಗೆಯೂ ಅಷ್ಟೇ ವೈಶಿಷ್ಟ್ಯವಾಗಿದೆ. ಹಂತ ಹಂತವಾಗಿ ತನ್ನ ಸ್ವರೂಪವನ್ನು ಬದಲಿಸಿಕೊಳ್ಳುತ್ತಾ ಹೊಸ ಮಾದರಿಗಳನ್ನು

ರೂಪಿಸುತ್ತಾ 'ಒಂದು ಮರಕ್ಕೆ ಹತ್ತಾರು ರೆಂಬೆ ಕೊಂಬೆಗಳು ಮೂಡುವಂತೆ' ಕಾವ್ಯವು ಬೆಳೆಯತೊಡಗಿದ್ದು ಇಡೀ ಕನ್ನಡ ಸಾಹಿತ್ಯದ ಸ್ವರೂಪವೇ ಬದಲಾಯಿತು.

### ಪ್ರಕಾರ

೧೯ನೇ ಶತಮಾನದ ಪೂರ್ವಾರ್ಧದವರೆಗೂ ಮಹಾಕಾವ್ಯದ ಪ್ರಭಾವವು 'ಅಪ್ಪ ಹಾಕಿದ ಆಲದ ಮರದಂತೆ' ಆಳವಾಗಿ ಜನರ ಮನಸ್ಸಿನಲ್ಲಿ ನೆಲೆಯೂರಿತ್ತು. ಅಲ್ಲದೆ ಅನೇಕರಲ್ಲಿ ಸಾಹಿತ್ಯದ ಬಗ್ಗೆ ಮಡಿವಂತಿಕೆ ಇತ್ತು. ಕಾರಣ ಇಂಗ್ಲಿಷ್ ಸಂಸ್ಕೃತಿಗೂ, ಭಾರತೀಯ ಸಂಸ್ಕೃತಿಗೂ ಸಾಕಷ್ಟು ಅಂತರ ಹಾಗೂ ವ್ಯತ್ಯಾಸವಿತ್ತು. ಅಲ್ಲದೆ ಆ ಮಾದರಿಯಲ್ಲಿ ಬರೆಯುವಾಗ ಅನೇಕ ಸಮಸ್ಯೆಗಳು ಎದುರಾದವು. ಬಿ.ಎಂ.ಶ್ರೀಯವರು ಹೇಳುವಂತೆ "ಹೊಸ ಕನ್ನಡದ ಹೊಸ ದೇಹ, ಹೊಸ ಪ್ರಾಣ – ಇದೇ ಮೊದಲಾದ ವಿಷಯಗಳೂ ಸಂಗತಿಗಳೂ ಹೊಸ ಹಾದಿಯನ್ನೇ ಹುಡುಕಿಕೊಟ್ಟಿದೆ. ಆ ಹಾದಿಯನ್ನು ಆಧುನಿಕ ಕನ್ನಡ ಕವಿತೆಯು ತುಳಿಯುತ್ತಲಿವೆ. ಆಧುನಿಕವೆಂದಷ್ಟಕ್ಕೆ ಇದು ತೀರ ಪರಂಪರೆಯನ್ನು ಬಿಟ್ಟ ಕವಿತೆಯೆಂದು ಯಾರೂ ಭಾವಿಸಲಾಗದು ಹಳೆಯ ಕವಿಗಳನ್ನು ಹೊರಗಣ್ಣಿನಿಂದ ಅದು ನೋಡುತ್ತಿದೆ"(ಆಧುನಿಕ ಕನ್ನಡ ಕವಿಗಳ ಕಾವ್ಯ ಬಿಜ್ಞಾಸೆ –ಪು. ೩೧) ಎಂದಿದ್ದಾರೆ. ಅಂದರೆ ಹೊಸದಾದ ಮಾದರಿಯನ್ನು ಸ್ವೀಕರಿಸಿದರೂ ತಮ್ಮ ಪರಂಪರಾಗತವಾದ ಚೌಕಟ್ಟನ್ನು ಮೀರುವುದು ಕಷ್ಟಕರವಾಗಿತ್ತು. ಆದ್ದರಿಂದಲೇ ಹಂತಹಂತವಾಗಿ ಕನ್ನಡ ಕಾವ್ಯದ ಸ್ವರೂಪ ಬದಲಾಗಿರುವುದನ್ನು ಈ ಕೆಳಗಿನ ಮಾದರಿಗಳಲ್ಲಿ ಕಾಣಬಹುದು.

೧. ಛಂದೋಬದ್ಧ ಹಾಡುಗಳು

೨. ಗೋವಿನ ಮಟ್ಟು

೩. ಲಾವಣಿ ಮತ್ತು ಜನಪದ ಗೀತೆ

೪. ಭಾವಗೀತೆ

೫. ಕಥನಕಾವ್ಯ

೬. ಇತರೆ ಪ್ರಕಾರಗಳು

### ೧. ಛಂದೋಬದ್ಧ ಹಾಡುಗಳು

೧೯ನೇ ಶತಮಾನದಲ್ಲಿ ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಕನ್ನಡ ಕಾವ್ಯ ಪ್ರಕಾರದಲ್ಲಿ ಕ್ರಮೇಣವಾಗಿ ಬದಲಾವಣೆಗಳು ಕಾಣಿಸಿಕೊಂಡವು. ಅದರಲ್ಲೂ ಕ್ರೈಸ್ತ ಪಾದ್ರಿಗಳು ಧರ್ಮ ಪ್ರಚಾರಕ್ಕಾಗಿ ಸಾಹಿತ್ಯಕವಾಗಿ ಇಟ್ಟ ಹೆಜ್ಜೆ ಮಹತ್ವದ ಘಟ್ಟ. ಧರ್ಮ ಪ್ರಚಾರಕ್ಕಾಗಿ ಹೊರಟ ಪಾದ್ರಿಗಳು ಸ್ಥಳೀಯವಾದ ಭಾಷೆ ಹಾಗೂ ಸಾಹಿತ್ಯದ ಮಾದರಿಯನ್ನು ಅನುಸರಿಸಿದ್ದು ಹೊಸ ಮಾದರಿ ಜನರಿಗೆ ದೊರೆಯುವಂತಾಯಿತು. ಅಲ್ಲದೆ ಸ್ಥಳಿಯರಿಗೆ ಈ ಹೊಸ ಮಾದರಿ ಸಾಹಿತ್ಯ ರಚನೆಗೆ ಹುಮ್ಮಸ್ಸನ್ನು ನೀಡಿತು. ಜಿ.ಎಚ್.ನಾಯಕರು

ಹೇಳುವಂತೆ "ಸರಿಸುಮಾರು ಚಿಕ್ಕದೇವರಾಯರ ಕಾಲದಿಂದ ಮುಂದೆ ಕನ್ನಡ ಕಾವ್ಯ ಪರಂಪರೆ ತನ್ನ ಸತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡಂತಿತ್ತು. ಸುತ್ತಣ ಬದುಕಿಗೆ ಯಾವ ರೀತಿಯ ಸಜೀವ ಪ್ರತಿಕ್ರಿಯೆಯನ್ನು ತೋರಿಸದ ಇಲ್ಲವೆ ಸಾಂಪ್ರದಾಯಿಕ ವಸ್ತು ವಿಷಯಗಳಿಗೆ ಸಂಬಂಧಿಸಿದಂತೆಯೂ ತಾದಾತ್ಮ್ಯ ಸಂಬಂಧವನ್ನು ಸ್ಥಾಪಿಸಿಕೊಳ್ಳಲಾಗದಿದ್ದ, ಹೆಚ್ಚು ಕಡಿಮೆ ಮೃತ ಎನ್ನಬಹುದಾದ ಸ್ಥಿತಿಯಲ್ಲಿ ಕನ್ನಡ ಕಾವ್ಯ ಇತ್ತು, ಗದ್ಯ ನಾಟಕಗಳಲ್ಲಿ ಕಂಡು ಬಂದ ಮಟ್ಟದ ಚೈತನ್ಯವೂ ಕಾವ್ಯದಲ್ಲಿ ಕಾಣಿಸಿಕೊಳ್ಳಲಿಲ್ಲ. ಇಂಥ ಪರಿಸ್ಥಿತಿ ಇದ್ದ ಕಾಲದಲ್ಲಿ ಇಂಗ್ಲೀಷ್ ಕಾವ್ಯಗಳ ಚೆಲುವಿಗೆ ಮನಸೋತು ಕನ್ನಡದಲ್ಲಿ ಅವುಗಳನ್ನು ಅನುವಾದಿಸುವ, ಕ್ವಚಿತ್ತಾಗಿ ಸ್ವತಂತ್ರ ರಚನೆಯನ್ನು ಪ್ರಯತ್ನಿಸುವ ಕಾರ್ಯ ನಡೆಯಿತು" ಎಂದಿದ್ದಾರೆ. ಆದರೆ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಕಾರ ೧೭-೧೮ನೇ ಶತಮಾನದಲ್ಲಿ ಸಾಕಷ್ಟು ಕೃತಿ ರಚನೆಯಾಗಿವೆ. ಆದರೆ ಅದರ ಶ್ರೇಷ್ಠತೆಯ ಹಿನ್ನೆಲೆಯಲ್ಲಿ ನೋಡಿದರೆ ಬಹಳ ನೀರಸವೆನಿಸುವಂತಹದ್ದಾಗಿದ್ದವು. ಆದ್ದರಿಂದಲೇ ಹೊಸ ಪ್ರಕಾರಗಳು ಹೆಚ್ಚು ಆಪ್ಯಾಯಮಾನವಾದವು.

ಇದಲ್ಲದೆ ಬೇಂದ್ರೆಯವರು ಹೇಳುವಂತೆ ೧೮-೧೯ನೇ ಶತಮಾನದಲ್ಲಿ ಕಾವ್ಯ ಸೃಷ್ಟಿ ಮಂದಗತಿಯಲ್ಲಿ ಸಾಗಲು ಕಾರಣಗಳನ್ನು ಹೀಗೆ ಹೇಳಿದ್ದಾರೆ. "ಎಷ್ಟೋ ದಿವಸಗಳಿಂದ ರಾಜಾಶ್ರಮವನ್ನು ಕಳೆದುಕೊಂಡು ತೊಳಲುತ್ತಿರುವ ಕರ್ನಾಟಕವು ಇಂಗ್ಲೀಷ್‌ರ ಆಳ್ವಿಕೆಯಲ್ಲಿ ಭಿನ್ನ ಭಿನ್ನವಾಗಿದ್ದುದ್ದು ಮೊದಲನೆಯ ಕಾರಣವು; ಪೇಶ್ವೆಯವರ ಆಳ್ವಿಕೆ ತೀರಿದ ಮೇಲೆ ಅದೇ ಯಾವುದೋ ಕಾರಣದಿಂದ ನಮ್ಮ ಕೂಡ ಬಳಕೆ ಮಾಡದೇ ಇದ್ದದ್ದು ಎರಡನೆಯ ಕಾರಣವು; ಕಾಲ ಪ್ರತಿಕೂಲತೆಯೂ ಮೂರನೆಯ ಕಾರಣ; ಮೊದಲನೆಯ ತರಗತಿಯ ಕರ್ತೃತ್ವಶಾಲಿಗಳು ಹುಟ್ಟದಿದ್ದದ್ದು ನಾಲ್ಕನೆಯ ಕಾರಣ". (ಸಾಹಿತ್ಯ ಸಂಶೋಧನ –ಪು. ೧೮೧)

ಕನ್ನಡ ಸಾಹಿತ್ಯವನ್ನು ಗಮನಿಸಿದರೆ ಜಿ.ಎಚ್.ನಾಯಕರ ಮಾತು ಸತ್ಯ. ಕುಮಾರವ್ಯಾಸರಂತಹವರಿಂದ ರಚಿತವಾದ ಶ್ರೇಷ್ಠ ಕೃತಿಗಳು ೧೬ನೇ ಶತಮಾನದ ನಂತರದಲ್ಲಿ ರಚನೆಯಾಗದಿರುವುದು ಗಮನಾರ್ಹ. ಅಲ್ಲದೆ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಸಂಖ್ಯೆಯಲ್ಲಿ ಕೃತಿ ರಚನೆ ಹೆಚ್ಚಾಗಿದ್ದರೂ ಅನೇಕ ಕಾರಣಗಳಿಂದ ಸಾಹಿತ್ಯದ ಬಗ್ಗೆ ಜನ ನಿರಾಸಕ್ತಿಯನ್ನು ತೋರಿದ್ದರು. ಅವುಗಳಲ್ಲಿ ಹಿಂದಿನ ಮಾದರಿಯ ಛಂದೋಬದ್ಧ ಸಾಹಿತ್ಯ, ಹಳೆಯ ವಿಚಾರಗಳೇ ರೂಪಾಂತರಗೊಂಡು ರಚನೆಯಾಗುತ್ತಿತ್ತು. ಹೀಗಾಗಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಾಗಿ ಜನರ ಮನೋಭಾವದಲ್ಲಿ ಉಂಟಾದ ಬದಲಾವಣೆಗಳೂ ಹೊಸತನವನ್ನು ಬಯಸುತ್ತಿದ್ದವು ಬಿ.ಎಂ.ಶ್ರೀಯವರು ಹೇಳುವಂತೆ "ಈಗ ೧೯ನೇ ಶತಮಾನದಲ್ಲಿ ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರೀಕತೆ, ಐಹಿಕ ಸಾಧನ ಸಂಪತ್ತು, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ದೇಶಾಭಿಮಾನವನ್ನೂ, ಹೊಸ ರುಚಿಯನ್ನೂ ಕಲಿತು, ಹೊಸ ರೀತಿಗಳಲ್ಲಿ ಕಾವ್ಯಸೃಷ್ಟಿಯನ್ನು ಅಭ್ಯಾಸ ಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತ ಕವಿತೆಗಳೂ, ಹೊಸ

ಕಾವ್ಯರೂಪಗಳೂ, ಹೊಸ ಛಂದಸ್ಸುಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು ಲಕ್ಷ್ಯಕ್ಕೆ ತಾರದೆ ಸ್ವಾತಂತ್ರ್ಯ ಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿವೆ" ಎಂದಿದ್ದಾರೆ.

ಈ ಶತಮಾನದಲ್ಲಿದ್ದ ಹೊಸ ಮಾದರಿಯ ಸಾಹಿತ್ಯಗಳು ಜನರನ್ನು ಆಕರ್ಷಿಸುತ್ತಿದ್ದವು. ಇಂತಹ ಸಮಯದಲ್ಲಿ ಸಮಾಜದಲ್ಲಿ ಆದ ಬದಲಾವಣೆಗಳು ಹೊಸ ಚಿಂತನೆಗೆ ಅವಕಾಶಮಾಡಿಕೊಟ್ಟಿತು. ಈಗಾಗಲೇ ಚರ್ಚಿಸಿದಂತೆ ಕ್ರೈಸ್ತ ಧರ್ಮ ಪ್ರಚಾರ, ಇಂಗ್ಲಿಷ್ ಮಾದರಿಯ ಶಿಕ್ಷಣ, ವಸಾಹತುಶಾಹಿ ಆಡಳಿತ ವ್ಯವಸ್ಥೆ, ಪತ್ರಿಕೆಗಳ ಹುಟ್ಟು ಮುಖ್ಯವಾದವು.

೧೮೨೦ರ ವೇಳೆಯಲ್ಲಿ ಬೈಬಲ್ ಕನ್ನಡಕ್ಕೆ ಅನುವಾದಗೊಳ್ಳುವುದರೊಂದಿಗೆ ಹೊಸ ಚಿಂತನೆಗಳನ್ನು ಕನ್ನಡಿಗರಿಗೆ ನೀಡಿತು. ಅಂದಿನ ಪತ್ರಿಕೆಗಳಲ್ಲಿ ಕ್ರೈಸ್ತ ಧರ್ಮಕ್ಕೆ ಪೂರಕವಾದ ಅನೇಕ ಪದ್ಯದ ಮಾದರಿಗಳು ಪ್ರಕಟವಾದವು. ಈ ಪತ್ರಿಕೆಗಳು ಧರ್ಮ ಪ್ರಚಾರದ ಉದ್ದೇಶಗಳಿಂದಲೇ ರೂಪುಗೊಂಡಂತವು. (ಪಾಶ್ಚಾತ್ಯ ವಿದ್ವಾಂಸರು ಹುಟ್ಟು ಹಾಕಿದ ಕೆಲವು ಪತ್ರಿಕೆಗಳು ಮತಬೋಧನೆಯ ಜೊತೆಯಲ್ಲಿಯೇ ಹೊಸಗನ್ನಡ ಗದ್ಯ ಮತ್ತು ಪದ್ಯದ ಹೊಸ ಸಾಧ್ಯತೆಗಳನ್ನು ತೋರಿಸಿಕೊಟ್ಟವು) ಮಂಗಳೂರಿನ ಬಾಸೆಲ್ ಮಿಶನ್ ಸಂಸ್ಥೆಯಿಂದ ರೆವರೆಂಡ್ ಹರ್ಮನ್ ಮೋಗ್ಲಿಂಗ್ ೧೮೧೨ ಮಂಗಳೂರು ಸಮಾಚಾರ ಪತ್ರಿಕೆ ಮುಖ್ಯವಾದದ್ದು.

ಇದೇ ಸುಮಾರಿಗೆ ಬೆಂಜಮಿನ್ ರೈಸ್ ಅವರ 'ಅರುಣೋದಯ'ದಲ್ಲಿ ಕನ್ನಡ ಕಾವ್ಯ, ದಾಸರ ಪದಗಳು ಇತ್ಯಾದಿಗಳನ್ನು ಅನುಕರಿಸಿದ ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಹಲವು ಪದ್ಯಗಳು ಹಾಗೂ ಆಂಗ್ಲ ಭಾಷೆಯಿಂದ ಅನುವಾದಗೊಂಡ ಹಲವು ಪದ್ಯಗಳು ದೊರೆಯುತ್ತವೆ. ಬನ್ಯನ್ನನ ಕೃತಿಯಾದ 'ಯಾತ್ರಿಕನ ಸಂಚಾರ'ದಲ್ಲಿ ಅನುವಾದದಲ್ಲಿ ಇರುವ ಪದ್ಯ ಮಾದರಿ ಇಲ್ಲಿದೆ–

ಪಾಪದ ಹೊರೆಯಿಂದೀ ಪರಿಯಂತ
ತಾಪವಗೊಂಡೆನು ಹೋಯಿತದು
ಆಪತ್ತಿಲ್ಲದ ಸುಖವೆನಗಾಯಿತು
ಈ ಪರಿಶುದ್ಧ ಸ್ಥಳವೇನೂ. (ಹೊಸಗನ್ನಡದ ಅರುಣೋದಯ–ಪು.೩೮೬)

ಭಾರತೀಯ ಕಾವ್ಯದ ಲಕ್ಷಣಗಳನ್ನು ಈ ಭಾಗದಲ್ಲಿ ಕಾಣಬಹುದು. ಆದಿಪ್ರಾಸ, ಚೌಪದಿಯನ್ನು ಇದು ಒಳಗೊಂಡಿದೆ. ಮಿಶನರಿಗಳು ಇಂತಹ ಪದ್ಯಗಳನ್ನು ರಚಿಸಲು ಕಾರಣಗಳು ಅನೇಕ. ಮೊದಲನೆಯದಾಗಿ ತಮ್ಮ ಮತ ಪ್ರಚಾರವನ್ನು ಭಾರತೀಯ ಮನಸ್ಥಿತಿಯ ಹಿನ್ನೆಲೆಯಲ್ಲಿ ತಿಳಿಸುವುದು. ಎರಡನೆಯದಾಗಿ ಸ್ಥಳೀಯವಾಗಿ ಅವರಿಗೆ ಸಿಕ್ಕ ಮಾದರಿಯನ್ನು ಅನುಕರಿಸುವ ಪ್ರಯತ್ನ. ಮೂರನೆಯದಾಗಿ ಹಾವನೂರರು ಹೇಳುವಂತೆ ಇವರು ಪರಂಪರಾಗತ ನಿಯಮಗಳನ್ನು ಮೀರಲು

ಅಳುಕುತ್ತಿದ್ದರೆಂಬುದು. (ಹೊಸಗನ್ನಡದ ಅರುಣೋದಯ-ಪು. ೩೦೬) ಆದರೆ ಕೆಲವೊಮ್ಮೆ ಸ್ತೋತ್ರಗಳನ್ನು ಅನುವಾದಗೊಳಿಸುವ ಸಂದರ್ಭದಲ್ಲಿ ಸ್ವಂತಿಕೆಯನ್ನು ಕಾಯ್ದುಕೊಳ್ಳಬೇಕಾದ ಅನಿವಾರ್ಯತೆಗಳನ್ನು ಕಾಣಬಹುದು. ಮೊಗ್ಲಿಂಗನ ಒಂದು ಸ್ತೋತ್ರದ ಮಾದರಿ ಹೀಗಿದೆ-

ಸ್ತೋತ್ರವನುತ್ತಮ ದೇವರಿಗರ್ಪಿಸ ಬನ್ನಿ

ಊರ್ಧ್ವವಿ ಕರ್ತಗೆ ಮಹಿಮೆಯಾಗಲಿ ಅನ್ನಿ

ಹರುಷದಿತಿ

ದೂತರ ಸಂಘದಲೀ

ಸ್ತೋತ್ರ ಸುಗಂಧವ ತನ್ನಿ

ಭೂದಿವಗಳಾತನ ಸ್ವಾಶ್ರಿತ ರಾಜ್ಯ

ಯಾವನು ಭೂದಿವರಾಜನ ಸಂಗಡ ವ್ಯಾಜ್ಯ

ಮಾಡುವನು?

ಅತನು ನುಡಿಯಲು

ಮತಜ್ಯರ ಗದ್ದಲ ತ್ಯಾಜ್ಯ(ಹೊಸಗನ್ನಡ ಅರುಣೋದಯ-ಪು, ೩೮೬)

ಇದು ಜರ್ಮನ್ ಪ್ರಾರ್ಥನಾ ಪದ್ಯದ ಅನುವಾದ. ಇದು ಟ್ಯುಟನಿಕ್ ದಾಟಿಯಲ್ಲಿ ರಚಿತವಾಗಿದೆ. ಇದರಲ್ಲಿ ಆದಿ ಇಲ್ಲವೆ ಅಂತ್ಯ ಪ್ರಾಸಗಳಿಲ್ಲ. ಅಸಮವಾದ (ವಿಷಮ) ಚರಣಗಳನ್ನು ಕಾಣಬಹುದಾಗಿದೆ. ಅಲ್ಲದೆ ಖಂಡ ಪ್ರಾಸವನ್ನು ಕೈ ಬಿಡಲಾಗಿದೆ. ಇದು ಆರಂಭದಲ್ಲಿ ಮಾಡಿದ ಹೊಸ ಪ್ರಯತ್ನವಾಗಿದೆ.

ಭಾರತೀಯ ಕಾವ್ಯಗಳ ಆರಂಭದಲ್ಲಿರುವ ನಾಂದಿ ಪದ್ಯದ ಶೈಲಿಯು ಕಿಟೆಲ್‌ನ ಕಥಾಮಾಲೆಯಲ್ಲಿರುವ(೧೮೬೨) ಕ್ರಿಸ್ತನ ಗುಣವನ್ನು ಹೇಳುವ ಶ್ಲೋಕದಲ್ಲಿ ಗಮನಿಸಬಹುದು. ಇದರ ಮಾದರಿ ಈ ಕೆಳಗಿನಂತಿದೆ-

ಶ್ರೀ ಜನಾರ್ಜಿತ ಸತ್ಯಸಾಕ್ಷಿಯೆ

ಭೂಜನ್ಯೆಕೊ ಗುರುವೆ, ದೇವಜ

ರಾಜಿಪವನೀ ರವಿಯೇ, ಸುಪಥವೆ, ಜೀವದಧಿಪತಿಯೇ

ತೇಜದುದಯವೆ, ದೇವಕಾಂತಿಯೆ

ಮೂಜಗನ್ನಾಥೇಸೊ ನಿನ್ಮುಖ

ಮಾಜಿಕೊಳ್ಳದೆ ಮೂಡು ಭಕ್ತರ ಹೃದಯಕಮಲದೊಳೂ

(ಹೊಸಗನ್ನಡ ಅರುಣೋದಯ-ಪು, ೩೮೮)

ಷಟ್ಪದಿಯ ಲಕ್ಷಣವನ್ನು ಹೋಲುವಂತ ಕ್ರೈಸ್ತ ಗೀತೆ ಇದಾಗಿದೆ. ಇಂತಹ ಪ್ರಯೋಗಗಳು ಸಾಕಷ್ಟು ನಡೆದಿವೆ. ಆದರೆ ಅನೇಕ ದೋಷಗಳು ಇದರಲ್ಲಿವೆ. ಕಿಟೆಲ್, ವೇಗಲ್, ಮೊಗ್ಲಿಂಗ್ ಈ ಮಾದರಿಯಲ್ಲಿ ಹೆಚ್ಚು ಅನುವಾದಗಳನ್ನು ಮಾಡಿದರು. ಇದರ ಜೊತೆಗೆ ಇಲ್ಲಿನ ಸ್ಥಳೀಯರು ಅನುವಾದವನ್ನು ಮಾಡುವ ಸಂದರ್ಭದಲ್ಲಿ ಹೆಚ್ಚಾಗಿ ರೂಪಾಂತರಗಳನ್ನೇ ಮಾಡಿಕೊಂಡಿದ್ದಾರೆ. ಎಸ್.ಜಿ.ನರಸಿಂಹಾಚಾರ್‌ರವರ ಈ ಕವಿತೆಯನ್ನು ನೋಡಬಹುದು–

“ಹಾಸಿಗೆಯೊಳೆಸೆದಿರ್ದ<br>
ಕೂಸಿನೊಡಲಿನ ಬೆಳಗು<br>
ಸೂಸಿ ಸುತ್ತಲುಮಿರ್ದ ದೀವಿಗೆಗಳ<br>
ಭಾಸುರತೆಯನ್ನು ಮರೆಸಿ<br>
ಮಾಸಿಸಲು ಬಣ್ಣದೊಳು<br>
ಪೂಸಿರ್ದ ಸೊಡರುಗಳ ಪೋಲ್ತಿರ್ದವು

ಅನುವಾದ ಕವಿತೆಗಳಲ್ಲದೆ ಅಲ್ಲಿ ಹೊಸ ವಸ್ತುವನ್ನೊಳಗೊಂಡ ಸ್ವತಂತ್ರ ಕವಿತೆಗಳೂ ರಚನೆಯಾಗುತ್ತಿದ್ದವು. ಆದರೆ ಅವು ಪೂರ್ವದ ಛಂದಸ್ಸಿನಲ್ಲಿದ್ದವು.

“ಕರಿಯ ಬಣ್ಣದ ಪಕ್ಷಿಯೊಂದನು<br>
ಅರಿಯದೆಲೆ ಕಲ್ಲೊಗೆದು ನಾ ನಿ–<br>
ಷ್ಠುರದಿ ಬೆದರಿಸೆ ಹಾರಿ ಹೋಯಿತು, ಕೂಗಿ, ಕಲರವದೆ<br>
ಅರರೆ! ಮೋಸವಾಯಿತೆಂದಾಂ<br>
ಕರೆದೆನ್ನೈ ಮರುದಿವಸವೊಂದನು<br>
ಬಿರಿದುದೆನ್ನಯ ಹೃದಯವದರಾ ಕ್ರೂರಕಟುರವದೆ”<br>
(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೬೭)

ಮೇಲಿನ ಕವಿತೆಯು ವಿಷಯದ ಹಿನ್ನೆಲೆಯಲ್ಲಿ ಹೊಸತಾಗಿ ಕಂಡುಬಂದರೂ ಷಟ್ಪದಿ ಛಂದಸ್ಸಿನಲ್ಲಿದೆ ಹಾಗು ಖಂಡ ಪ್ರಾಸವನ್ನು ಅನುಸರಿಸಿದ್ದಾರೆ. ಭಾಷೆಯ ದೃಷ್ಟಿಯಿಂದ ಸರಳವಾಗಿದೆ. ಇವರು ಇಲ್ಲಿನ ಜನಪದ ಕಾವ್ಯಗಳಿಂದಲೂ ಪ್ರೇರಣೆಯನ್ನು ಪಡೆದರು. ಇವು ಆರಂಭದಲ್ಲಿ ಹೊಸ ರಚನೆಯ ಮೊದಲ ಹೆಜ್ಜೆಯಾಗಿವೆ. ನಂತರದಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಅನುವಾದ ಕವಿತೆಗಳು ಕಾಣಿಸಿಕೊಂಡವು. ವಸ್ತು, ಛಂದಸ್ಸು, ಶೈಲಿಯಂತಹ ವಿಚಾರಗಳಲ್ಲಿ ಹಂತ ಹಂತವಾಗಿ ಬದಲಾವಣೆಯಾಗುತ್ತಾ ಹೊಸ ಕವಿತೆಗಳು ರಚನೆಯಾಗತೊಡಗಿದವು. ಇಂತಹ

ಕವಿತೆಯ ರಚನೆಗೆ ತೊಡಗಿದವರಲ್ಲಿ ಎಸ್.ಜಿ.ನರಸಿಂಹಾಚಾರ್ ಮೊದಲಿಗರು. ಇವರ ಕಾವ್ಯಶೈಲಿ ಕುರಿತಂತೆ

"ಇವರು ಬರೆದ ಸ್ವತಂತ್ರ ಕವನಗಳು ಬಲು ಕಡಿಮೆ. ಇವರ ಸಾಮರ್ಥ್ಯವೆಲ್ಲ ಅನುವಾದ ಕಾರ್ಯಕ್ಕೆ ಮುಖ್ಯವಾಗಿ ವಿನಿಯೋಗವಾಯಿತು.. ಮೈಸೂರು ದೇಶದಲ್ಲಿ ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಪ್ರಚುರವಾಗಿದ್ದ ಕನ್ನಡ ಪಠ್ಯಪುಸ್ತಕಗಳಲ್ಲಿ ಸೇರಿದ್ದ ಇಂಗ್ಲಿಷ್ ಪದ್ಯಾನುವಾದಗಳೆಲ್ಲವೂ ನಮಗೆ ತಿಳಿದುಬಂದ ಮಟ್ಟಿಗೆ, ಎಸ್.ಜಿ. ನರಸಿಂಹಾಚಾರ್ಯರವೇ ಎಂದು ತೋರುತ್ತದೆ. ಅವರು ನಡುಗನ್ನಡದಲ್ಲಿ ಪ್ರಚುರವಾಗಿದ್ದ ಚೌಪದಿ, ಷಟ್ಪದಿ, ಸಾಂಗತ್ಯಗಳನ್ನೇ ಹೊಸ ಭಾವಕ್ಕೂ, ಭಾಷೆಗೂ ಹೊಂದಿಕೆಯಾಗುವಂತೆ ಬಳಸಿದರು." (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೧೮) ಎಂದಿದ್ದಾರೆ ತೀ.ನಂ.ಶ್ರೀ. ಯವರು. ಎಸ್.ಜಿ.ನ ರವರು ವಸ್ತುವಿನ ದೃಷ್ಟಿಯಿಂದ ನಾವಿನ್ಯತೆ ತೋರಿದರೂ ಹಿಂದಿನ ಕಾವ್ಯ ಸ್ವರೂಪವನ್ನು ನಿರಾಕರಿಸಲು ಸಾಧ್ಯವಾಗಿಲ್ಲ. ಕಾರಣ ಹೊಸ ಮಾದರಿಯನ್ನು ಜನರು ಸ್ವೀಕರಿಸುವ ಬಗ್ಗೆ ಗೊಂದಲಗಳಿರುವುದು ಸಹಜ. ಆದ್ದರಿಂದ ಈ ಪ್ರಯತ್ನದಲ್ಲಿ ಎರಡನ್ನೂ ಸಮ್ಮಿಲನ ಮಾಡಿದ್ದಾರೆ.

ಎಸ್.ಜಿ.ನರವರು ಇಂಗ್ಲಿಷ್ ಭಾಷೆ ಬಲ್ಲವರಾಗಿದ್ದರು. ಅವರ ಹೆಚ್ಚಿನ ಕವಿತೆಗಳೆಲ್ಲವೂ ಭಾಷಾಂತರವೇ. ಇಂಗ್ಲಿಷ್ ಕವಿತೆಗಳ ಭಾಷಾಂತರಕ್ಕೆ ಹೊಸ ರೂಪವನ್ನು ಕೊಟ್ಟವರು ಇವರೆ. ಅಲ್ಲದೆ ಶಾಲಾ ಮಕ್ಕಳಿಗೆ ಅನುಕೂಲವಾಗುವಂತಹ ಕವಿತೆಗಳನ್ನೆ ಹೆಚ್ಚಾಗಿ ಅನುವಾದಿಸಿದರು. ಇವರ ಶಕ್ತಿ ಸರಳತೆಗಳಿಗೆ ನಿದರ್ಶನವಾಗಿ ವರ್ಡ್ಸ್‌ವರ್ತ್ ಕವಿಯ 'ಖಿಂ ಣುಜ ಅಣಭಿಞಾಂ' ಎಂಬುದರ ಅನುವಾದದ ಒಂದು ನುಡಿಯನ್ನು ಇಲ್ಲಿ ಉದಾಹರಿಸಬಹುದು.

"ಬಾರೋ ಬಸಂತದ ಕಂದಾ ಬಾ ಬಾ ಬಾರೊ
ಹಾರುವ ಹಕ್ಕಿ ನೀನಲ್ಲ ।
ಸಾರುವ ದನಿ, ಮಾಯದ ಗಂಟು, ಕಣ್ಣಿಗೆ
ತೋರದ ಹುರುಳಾಗಿ ಸುಳಿವೆ ॥"

"Thrice welcome, darling of the spring !
Even yet thou art to me
No bird, but an invisible thing,
A voice, a mystery;"

ಇದರ ಛಂದಸ್ಸು ಸಾಂಗತ್ಯ ; ಭಾಷೆ ಹೊಸಗನ್ನಡ. ಎಲ್ಲರಿಗೂ ಅರ್ಥವಾಗುವ ಹಾಗೆ ಕಾವ್ಯವಿರಬೇಕೆಂಬುದು ಅವರ ನಿಲುವು. ಇಂತಹ ಛಂದೋಬಂಧ ಅವರ ಸ್ವತಂತ್ರ ಕವಿತೆಗಳಲ್ಲೂ ಕಾಣಬಹುದಾಗಿದೆ.

"ಮಳೆಗಾಲ-ಕುಸುಮಷಟ್ಪದಿ"

ಮಳೆಗಾಲದೊಳು ಬೀಜ । ಗಳು ಮೊಳಕೆಯಾಗುವುವು ।
ಬೆಳೆಯುವುವು ಹುಲ್ಲುಗಳು ಸಸಿಗಳೆಲ್ಲಾ ॥
ಇಳೆಯ ಗಿಡಮರ ಬಳ್ಳಿಗಳು ಚಿಗುರಿ ಹೂವಾಗಿ ।
ಫಲಿಸುವುವು ಕೆರೆ ಕಟ್ಟೆ ತುಂಬುತಿಹುವು ॥೧
ಓಡುವುದು ಲೋಕವನು । ಪೀಡಿಸುವ ಬೇಸಗೆಯು ।
ಮೂಡುವುದು ಸಂತೋಷ ಜನರಿಗೆಲ್ಲ ॥
ಕೂಡಿ ನವಿಲುಗಳೆಲ್ಲ । ನಾಡೆ ಗರಿಗಳ ಕೆದರಿ ।
ಪಾಡಿ ಕುಣಿಯು ತಲಿಹವು ವನಗಳಲ್ಲಿ ॥೨
ಮಳೆಯೊಡನೆ ಮುಂಗಾರಿ । ನೊಳಗಾಲಿ ಕಲ್ಲುಗಳು ।
ಫಳಫಳನೆ ಸುರಿಯುವುವು ಗುಡುಗುತಿಹುದು ॥
ಸುಳಿಯುವುದು ಬಿರುಗಾಳಿ । ತೊಳುವುದು ಕುಡು ಮಿಂಚು ।
ಛಿಳಿಲೆಂದು ಬೀಳುವುದು ಸಿಡಿಲು ಧರೆಗೆ॥೩"

ಮೇಲಿನ ಕವಿತೆಯಲ್ಲಿ ವಸ್ತುವಿನ ದೃಷ್ಟಿಯಿಂದ ಹೊಸತನವಿದೆ. ಆದರೆ ಪ್ರಾಸ, ಛಂದಸ್ಸನ್ನು ಮೀರಿಲ್ಲ. ಹೀಗೆ ಎಸ್.ಜಿ.ನರವರ ಕಾವ್ಯಗಳು ಕನ್ನಡ ಸಾಹಿತ್ಯಕ್ಕೆ ಹೊಸ ಮಾರ್ಗವನ್ನು ಹಾಕಿಕೊಟ್ಟವು. ನಂತರದಲ್ಲಿ ಹೊಸ ಮಾದರಿಯಲ್ಲಿ ಕಾವ್ಯ ರಚಿಸಿದ ಕೀರ್ತಿ ಹಟ್ಟಿಯಂಗಡಿ ನಾರಾಯಣರಾಯರಿಗೆ ಸಲ್ಲುತ್ತದೆ. ಇವರ 'ಆಂಗ್ಲ ಕವಿತಾಸಾರ' ಕನ್ನಡ ಸಾಹಿತ್ಯದ ಮೊದಲ ಕವನ ಸಂಕಲನವಾಗಿದೆ. ಇದರಲ್ಲಿ ಇಂಗ್ಲಿಷ್ ಗೀತೆಗಳನ್ನು ಅನುವಾದಿಸುವುದರೊಂದಿಗೆ ಕನ್ನಡದ ಗಂಧವನ್ನು ಲೇಪಿಸಿದ್ದಾರೆ. ಅದರ ಮುನ್ನುಡಿಯಲ್ಲಿ "ಈ ಪದ್ಯಗಳಲ್ಲಿ ಆಂಗ್ಲರ ಕೆಲವು ಪ್ರಸಿದ್ಧ ಕೃತಿಗಳನ್ನು ಅನುವಾದಿಸಿ ಹಾಕಿದೆ. ಯುಕ್ತವಾಗಿ ಕಂಡಂತೆ ಅಲ್ಲಲ್ಲಿ ಕೆಲವು ಅಂಶಗಳನ್ನು ಲೋಪಿಸಿ ಇನ್ನೂ ಕೆಲವನ್ನು ಬದಲಿಸಿದೆ. ಕನ್ನಡದ ಛಂದಸ್ಸಿನಲ್ಲಿ ಪೂರ್ವಿಕರು ಆಗಾಗ್ಗೆ ನೂತನ ರೀತಿಗಳನ್ನು ಹುಟ್ಟಿಸಿದರು. ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳ ಕಾವ್ಯಪ್ರಿಯರು ಕೇಳುತ್ತಾರೆ. ಈ ಪದ್ಯಗಳಲ್ಲಿ ಪ್ರಾಸವನ್ನು ತೊರೆಯದಿದ್ದರೂ, ಪೂರ್ವ ಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ. ಆದ ಕಾರಣ ವೃತ್ತಗಳಿಗೆ ಹೆಸರು ಹಾಕಿಲ್ಲ. ಬೇಕಾದರೆ ಶಿಥಿಲ ರಗಳೆ, ಶಿಥಿಲ ಕಂದ ಎಂಬಂತೆ ಹೆಸರುಗಳನ್ನು ನಿರ್ಮಿಸಬಹುದು" ಎಂದಿದ್ದಾರೆ. (ಸಮಾಲೋಕನ-ಪು. ೧೩)

ನರಲೋಕವೆಲ್ಲ ನಾಟಕಶಾಲೆಂತಿರುತ।
ಪುರುಷ ವನಿತೆಯರು ಬರಿಯಾಟದವರು॥

ಮರೆದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ।
ಪರಿಪರಿಯ ವೇಷಗಳ ನಟಿಸುತಿಹರು॥.. (ಷೇಕ್ಸ್‌ಪಿಯರ್)
ತೊಲಗು ಹೃದಯದ ಮರುಳುಗೊಳಿಸುವಾವೋದಪೇ।
ಸಲಹುವಳು ನಿನ್ನನೊಬ್ಬಳು ಜನನಿ ಮೋಹವೇ॥
ಸ್ಥಿರಚಿತ್ತ ನಿನ್ನಾಟದೊಡವೆಗಳ ನೀಗುವುದು।
ಬರಿಯ ಸೋಮಾರಿಗಳ ಬಗೆ ನಿನಗೆ ಸಲ್ಲುವುದು॥(ಮಿಲ್ಟನ್)
(ಹಟ್ಟಿಯಂಗಡಿ ನಾರಾಯಣರಾಯರು.ಸಾಹಿತ್ಯ ಸಂಚಿಕೆ–ಪು. ೨೪)

ಹೀಗೆ ಅನೇಕ ಪಾಶ್ಚಾತ್ಯ ಕವಿಗಳಾದ ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಕಾಲಿನ್ಸ್, ವಿಬಿಯರ್ ಈ ಮೊದಲಾದ ಕವಿಗಳಿಂದ ಆಯ್ದುಕೊಂಡ ಭಾಗಗಳ ಮತ್ತು ಗೀತೆಗಳನ್ನು ಅನುವಾದಿಸಿದ್ದಾರೆ. ಇದರಲ್ಲಿ ಅವರೇ ಹೇಳುವಂತೆ ಅನೇಕ ಬದಲಾವಣೆಗಳನ್ನು ಗುರುತಿಸಬಹುದು. ಆದರೆ ಪ್ರಾಸ ಮೂಢತನದ ಬಗ್ಗೆ ಗೊಂದಲದ ಲಕ್ಷಣಗಳು ಕಾಣುತ್ತವೆ. ಬಿ.ಎಂ.ಶ್ರೀಯವರು ಹೇಳುವಂತೆ ಹ.ನಾರಾಯಣರಾಯರು ರಗಳೆಯ ಚೌಪದಿಯನ್ನು ಮೀರಿಲ್ಲ; ಆದಿ ಪ್ರಾಸವನ್ನು ಎಲ್ಲೂ ಪೂರ್ಣವಾಗಿ ಬಿಟ್ಟಿಲ್ಲ; ಎರಡೆರಡು ಪಂಕ್ತಿಗಳಿಗಾದರೂ ಉಳಿಸಿಕೊಂಡಿದ್ದಾರೆ.

ಅವರು ತಮ್ಮ 'ಕವಿತಾವರ್ಧನ' ಲೇಖನದಲ್ಲಿ ಹೊಸ ಕಾವ್ಯದ ಸ್ವರೂಪ ಕುರಿತು ಸುದೀರ್ಘವಾಗಿ ಚರ್ಚಿಸಿದ್ದಾರೆ. ಮೊದಲನೆಯದಾಗಿ ಪ್ರಸ್ತುತ ಕಾವ್ಯಕ್ಕೆ ಛಂದಸ್ಸು ಮತ್ತು ಪ್ರಾಸದ ಅವಶ್ಯಕತೆಯನ್ನು ಕುರಿತು ಹೀಗೆ ಹೇಳಿದ್ದಾರೆ–

"ಛಂದಸ್ಸಿನಿಂದ ಗದ್ಯಕ್ಕಿಂತ ಪದ್ಯ ರಚನೆ ಚೆಂದವಾಗಿ ಶೋಭಿಸುವುದು. ಪ್ರಾಸವಿಲ್ಲದೆ ಪದ್ಯಗಳನ್ನು ಏಕೆ ರಚಿಸಬಾರದು ಎಂದು ಕೆಲವರು ಕೇಳುತ್ತಾರೆ. ಏಕೆ ಕೂಡದು? ಸೀರೆಗೆ ಸೆರಗಿಲ್ಲದಿದ್ದರೇನು? ಹಣೆಗೆ ಬೊಟ್ಟಿಲ್ಲದಿದ್ದರೇನು? ಒಂದು ರಾಗದಲ್ಲಿ ವಾದಿ ಮತ್ತು ಸಂವಾದಿ ಎಂಬೆರಡು ಪ್ರಧಾನ ಸ್ವರಗಳಿರಬೇಕಂತೆ. ಅವುಗಳನ್ನು ಪದೇ ಪದೇ ತೋರಿಸಿದರೆ ರಾಗವು ಸ್ಪಷ್ಟವಾಗಿಯೂ ಸುಂದರವಾಗಿಯೂ ಕಾಣುವುದೆಂದು ಸಂಗೀತಜ್ಞರು ಹೇಳುವರು. ಈ ನಿಯಮವನ್ನು ಉಲಂಘಿಸಿದರೆ ಸಂಗೀತವೇ ಅಳಿದುಹೋಗದು. ಅಷ್ಟೇಕೆ ಈ ಮರ್ಯಾದೆಗೆ ಉತ್ತರದಲ್ಲಿರುವ ಪ್ರಾಮುಖ್ಯವು ದಕ್ಷಿಣದಲ್ಲಿಲ್ಲವಂತೆ."

"ಕನ್ನಡಕ್ಕೆ 'ಸತತಂ ಪ್ರಾಸಂ' ಎಂದು ನೃಪತುಂಗನು ಬರೆದಿರುವನು. ಈ ಪದ್ಧತಿ ಎಷ್ಟು ಹಳೆಯದೆಂದು ಹೇಳಕೊಡದು. ಸಾಂಗತ್ಯದಲ್ಲಿ ನಾಗವರ್ಮನು ವರ್ಣಿಸಿದ ಅಕ್ಷರಮಾತ್ರಾಗಣಗಳ ಕ್ರಮವನ್ನು ಕಿತ್ತು ಹಾಕಿದರೂ ಪ್ರಾಸವನ್ನು ಬಿಟ್ಟುಬಿಡಲಿಲ್ಲ. ಪ್ರಾಸಕ್ಕೆ ಕನ್ನಡಿಗರು ಇಷ್ಟು ಮರುಳಾದುದಕ್ಕೆ ಕಾರಣವಿಲ್ಲದಿರಬಹುದೇ? ಅನುಭವಕ್ಕೆ ಕಂಡು ಬರುವುದೇನು?

(೧) ಪ್ರಾಸಕ್ಕಿಂತಲೂ ಅಕ್ಷರಗಣಾನುಸರಣವೇ ಕಠಿಣ. ಒಂದು ಷಟ್ಪದಿಯಲ್ಲಿ ಆರು ಸ್ಥಳಗಳ ಒಂದಕ್ಷರವನ್ನು ಇಟ್ಟರೆ ಸಾಕು. ಒಂದು ಅಕ್ಷರಗಣಗಳ ವೃತ್ತದಲ್ಲಿ ಗುರುಲಘುಗಳನ್ನು ಎಷ್ಟು ನಿರ್ದಿಷ್ಟ ಸ್ಥಾನದಲ್ಲಿಡಬೇಕು? ಇಷ್ಟು ಪ್ರಯಾಸಪಟ್ಟರೂ ಕನ್ನಡದ ತಾಳಗಳಿಗೆ ಸರಿಯಾಗಿ ಎಷ್ಟು ವೃತ್ತಗಳನ್ನು ಹಾಡಬಹುದು?

(೨) ಲೋಕಪ್ರಿಯವಾದ ಕವಿತೆಗಳನ್ನು ತಾಳಹಾಕಿ ಹಾಡಲಾಗುವಂತೆ ರಚಿಸುವುದು ಉಚಿತವಾದುದರಿಂದ ಅವುಗಳಲ್ಲಿ ವಾದಿಸ್ವರದಂತೆ ಕೇಳಿಸುವ ಪ್ರಾಸವನ್ನು ಕಾಪಾಡುವುದು ಉಪಯುಕ್ತ ಪದ್ಧತಿ.

(೩) ಅರ್ಥಕ್ಕೆ ತೇಜವಿಲ್ಲದೆಡೆಗಳಲ್ಲಿ ಆ ಕುಂದುಕವನ್ನು ಪ್ರಾಸದಿಂದ ಅಡಗಿಸಿದಷ್ಟು ಸುಲಭವಾಗಿ ಬೇರೆ ಶಬ್ದಾಲಂಕಾರಗಳಿಂದಾಗದು.

ಪ್ರಾಸ ನಿರಾಕರಣೆಯ ಬಗ್ಗೆ ಇರುವ ಗೊಂದಲಗಳ ಕುರಿತು ಪೂರ್ವಿಕರು ಪ್ರಾಸ ಬಿಟ್ಟು ಬರೆದಿರುವ ಉದಾಹರಣೆಯನ್ನು ಇಲ್ಲಿ ನೀಡಿದ್ದಾರೆ.

ಇದು ಯಾವ ಪ್ರಾಸ? ಪಂಪನು ಭಾರತದಲ್ಲಿ
ಆವಗಮೆತನಗದೊಂದು
ನಾಮದೊಳಂ ವೆಂಗಿಪಮಿಕರಂ ಸೊಗಯಿಸುಗುಂ॥ (೧೪ ; ೪೦)

ಎಂದು ಬರೆದಿರುವನು. ಇದು ಯಾವ ಪ್ರಾಸ? ವಕಾರವು ವರ್ಗಾಕ್ಷರವಲ್ಲ. ಸಮೀಪ ಪ್ರಾಸಕ್ಕೆ ಶ,ಷ,ಸ ವರ್ಣತ್ರಯಮಂ ವಿದಿತ ಪ್ರಾಸ ವಿವಿಕ್ತಾಸ್ಪದದೊಳ್ಖಿರೆ -- ಎಂದು ಲಕ್ಷಣವನ್ನು ನೃಪತುಂಗನು ವಿವರಿಸಿರುವನು. ಅದೊಂದು ಉದಾಹರಣೆ ಮಾತ್ರವೊ? ಭಾರತದಲ್ಲಿ ಮುದ್ರಿತ ಪಾಠವು ತಪ್ಪೊ? ಹೀಗೆ ಈ ಪ್ರಾಸವನ್ನು ಅನುಸರಿಸಿರದ ಕವಿ ಪಂಪನೊಬ್ಬನೇ ಅಲ್ಲ. ಮೈಸೂರಿನ ತಿರುಮಕೂಡ್ಲು ನರಸೀಪುರ ೬೯ – ಈ ಶಾಸನದಲ್ಲಿ ಒಂದು ಪದ್ಯ ಹೀಗಿದೆ:

ಭೀಮಾರ್ಹುನರಳವಂ ಮೋ
ಲ್ವಾಮೇದಿನಿ ನೆಗಟ್ದ ತಮ್ಮ ತೀರ್ವರ್ಗೆ ಮಹಾ
ದೇವನೊಟಂಬ ಕುಲಾಂತಕ
ದೇವ ಪದಾಬ್ಜಂಗಳವರ್ಗೆಮಾರಯೀಸ್ವರರ

(ಕನ್ನಡದಲ್ಲಿ ವ, ಮ ಅದಲು ಬದಲಾಗುವುದು ಅಸಹಜವೇನಲ್ಲ. ಉದಾ.ಗೆ ತಾಮರೆ–ತಾವರೆ; ತಿಮಿರ್–ತಿವಿರ್; ಎಮಗೆ–ಎವಗೆ) ಈ ಸಂದರ್ಭದಲ್ಲಿ ಕೇಶಿರಾಜ ಹೇಳಿದ 'ವಮಹಪಭೇದದಿಂ' ಎಂಬ ರೂಢಿ ವಿರೋಧೀ ನಿಯಮವನ್ನೂ ಗಮನಿಸಬಹುದು.

ಪ್ರಾಸನಿಮಯವನ್ನು ಕಟ್ಟುನಿಟ್ಟಾಗಿ ಪಾಲಿಸದಿದ್ದುದಕ್ಕೆ ಪಂಪನಲ್ಲಿ ಇನ್ನೂ ಹಲವಾರು ಉದಾಹರಣೆಗಳು ಸಿಕ್ಕಿವೆ. ಇದೊಂದು ಮಾದರಿ :

ಮುಳಿದು ಶಿಶುಪಾಲನಾ ಸಭೆ
ಯೊಳಗೆ ಮಹಾಪ್ರಳಯ ಜಳಧಿನಾದದಿನಿರದು
ಚ್ಚಳಿಸಿ ನುಡಿದಂತೆ ಕಳೆ ಕಳೆ
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ॥ (೬.೪)

'ಇಂಗ್ಲೀಷ್ ಗೀತೆಗಳು' ಕವನ ಸಂಕಲನ ಬರುವ ಮೊದಲೇ ೧೯೧೯ರಲ್ಲಿ ಅವರ 'ಆಂಗ್ಲ ಕವಿತಾವಳಿ' ಕವನ ಸಂಕಲನ ಪ್ರಕಟವಾಗಿತ್ತು. ಇದರಲ್ಲಿ ತಾವು ಮಾಡಿಕೊಂಡಿರುವ ಬದಲಾವಣೆ ಕುರಿತಂತೆ "ನಾನು 'ಆಂಗ್ಲ ಕವಿತಾವಳಿ'ಯಲ್ಲಿ ಕನ್ನಡದ ಛಂದಸ್ಸುಗಳನ್ನು ಬದಲಿಸುವಾಗ ಇತರ ಭಾಷೆಗಳ ನಿದರ್ಶನವನ್ನು ನೋಡಿ ಬದಲಿಸಿದ್ದೇನೆ. ಕಂದದಲ್ಲಿ ಗಣನಿಯಮಗಳನ್ನು ಬಿಟ್ಟರೆ ಸಂಸ್ಕೃತದ ಆರ್ಯಗೀತಿಯಾಗಬಹುದು.

ಸವಧೂಕಾಃ ಸುಖಿನೋಸ್ಮಿ --
ನ್ನವರತಮ ಮಂದಾರಾಗ ತಾಮರ ಸದೃಶಃ

ಈ ಆರ್ಯಗೀತಿಯಲ್ಲಿ ಐದನೆಯ ಗಣಸ್ಥಾನದಲ್ಲಿ ಜಗಣ ಬಂದಿದೆ. ಆರನೆಯ ಸ್ಥಾನದಲ್ಲಿಲ್ಲ. ಅಕ್ಕರಿಕೆಯಲ್ಲಿ 'ಮುರರಿಪು ಬೊಮ್ಮಂ' ಎಂಬ ನಿಯಮವನ್ನು ಬಿಟ್ಟರೆ ಮರಾಠಿಯ ಅಂಜನೀಯಗೀತವಾಗುತ್ತದೆ. ಉತ್ಸಾಹ ರಗಳೆಯಲ್ಲಿ ೨೨ ಮಾತ್ರೆಗಳ ಚರಣಗಳನ್ನು ಬರೆದರೆ ಗುಜರಾತಿಯವರ ಮಹೀದಿಪವಾಗುತ್ತದೆ. ಇಂತಹ ದೃಷ್ಟಾಂತಗಳನ್ನು ನಾನು ಲಕ್ಷಿಸಿದರೂ ಹೊಸ ಹೆಸರುಗಳು ಅನವಶ್ಯಕವೆಂದು "ಬೇಕಾದರೆ ಶಿಥಿಲ ಕಂದ, ಶಿಥಿಲ ರಗಳೆ" ಎಂಬಂತೆ ನಾಮಗಳನ್ನು ನಿರ್ಮಿಸಿಕೊಳ್ಳಬಹುದೆಂದು ಸೂಚಿಸಿದ್ದೇನೆ."(ಸಮಾಲೋಕನ ೧೨-೧೩). ಎಂದು ಹೇಳಿದ್ದಾರೆ.

"ಛಂದಸ್ಸಿನ ನಿಮಿತ್ತವೂ ಗೀತದ ಉದ್ದೇಶವೂ ಒಂದೇ. ತಾಳದಲ್ಲಿ ಲಕ್ಷ್ಯವಿಟ್ಟು ಛಂದಸ್ಸುಗಳಲ್ಲಿ ಉಪಯುಕ್ತವಾದ ಕೆಲವು ಜಾತಿಗಳನ್ನು ರಕ್ಷಿಸಿ ಕೆಲಸಕ್ಕೆ ಬಾರದ ನಿಯಮಗಳನ್ನು ಕಿತ್ತು ಹಾಕಿದರೆ ಬರೆಯುವವರಿಗೂ ಓದುವವರಿಗೂ ಸೌಖ್ಯವೇ ಅಲ್ಲದೆ ಸಂಕಷ್ಟವಾಗಲಾರದು. ಕೃಪಣರಿಂದ ಯಾವ ಕಾರ್ಯವೂ ಸಾಗದು. ಅವಿವೇಕಿಗಳು ಯಾವ ಕಾರ್ಯವನ್ನೂ ಕೆಡಿಸಬಹುದು. ಇವರು ತಮ್ಮ 'ಕವಿತಾವರ್ಧನ'ದಲ್ಲಿ ಇದುವರೆಗೆ ಪ್ರಾಸ ಮುಂಡನಕ್ಕೆ ನನ್ನ ಕಿವಿ ಒಗ್ಗಲಿಲ್ಲ" ಎಂದು ಹೇಳಿದ್ದಾರೆ.(ಸಮಾಲೋಕನ-ಪು. ೧೨,೧೩). ಹೀಗೆ ಹಿಂದಿನ ಕಾವ್ಯ ಸ್ವರೂಪದಿಂದ ಹೊರಬರಲಾಗದೆ ಇದ್ದಂತಹ ಕವಿಗಳನ್ನು ಕಾಣಬಹುದು. ಪಂಜೆಮಂಗೇಶರಾಯರೂ ಇದೇ ಕಾಲಘಟ್ಟದಲ್ಲಿ ಕವಿತೆಗಳನ್ನು ರಚಿಸಿದವರು. ಇವರ ಕವಿತೆಗಳಲ್ಲಿ ಹೆಚ್ಚಿನವು ಶಾಲಾ ಮಕ್ಕಳಿಗಾಗಿ ರಚನೆಯಾದವು. ಇವರ ಅನುವಾದಿತ ಹಾಗು ಸ್ವತಂತ್ರ ಕವಿತೆಗಳಲ್ಲೂ ವಸ್ತುವಿನ ದೃಷ್ಟಿಯಿಂದ ಹೊಸತನವಿದ್ದರೂ ಅದರ ರಚನಾ ಕ್ರಮ ಛಂದೋ ನಿಷ್ಠವಾಗಿವೆ. ಈ ಕೆಳಗಿನ ಕವಿತೆಯನ್ನು ಗಮನಿಸಿ.

"ತೂಗುವೆ ತೊಟ್ಟಿಲ ಜೋಗುಳ ಹಾಡಿ,
ಕೂಗದೆ ಮಲಗೆನ್ನ ಮುದ್ದಿನ ಮೋಡಿ. ಜೋ, ಜೋ!–ಪಲ್ಲವಿ
ತುಂಬಿ ಪವಡಿಸಿತು ಎಸಳ ಹೂಗಳಲಿ;
ಗೊಂಬೆ ನಿನ್ನಯ ಕಣ್ಣಿನೆವೆ ಸೆರೆಗೊಳಲಿ.
ರಂಬೆ ಚಿಗುರೊಳಡಗಿತು ಪಿಕದುಲಿಯು;
ಸೊಂಬನಾಗಲಿ ನಿನ್ನ ತುಟಿ ಚಿಲಿಪಿಲಿಯು;
ಜಲದ ಮೇಲ್ ಮಲಗುವ ಮರಿ ಹಂಸದಂತೆ,
ಎಲೆಯೊಳಗಿನ ಮಲ್ಲಿಗೆಯ ಮೊಗ್ಗಿನಂತೆ.

ಇವರ "Twinkle, twinkle, little star" ಕನ್ನಡಾನುವಾದವು ಬಹಳ ಪ್ರಸಿದ್ಧವಾಗಿದೆ. ಅದರ ಸರಳತೆಯನ್ನು ಗಮನಿಸಿ,

"ಮಿನುಗೆಲೆ ಮಿನುಗೆಲೆ ನಕ್ಷತ್ರ!
ನನಗಿದು ಚೋದ್ಯವು ಬಹುಚಿತ್ರ
ಘನಗಗನದಿ ಬಲು ದೂರದಲಿ
ಮಿನುಗುವೆ ವಜ್ರಾಕಾರದಲಿ"

ಅನುವಾದಿತ ಹಾಗೂ ಸ್ವತಂತ್ರ ಕವಿತೆಗಳ ಒಳಗೆ ವೈಶಿಷ್ಟ್ಯವನ್ನು ಕಾಣಬಹುದಾದರೂ ಪೂರ್ವದ ನಿಯಮವನ್ನು ಮೀರಲು ಸಾಧ್ಯವಾಗಿಲ್ಲ. ಗೋವಿಂದ ಪೈರವರು ೧೯೧೧ರಲ್ಲಿ ಪ್ರಾಸತ್ಯಾಗ ಮಾಡುವ ಘಟ್ಟದವರೆಗೂ ಸ್ವಲ್ಪ ಸ್ವಲ್ಪವಾಗಿ ಕವಿತೆಯ ಸ್ವರೂಪ ಬದಲಾಗುತ್ತಾ ಬಂದಿತು. ಬಿಂಎಂಶ್ರೀಯವರ 'ಇಂಗ್ಲಿಷ್ ಗೀತೆಗಳು' ಕವನ ಸಂಕಲನದ ನಂತರದಲ್ಲಿ ಸ್ಪಷ್ಟವಾದ ಹೊಸ ಮಾದರಿಯ ಕವಿತೆಗಳು ರಚನೆಯಾದವು.

### ೨. ಗೋವಿನ ಮಟ್ಟು

ಕನ್ನಡ ಜನಪದ ಸಾಹಿತ್ಯದಲ್ಲಿ ಗೋವಿನ ಹಾಡು ಬಹಳ ಪ್ರಸಿದ್ಧವಾದದ್ದು. ಹೊಸ ಮಾದರಿಯ ಹಾಡುಗಳು ರೂಪುಗೊಳ್ಳುವ ಸಂದರ್ಭದಲ್ಲಿ ಹಳೆಯ ಹಾಗೂ ಹೊಸ ಮಾದರಿಯ ಸ್ವೀಕಾರ ನಿರಾಕಾರಗಳ ಗೊಂದಲದಲ್ಲಿ ಸ್ಥಳೀಯವಾಗಿ ಇದ್ದಂತಹ ಗೋವಿನ ಹಾಡಿನ ಮಟ್ಟಿನಲ್ಲಿ ಅನೇಕರು ಕವಿತೆಗಳನ್ನು ರಚಿಸತೊಡಗಿದರು. ಮಾದರಿಯನ್ನು ಗಮನಿಸಿ.

ಗಾಂಧೀತತ್ವ

(ಗೋವಿನ ಮಟ್ಟು)

ನಮ್ಮ ಜನನಿಯ ಬಡಿಸಿದನ್ನವೆ। ನಮಗೆ ಹಿತಕರವಲ್ಲವೆ?
ನಮ್ಮ ಕೊರಗಿಸುವಾಪರಾನ್ನವು। ಪ್ರಾಣ ಸಂಕನವಲ್ಲವೆ? ॥೧॥
ಕರೆದು ನಮ್ಮಯ ತಾಯ್ಬಿರಿಕ್ಕಿದ। ಕರದ ತೌಡೇ ಪಥ್ಯವು।
ಪರರು ನೀಡಿದ್ದ ಮೃತ ವಿಸವೆಂದಿರುವ ತತ್ವವು ಸತ್ಯವು ॥೨॥
ಮೂಡುವನ ರವಿ ಮೂಡವನು ಕತ್ತಲೊಡನೆ ಜಗಳಾಡುವನು।
ಮೂಡಣ ರಂಗಸಳದಲಿ ನೆತ್ತರು ಮಾಡುವನು ಕುಣಿದಾಡುವನು॥

(ಉದಯರಾಗ–ಕವಿಶಿಷ್ಯ)

ಇದಲ್ಲದೆ ಪಂಜೆ ಮಂಗೇಶರಾಯರ 'ನಾಗಣ್ಣನ ಕನ್ನಡಕ'ವು ಸ್ವಲ್ಪ ಇದೇ ಮಾದರಿಯಲ್ಲಿದೆ.

"ಓಡಿ ಬನ್ನಿರಿ ! ಕೂಡಿ ಬನ್ನಿರಿ !ನೋಡಿ ಬನ್ನಿರಿ ! ಗೆಳೆಯರೇ !
ನೋಡಿ ನಮ್ಮಯ ಕನ್ನಡಕವನು ! ಹಾಡಿಹೊಗಳಿರಿ, ಗೆಳೆಯರೇ !
ಊರಗನ್ನಡಿ , ಉರುಟುಗನ್ನಡಿ, ದೂರ ನೋಟದ ಕನ್ನಡಿ,
ಓರು ಕಣ್ಣಿನ ನೇರು ಕನ್ನಡಿ ಮೂರು ಚವಲಕೆ ಕೊಡುವೆ"

ಪಂಜೆಯವರು ಅಲ್ಲಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಆದರೆ ಮುಂದೆ ಈ ಪ್ರಕಾರವೇ ಕಥನಕಾವ್ಯದ ರಚನೆಗೆ ಪ್ರೇರಣೆಯಾಯಿತು. ಅಂದಿನ ಪತ್ರಿಕೆಗಳಲ್ಲಿ ಈ ಮಾದರಿಯ ಅನೇಕ ಸ್ವತಂತ್ರ ಹಾಗೂ ಅನುವಾದಿತ ಕವಿತೆಗಳು ಪ್ರಕಟವಾಗಿವೆ.

### ೩. ಲಾವಣಿ ಮತ್ತು ಜನಪದ ಗೀತೆ

ಕನ್ನಡ ಸಾಹಿತ್ಯದ ದೇಸೀ ಪ್ರಕಾರಗಳಲ್ಲಿ ಲಾವಣಿ ಹಾಗೂ ಜನಪದ ಗೀತೆಗಳು ವಿಶಿಷ್ಟವಾದವು. ಕನ್ನಡ ಜನಪದ ಸಾಹಿತ್ಯಕ್ಕೆ ತನ್ನದೆ ಆದ ಪರಂಪರೆಯಿದೆ. ಇದರಲ್ಲಿ ಮಹಾಕಾವ್ಯದಿಂದಾದಿಯಾಗಿ ವಿಸ್ತಾರವಾದ ವೈಶಿಷ್ಟ್ಯಪೂರ್ಣವಾದ ಸಾಹಿತ್ಯ ಸೃಷ್ಟಿಯಿದೆ. ಜನಪದದ ಜೊತೆಗೆ ಲಾವಣಿಗೆ ಇದರಷ್ಟೇ ಮಹತ್ವವಿದೆ. ೧೯ನೇ ಶತಮಾನದಲ್ಲಿ ಈ ಎರಡೂ ಪ್ರಕಾರಗಳು ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಯಿತು. ಅಂದರೆ ಹೊಸ ಮಾದರಿಯ ಸ್ವೀಕರಣೆಯ ಸಂದರ್ಭದಲ್ಲಿ ಇದ್ದಂತಹ ಗೊಂದಲಗಳ ಸಂದರ್ಭದಲ್ಲಿ ಕವಿಗಳು ತಮಗೆ ತಿಳಿದಿದ್ದ ಈ ಮಾದರಿಗಳಲ್ಲಿ ಹೊಸ ವಿಚಾರಗಳನ್ನು ಕೆಲ ಬದಲಾವಣೆಗಳೊಂದಿಗೆ ಕವಿತೆಗಳನ್ನು ರಚಿಸಿದರು. ಉದಾಹರಣೆಗೆ ಶಿಶುನಾಳ ಷರೀಫರ ಈ ಗೀತೆಯನ್ನು ಗಮನಿಸಿ.

ಗಿರಣಿ ವಿಸ್ತಾರವ ನೋಡಯ್ಯ
ಇದಕೆ ಶರಣು ಮಾಡಯ್ಯ
.....................
ಜಲವು, ಅಗ್ನಿಯು, ವಾಯುವು ಒಂದಾಗಿ
ಕಲೆತು ಒಳ್ಳೆ ಚೆಂದದಿ ನೆಲ
ದಿಂದ ಗಗನಕೆ ಮುಟ್ಟಿ ಕಾಂಬುವ
ನಿಲ್ಲಿಸಿದಾ ನಡು ಕಂಭವೊ ಹೊಗೆ ಬಿಂಬವೊ ೨
ಒಳಗೊಂದು ಬೇರೆ ಆಕಾರಾ
ತಿಳಿದುಕೊ ನೀ ಚಮತ್ಕಾರಾ
ದಳಗೊಳೊಂಬತ್ತರ ಸುಚಕ್ರದಿ
ಸುಳಿವ ಸೂತ್ರದ ದಾರಿಯಲ್ಲಿ
ಒಳಗೆ ಹೊರಗಿನ ಕೊಳವೆಯೊ ಇದರಳವಿಯೊ

(ಹೊಸಗನ್ನಡದ ಅರುಣೋದಯ–ಪು. ೩೮೨)

ಈ ಗೀತೆಯು ಕೈಗಾರಿಕೆಯ ಬಗೆಗೆ ಜನರಿಗೆ ತಿಳಿಸುವುದಷ್ಟೇ ಆಗಿರದೆ ಇಡೀ ಜಗತ್ತಿನ ಸೃಷ್ಟಿಯನ್ನು ಕುರಿತಂತೆ ಹೇಳುವ ಕವಿತೆಯಾಗಿದೆ. ಇದು ಜನಪದ ಶೈಲಿಯಲ್ಲಿದೆ.

೧೯ನೇ ಶತಮಾದಲ್ಲಿ ಲಾವಣಿಗಳ ರಚನೆಯು ಯಥೇಚ್ಛವಾಗಿಯೆ ಇದೆ. ಫ್ಲೀಟ್ ಸಂಗ್ರಹಿಸಿದ ಲಾವಣಿಗಳಲ್ಲಿ ಆ ಶತಮಾನದ ಸಮಸ್ಯೆಗಳನ್ನು ಕುರಿತು ರಚಿಸಿರುವ ಲಾವಣಿಗಳು ಹೆಚ್ಚಾಗಿ ದೊರೆತಿವೆ. ಬ್ರಿಟಿಷರು ಜನರ ಮೇಲೆ ಏರಿದ್ದ ತೆರಿಗೆಯ ಭಾರವನ್ನು ಕುರಿತು ರಚನೆಯಾದ ಲಾವಣಿ ಇಂತಿದೆ.

**ಹುಟ್ಟುವಳಿ ತೆರಿಗೆ**

ಏನು ಹೇಳಲಿ ಜನ್ಮದ ಗೋಳಾ
ಇಂಗರಜಿ ಉಪದರ ಆದೀತು ಬಹಳಾ
ಬಡವರು ಅಳತಾರೋ ಗಳಾಗಳಾ
ಮಾಡತಾರೋ ಚಿಂತಿ
..............

ಕಠಿಣ ಬಡವರದ ತುಂಬೋದು ಹೊಟ್ಟಿ
ಮಾರಿ ಕೊಟ್ಟಾರೊ ನೂಲುವ ರಾಟಿ
ದುಡ್ಡಿನ ಆಶೆ ಹತ್ತಿತ ಸರಕಾರಕ

ಮುಸಲ್ಮಾನರು ಕನ್ನಡದಲ್ಲಿ ಬರೆದ ಲಾವಣಿ ಇಂತಿದೆ

ಬಂಗಲೇಕ ಬಂದ ಎಲ್ಲಾರು ಕೂಡ್ಯಾರು
ಕೇಳರಿ ಆಗ
'ತುಮ ಬಾವಂದ ಅರಜಿ ಇಸುನ್ನಾ'
ಹಮಾರೆ ಪಟ್ಟಿ ಮಾಫ್ ತುಮ್ ಕರನಾ
ನಿಂತುಕೊಂಡೆ ನೋಡಿದಾನ ಬಡವರನಾ
ಕರುಣ ಹೊಟ್ಟ್ಯಾಗ.
ಸಾಹೇಬ ನೋಡಿದಾನ ಸೋಸಿ
ಲಗು ಮಾಡಿ ಅರಜಿ ಕುಡರಿಂತಾನ ನರಶಿ
ಅವನ ಹೊಟ್ಟ್ಯಾಗ ಆತ ಕಸಿವಿಸಿ
ಬೆಂಕಿ ಬಿದ್ದಾಂಗ ......

(ಹೊಸಗನ್ನಡದ ಅರುಣೋದಯ–ಪು. ೩೭೯, ೩೮೦)

ಈ ಲಾವಣಿಗಳಲ್ಲಿ ಪದಗಳ ಬಳಕೆ, ಅದರ ವಸ್ತು, ಶೈಲಿ ಎಲ್ಲವೂ ಹೊಸತನದಿಂದ ಕೂಡಿದೆ. ವಾಸ್ತವ ಸಮಸ್ಯೆ ಹಾಗೂ ಅಭಿಪ್ರಾಯಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. ಬ್ರಿಟಿಷರು ಭಾರತದಲ್ಲಿ ಅಧಿಕಾರಕ್ಕೆ ಬಂದ ಮೇಲೆ ಜನರ ಮೇಲೆ ಹೊರಿಸಿದ ತೆರಿಗೆಯ ಕುರಿತ ವಿರೋಧವನ್ನು, ಅಧಿಕಾರಿಯೊಬ್ಬನ ವರ್ತನೆಯನ್ನು ಈ ಲಾವಣಿಗಳು ತಿಳಿಸುತ್ತವೆ. ಹೀಗೆ ಹಂತ ಹಂತವಾಗಿ ದೇಶಿ ಸಾಹಿತ್ಯದಲ್ಲಿ ಬದಲಾವಣೆಗಳು ಕಂಡುಬಂದವು.

### ೪. ಭಾವಗೀತೆ

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಪ್ರಮುಖವಾದದ್ದು ಭಾವಗೀತೆ, ಕಾವ್ಯ, ಕವಿತೆ, ಗೀತೆ ಮುಂತಾದ ಹೆಸರಿನಿಂದ ಇವನ್ನು ಕರೆಯಲಾಗುತ್ತದೆ. ಕನ್ನಡದಲ್ಲಿದ್ದ ಕಾವ್ಯದ ಪರಂಪರೆಗೆ ಹೊಸರೂಪವನ್ನು ನೀಡಿದ್ದೆ ಈ ಭಾವಗೀತೆ. ಒಟ್ಟಾರೆ ತನ್ನ ಸ್ವರೂಪದಲ್ಲೇ ಹಿಂದಿನ ಕಾವ್ಯ ಪರಂಪರೆಗೆ ಭಿನ್ನವಾದದ್ದು. ಇದರ ವಸ್ತು, ಛಂದಸ್ಸು, ಉದ್ದೇಶ, ಭಾಷೆ ಎಲ್ಲವೂ ವಿಭಿನ್ನವಾದದ್ದು. ಇದರ ದೇಹ ಹೊರಗಿನದ್ದಾದರೂ ಆತ್ಮ ಇಲ್ಲಿಯದ್ದೇ.

ಕನ್ನಡದಲ್ಲಿದ್ದ ಕಾವ್ಯವು ಅದರ ಗೇಯತೆ, ವಸ್ತು, ಶೈಲಿ. ಕಾವ್ಯ ರಚನೆಗೆ ಇದ್ದ ಅನೇಕ ನಿಯಮಗಳು ಸಾಮಾನ್ಯರಿಗೆ ಅದರ ರಚನೆ ಕ್ಲಿಷ್ಟವೆನಿಸಿತು. ದೀರ್ಘವಾದ, ಛಂದೋಬದ್ಧವಾದ ಕಾವ್ಯಕ್ಕಿಂತ ಭಿನ್ನವಾದ ಸಾಹಿತ್ಯದ ಅಗತ್ಯತೆ ಇತ್ತು. ಇದರಿಂದ ಒಂದು ಬದಲಾವಣೆಯ ತುಡಿತ ೧೯ನೇ ಶತಮಾನದಲ್ಲಿ ಸಾಮಾನ್ಯರಲ್ಲಿ ಕಾಣುತ್ತಿತ್ತು. ಇಂತಹ ವ್ಯವಸ್ಥೆಗೆ ಪೂರಕವೆಂಬಂತೆ ಆ ಪರಿಸರವನ್ನು ಪ್ರವೇಶಿಸಿದ ಅನುವಾದ ಪ್ರಕ್ರಿಯೆಯು ಜನರ ಆಲೋಚನೆಗಳನ್ನು ಬದಲಾಯಿಸಿ ಕವಿತೆಯನ್ನು ರಚಿಸುವ ಆಸಕ್ತಿಯನ್ನು ಕೆರಳಿಸಿತು. ಭಾವಗೀತೆಗಳ ಲಕ್ಷಣವೆಂದರೆ ಒಂದು ಸಾಮಾನ್ಯ ಅಂಶವನ್ನು ತಾನು ಕಂಡಂತೆ ತನಗೆ ಅನಿಸಿದಂತೆ ಹೇಳುವ ಸಾಧನ. ಇದು ಕನ್ನಡ ಸಾಹಿತ್ಯದಲ್ಲಿ ಹೊಸತೇನಲ್ಲ. ವಚನ ಹಾಗೂ ದಾಸರ ಹಾಡುಗಳು ಮುಖ್ಯವಾದದ್ದು. ಆದರೆ ಭಾವಗೀತೆ ಮತ್ತು ಇವುಗಳಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ವಚನ ಹಾಗೂ ದಾಸರ ಕೀರ್ತನೆಗಳು ಮತಧರ್ಮ ಭಗವದ್ಭಕ್ತಿಯ ಹಿನ್ನಲೆ ಭಕ್ತಿಭಾವದ ಅನುಭವದ ವಾಣಿಯಂತಿದ್ದವು. ಭಾವಗೀತೆಗಳು ಇವೆಲ್ಲವನ್ನು ಮೀರಿ ರಚನೆಯಾಂದತವು. (ಹೊಸಗನ್ನಡದ ಅರುಣೋದಯ-ಪು. ೩೭೪)

ಹೊಸಗನ್ನಡ ಸಾಹಿತ್ಯದ ಸಂಧಿಕಾಲದಲ್ಲಿ ಹಳೆಯ ಹಾಗೂ ಹೊಸ ಮಾದರಿಯ ಕಾವ್ಯಗಳು ಒಂದಕ್ಕೊಂದು ಜೊತೆಯಾಗಿ ಸ್ವೀಕಾರ, ನಿರಾಕಾರಗಳ ಗೊಂದಲದಲ್ಲಿ ಹೆಣೆದುಕೊಂಡು ಬಂದಿದೆ. ದಾಸ ಸಾಹಿತ್ಯದ ಲಯವು ಹೊಸಗನ್ನಡದ ಕವಿಗಳ ಕಾವ್ಯದಲ್ಲಿ ಕಾಣಿಸಿದೆ. ವಸ್ತು ಬೇರೆಯಾದರೂ ಕಾವ್ಯದ ಲಯ ಒಂದೇ ಆಗಿರುವುದು ಗಮನಾರ್ಹ.

೧. ಎಂದು ಕಾಂಬೆನೊ ಎನ್ನ ಸಲಹುವ/ತಂದೆ ಉಡುಪಿಯ ಜಾಣನಾ (ಪುರಂದರದಾಸ)

೨. ಪಾಲಯಾಚ್ಯುತ ಪಾಲಯಾಚಿತ/ಪಾಲಯಾ ಕಮಲಾಲಯಾ (ವಾದಿರಾಜ)

೩. ಮಗನೆ ನೀನಂತಳಿಯೆ ಸ್ಯೆರಿಪೆ/ನೆಂದು ಪೇಳ್ಯೆಶಂಕರಾ (ಷಡಕ್ಷರಿ)

೪. ತಂಪುಗಾಳಿಯು ಬೀಸು ತರುಲತೆ/ತಾಳದಲೆ ತಳಮಳಿಸುತಿರುವಳು (ಚುರಮುರಿ ಶೇಷಗಿರಿರಾಯ)

೫. ಗಿರಿಜೆ ವರನನು ಬಯಸಿ ಬಂದಳು/ಹರನು ಶಶಿಧರನನು (ಎಸ್.ಜಿ. ನರಸಿಂಹಚಾರ್)

೬. ಎಲ್ಲಿಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೊ (ಪಂಜೆ ಮಂಗೇಶರಾಯ) (ಹೊಸಗನ್ನಡದ ಅರುಣೋದಯ-ಪು. ೩೭೫)

ಅಂದಿನ ಕವಿಗಳ ಮನಸ್ಥಿತಿ ಹೇಗಿತ್ತೆಂದರೆ "ಹೊಸದನ್ನು ಒಪ್ಪಿ ಹಳೆಯದ್ದನ್ನು ತ್ಯಜಿಸುವ ವಿಚಾರದಲ್ಲಿ ತೊಯ್ದಾಟಗಳು ನಡೆಯುತ್ತಿದ್ದವು." ಮುಳಿಯ ತಿಮ್ಮಪ್ಪಯ್ಯನವರು ಇವರ 'ಶಂಬರಾಸುರ ವಧೆ'ಯಲ್ಲಿ ಭಾಷೆ ಕುರಿತಂತೆ ಅಚ್ಚಗನ್ನಡದ ಕಾವ್ಯ ಮಾರ್ಗವು ಹೆದ್ದಾರಿಯಂತಲ್ಲವಾದರೂ ಒಳದಾರಿಯಂತೆ ನೆಲೆಗೊಂಡಿತ್ತು. ಈಗಿನವರೂ ಕೂಡ ನಡೆಯಲಾಗುವಷ್ಟು ಅಡ್ಡವಾಗಿ ಆ ದಾರಿಯುಂಟೆಂಬುದನ್ನು ಕಾಣಿಸಲಿಕ್ಕಾಗಿ ಸೊಬಗಿನ ಬಳ್ಳಿ ಎಂಬ ಈ ಕಿರುಗಬ್ಬವನ್ನು ಬರೆದು ಕೆಲಗಾಲವಾಯಿತು" ಎಂದಿದ್ದಾರೆ.

ಇದರಲ್ಲಿ ಚೌಪದಿ, ಶರ ಹಾಗೂ ಕುಸುಮ ಷಟ್ಪದಿ, ಸಾಂಗತ್ಯ ಲಲಿತರಗಳೆಯ ಛಂದೋರೂಪಗಳನ್ನು ಬಳಸಲಾಗಿದೆ. ಆದರೆ ಅವರ ಈ ಹೇಳಿಕೆಯ ಹಿನ್ನೆಲೆ ಲೇಖಕರನ್ನು ಅಚ್ಚಗನ್ನಡದ ಕಡೆಗೆ ತಿರುಗಿಸುವುದೇ ಆಗಿದೆ. ಸಂಸ್ಕೃತವನ್ನು ಬಿಟ್ಟು ಅಚ್ಚಗನ್ನಡದಲ್ಲಿ ಬರೆಯುವ ಸಾಧ್ಯತೆಗಳನ್ನು ತಿಳಿಸಲು ಈ ಕೃತಿಯನ್ನು ರಚಿಸಿದಂತೆ ಕವಿ ಹೇಳಿದ್ದಾರೆ. ಆದರೆ ಎಲ್ಲೆಲ್ಲಿಯೂ ಸಂಸ್ಕೃತವನ್ನು ತುರುಕಿಸಬೇಕು; ಸಂಸ್ಕೃತವನ್ನುಳಿದರೆ ಕನ್ನಡಕ್ಕೆ ಅಸ್ತಿತ್ವವೆ ಇಲ್ಲವಂತೆ ಎಂದು ಹೇಳುವವರ ಸಂಸ್ಕೃತಾತಿಕ್ರಮವು ಮಾತ್ರ ಯೋಗ್ಯವಲ್ಲವೆಂಬುದನ್ನು ತಿಳಿಸಲಿಕ್ಕಾಗಿ ಈಗಿನ ಕಾಲದಲ್ಲಿಯೂ ಇರುವ ಕನ್ನಡದ ಸ್ವಾತಂತ್ರ್ಯವನ್ನು ತೋರಿಸಲಿಕ್ಕಾಗಿ ಮಾತ್ರವೆ ಇದನ್ನು ಬರೆದಿರುವುದು ಎಂದು ಹೇಳಿಕೊಂಡಿದ್ದಾರೆ.

ಅಂದಿನ ಕಾವ್ಯ ರಚನೆಯ ಗೊಂದಲದ ಸ್ಥಿತಿಯನ್ನು ಕುರಿತು ಸಂಗಪ್ಪ ಸಾಸನೂರರವರು ಆಧುನಿಕ ಕವಿತೆಗಳನ್ನು ಕುರಿತು "ಆಧುನಿಕ ಕನ್ನಡ ಕವಿತೆಗಳಲ್ಲಿ ಹಳೆಯ ಅಥವಾ ಸಾಂಪ್ರದಾಯಕ ಕವಿತೆಯೆಂದೂ, ಹೊಸ ಅಥವಾ ನವಜೀವನದ ಕವಿತೆಗಳೆಂದೂ, ಹೀಗೆ ಎರಡು ವರ್ಗಗಳು ಕಂಡುಬರುವುವು. ಈ ಎರಡು ವರ್ಗಗಳು ಆಧುನಿಕ ಕವಿತಾ ಸಾಮ್ರಾಜ್ಯದಲ್ಲಿ ಜಯಪತಾಕೆಯನ್ನು ನಿಲ್ಲಿಸಲು ಒಂದರ ಸಂಗಡ ಇನ್ನೊಂದು ಹೋರಾಡುವುದು. ಆದರೆ ಸೋಲು-ಗೆಲುವಿನ ನಿಶ್ಚಿತ ಕಾಲವು ಇನ್ನೂ ಒದಗಿಲ್ಲ. ಆದರೂ, ಕನ್ನಡ ವಾಙ್ಮಯದ ಬೆಳವಣಿಗೆಯು 'ಹೊಸ ಅಥವಾ ನವಜೀವನ' ಕವಿತೆಯ ಗುಣಾವಗುಣಗಳನ್ನು ಹೆಚ್ಚಾಗಿ ಅವಲಂಬಿಸಿದೆ."(ಆಧುನಿಕ ಕನ್ನಡ ಕವಿತೆ-ಸಂಗಪ್ಪ ಸಾಸನೂರ-೧೯೩೦-ಪುಣೆ)ಎಂದು ಹೇಳಿದ್ದಾರೆ. ಹೊಸ ಮಾರ್ಗವೊಂದು ಹುಟ್ಟಿಕೊಳ್ಳುವ ಸಂದರ್ಭದಲ್ಲಿ ಇಂತಹ ಚರ್ಚೆಗಳು ಸಹಜವೆ. ಆದರೆ ಅದು ನಿರ್ದಿಷ್ಟ ರೂಪವನ್ನು ಹಂತವಾಗಿಯೇ ಹೊಂದಬೇಕಾಗುತ್ತದೆ. ಇದು ಕನ್ನಡ ಸಾಹಿತ್ಯಕ್ಕೂ ಅನ್ವಯವಾಗಿದೆ.

ನಮ್ಮ ಸಾಹಿತಿಗಳು ಕೇವಲ ಪಾಶ್ಚಿಮಾತ್ಯ ಸಾಹಿತ್ಯದಿಂದ ಪ್ರಭಾವಿತರಾಗದೆ ಭಾರತೀಯ ಭಾಷೆಗಳ ಸಾಹಿತ್ಯದಿಂದಲೂ ಪ್ರಭಾವಿತರಾಗಿ ಕವಿತೆಗಳನ್ನು ಅನುವಾದಿಸಿದರು. ನರಸಿಂಹಾಚಾರ್ಯರ 'ನೀತಿವಾಕ್ಯ ಮಂಜರಿ'ಯನ್ನು ೧೮೮೬-೧೯೧೧ರ ಅವಧಿಯಲ್ಲಿ ಅನುವಾದ ಮಾಡಿದರು. ಅದರ ಉದ್ದೇಶ ಕುರಿತು 'ತಮಿಳಿನಲ್ಲಿ ಇರುವಷ್ಟು ನೀತಿ ಗ್ರಂಥಗಳು ಇನ್ನಾವ ಭಾಷೆಯಲ್ಲಿಯೂ ಇಲ್ಲ. ಇವುಗಳಲ್ಲಿ ಕೆಲವನ್ನು ಭಾಷಾಂತರ ಮಾಡಿದರೆ ಕನ್ನಡಿಗರಿಗೆ ಉಪಯೋಗ ಬೀಳಬಹುದು ಎಂದು ಹೇಳಿದ್ದಾರೆ.

ಇದರಲ್ಲಿನ ಪದ್ಯಗಳನ್ನು ಕಂದರೂಪದಲ್ಲಿ ರಚಿಸಿದ್ದಾರೆ. ಭಾಷೆ ಹಳಗನ್ನಡಕ್ಕೆ ಸಮೀಪವಾಗಿರುವುದರಿಂದ ವಾಚಕರಿಗೆ ಇವು ಸ್ವಲ್ಪ ಕಷ್ಟಕರವೆಂಬುದಾಗಿ ಅವರೆ ಒಪ್ಪಿದ್ದಾರೆ. ಇದರ ಉದ್ದೇಶ ಕುರಿತು "ಗದ್ಯ ಗ್ರಂಥವು ಹೇಗಿದ್ದರೂ ಇರಲಿ ಪದ್ಯಗ್ರಂಥವು ಯಾವಾಗಲೂ ಲಕ್ಷಣ ಬದ್ಧವಾಗಿಯೇ ಇರಬೇಕು" ಎಂಬ ಅಭಿಪ್ರಾಯದಿಂದಲೂ; ಸಾಧ್ಯವಾದ ಮಟ್ಟಿಗೆ ಹಳಗನ್ನಡ ಪದಗಳೂ ಶೈಲಿಯೂ ವ್ಯಾಕರಣ ಮರ್ಯಾದೆಯೂ ವಾಚಕರ ಕಿವಿಗೆ ಬೀಳುತ್ತಿರಬೇಕು ಎಂಬ

ಉದ್ದೇಶದಿಂದಲೂ ಈ ಗ್ರಂಥವನ್ನು ಪೂರ್ವ ಕವಿಗಳ ಮಾರ್ಗವನ್ನನುಸರಿಸಿ ಬರೆದಿದ್ದೇನೆ"(ಹೊಸಗನ್ನಡದ ಅರುಣೋದಯ-ಪು. ೨೩೦) ಎಂಬುದು ಅವರ ವಿವರಣೆ. ಇದರಲ್ಲಿ ಱ ಟಗಳನ್ನು ಪ್ರಯತ್ನ ಪೂರ್ವಕವಾಗಿ ಉಳಿಸಿಕೊಂಡಿದ್ದಾರೆ.

ನವೋದಯ ಸಾಹಿತ್ಯದಲ್ಲಿ ಭಾವಗೀತೆ ಹೆಚ್ಚು ಪ್ರವರ್ಧಮಾನಕ್ಕೆ ಬಂದದ್ದು ಅದರ ಸ್ವರೂಪದಲ್ಲಿದ್ದ ವೈಶಿಷ್ಟ್ಯದಿಂದ. ಜಿ.ಎಸ್.ಎಸ್‌ರವರು ಗುರುತಿಸುವಂತೆ "ಕಾವ್ಯದ ವಸ್ತುವನ್ನು ಐತಿಹಾಸಿಕ, ಪೌರಾಣಿಕ ನೆಲೆಗಳಿಂದ ದೈನಂದಿನ ಸರಳ ಹಾಗೂ ನಿಸರ್ಗ ರಮ್ಯತೆಯ ನೆಲೆಗೆ ಸ್ಥಳಾಂತರಿಸಿದ್ದು, ಅದುವರೆಗಿನ ಪರನಿಷ್ಠ ಧೋರಣೆ ಇಹನಿಷ್ಠ ಧೋರಣೆಗೆ ಪರಿವರ್ತಿತವಾದದ್ದು, ಹಿಂದಿನ ಮತಧರ್ಮದ ಚೌಕಟ್ಟಿಗೆ ಬದ್ಧವಾದ ಧಾರ್ಮಿಕ ದೃಷ್ಟಿ ತನ್ನ ಇಷ್ಟ ದೇವದ ಸಂಪರ್ಕವನ್ನು ಕಳಚಿಕೊಂಡು ಅಮೂರ್ತವೂ, ಸಾರ್ವತ್ರಿಕವು ಆದ ಉದಾರ ಮಾನವತಾ ಧಾರ್ಮಿಕ ನಿಲುವನ್ನು ಪಡೆದುಕೊಂಡಿದ್ದು, ಮನುಷ್ಯ ಮತ್ತು ನಿಸರ್ಗಗಳ ಸಂಬಂಧವನ್ನು ಪ್ರತಿಪಾದಿಸುವ ಮೂಲಕ ಜೀವನ ಪ್ರೀತಿಯನ್ನು ವಿಸ್ತರಣೆಯನ್ನು ಸಾಧಿಸಿದ್ದು; ಸಾಮಾನ್ಯ ಮನುಷ್ಯನೊಳಗಣ ಅಸಾಧಾರಣತೆಗಳನ್ನು ಎತ್ತಿಹಿಡಿದದ್ದು, ಕವಿಯೇ ಕಾವ್ಯದ ಕೇಂದ್ರವಾಗುತ್ತಾ ಅನುಭವಗಳ ಶೋಧನೆಗೆ ತೊಡಗಿದ್ದು, ಹಿಂದಿನ ಕಾವ್ಯಕ್ಕಿಂತ ಮತ್ತಷ್ಟು ದೂರಕ್ಕೆ ಅರಿವಿನ ಪರಿಧಿಯನ್ನು ವಿಸ್ತರಿಸಿದ್ದು". (ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆ -ಪು. ೧೬೧)

ಅದುವರೆಗೂ ಇದ್ದ ಧಾರ್ಮಿಕ, ಪೌರಾಣಿಕ ವಸ್ತುಗಳಿಗಿಂತ ಹೊಸ ಆಲೋಚನೆಗಳೂ ಕೂಡ ಕಾವ್ಯದ ವಸ್ತುವಾಗಬಹುದು ಎಂಬ ಜ್ಞಾನ ದೊರೆತಿದ್ದೆ ಪಾಶ್ಚಾತ್ಯ ಕಾವ್ಯಗಳು ಅನುವಾದಗೊಂಡ ನಂತರವೆ. ಇಂತಹ ಮಾದರಿಗಳು ಸ್ಥಳೀಯ ಮನೋಧರ್ಮವನ್ನು ಬದಲಾಯಿಸಿತು. ನಿಸರ್ಗದ ರಮಣೀಯತೆ, ಲೌಕಿಕ ಜೀವನದ ಚಿತ್ರಣಗಳು ಕಾವ್ಯದಲ್ಲಿ ಅನಾವರಣಗೊಂಡವು. ಕವಿಯ ಅನುಭವಗಳೇ ಕಾವ್ಯದ ಕೇಂದ್ರ ಸಾಮಾನ್ಯ ವ್ಯಕ್ತಿಯೂ ಕೂಡ ಕಾವ್ಯದ ನಾಯಕ. ಅಲೌಕಿಕ ಧರ್ಮಕ್ಕಿಂತ ಮಾನವಧರ್ಮದ ಬಗೆಗೆ ಚಿಂತನೆಗಳು ದೇಶ – ಭಾಷೆಯ ಬಗ್ಗೆ ಕಾಳಜಿ ಮುಂತಾದವು ಕಾವ್ಯಕ್ಕೆ ವಸ್ತುಗಳಾದವು. ಬೇಂದ್ರೆಯವರು ಹೇಳುವಂತೆ

'ನೂರು ಮರ ನೂರು ಸ್ವರ
ಒಂದೊಂದು ಮಧುರ
ಬಂಧದಂತೆ ಬಂಧುರ
ಸ್ವಚ್ಛಂದ ಸುಂದರ.'

ಇಂತಹ ನೂರು ಮರಗಳಿಂದ ಹೊರಟ ನೂರು ಸ್ವರವು ಮುಂದೆ ಸಾವಿರಾರು ಸ್ವರಗಳಿಗೆ ಪ್ರೇರಣೆಯಾದವು. ಇವರು ಕಾವ್ಯದ ವಸ್ತುವಿನ ಜೊತೆಗೆ ಅದರ ಅಭಿವ್ಯಕ್ತಿಯ ಸ್ವರೂಪದ ಕಡೆಗೆ ಹೆಚ್ಚು ಬದಲಾಣೆ ತರಲು ಯತ್ನಿಸಿದರು. ಇದಕ್ಕೂ ಇಂಗ್ಲಿಷ್ ಕಾವ್ಯಗಳೇ ಪ್ರೇರಣೆ. ಹೊಸ ಛಂದಸ್ಸಿನ

ಮಟ್ಟುಗಳು ಕಾಣಿಸಿಕೊಂಡವು. ಆರಂಭದಲ್ಲಿ ಛಂದಸ್ಸನ್ನು ಮಾದರಿಯಾಗಿಟ್ಟುಕೊಂಡೆ ಅವುಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡಿದರು. ನಂತರದಲ್ಲಿ ಛಂದಸ್ಸಿಗೆ ಒಳಗಾಗದೆ ಅದನ್ನು ಪರಿತ್ಯಾಗ ಮಾಡಿ ಬಂಧಮುಕ್ತ ಕವಿತೆಗಳು ರಚನೆಯಾದವು. ಇಂತಹ ಹೊಸ ಮಾರ್ಗಗಳನ್ನು ಆರಂಭ ಮಾಡಿದವರ ಬಗ್ಗೆ ಎಲ್.ಎಸ್. ಶೇಷಗಿರಿರಾವ್‌ರವರು ಹೀಗೆ ಹೇಳಿದ್ದಾರೆ.

"ನವೋದಯ ಯುಗವನ್ನು ರೊಮ್ಯಾಂಟಿಕ್ ಯುಗ ಎಂದು ಕರೆದರು. ಅದರ ಆದ್ಯ ಪ್ರವರ್ತಕರಾದ ಪಂಜೆಯ್ಯವರು, ಗೋವಿಂದ ಪೈ. ಬಿ.ಎಂ.ಶ್ರೀ. ಡಿ.ವಿ.ಜಿ. ಮಾಸ್ತಿ ಇವರೆಲ್ಲರ ಮನೋಧರ್ಮ 'ಕ್ಲಾಸಿಕಲ್' ಸಾಹಿತ್ಯದ ಮನೋಧರ್ಮಕ್ಕೆ ಸಮೀಪವಾದದ್ದು. ಆವೇಶರಹಿತವಾದ, ಜೀವನವನ್ನು ಸ್ವಲ್ಪ ದೂರ ನಿಂತು ಸಮತೂಕದಿಂದ ಕಾಣುವ, ಜೀವನದಲ್ಲಿ ಒಂದು ವಿನ್ಯಾಸವನ್ನು ಒಂದು ಅರ್ಥವನ್ನು ಕಾಣುವ ಮನೋಧರ್ಮ ಇದು."

ನವೋದಯದ ಆದ್ಯ ಪ್ರವರ್ತಕರು ಹುಟ್ಟು ಹಾಕಿದ ಈ ಕ್ಲಾಸಿಕಲ್ ಮಾರ್ಗವನ್ನು ಮುಂದೆ ಬಂದಂತಹ ಅನೇಕರು ಅನುಸರಿಸಿದರು. ಕ್ಲಾಸಿಕಲ್(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು ೧೮) ಮಾದರಿಯು ಸ್ಪಷ್ಟ ನಿಲುವು ಪಡೆದು ಮುಂದಿನ ಸಾಹಿತ್ಯ ರಚನೆಗೆ ಅನುವಾಗಿದ್ದು ೧೯೨೧ರ 'ಇಂಗ್ಲೀಷ್ ಗೀತೆಗಳು' ಕೃತಿ ಪ್ರಕಟನಂತರ. ೨೦ನೇ ಶತಮಾನದ ಆರಂಭದ ೩೦ ವರ್ಷಗಳಲ್ಲಿ ಭಾವಗೀತೆಯು ಒಂದು ಸಿದ್ಧ ಮಾದರಿ ರೂಪುಗೊಳ್ಳಲು ಹಲವಾರು ಪ್ರಯೋಗಗಳು ನಡೆದವು. ಇದಕ್ಕೆ ಮಾದರಿಯಾಗಿ ಈಗಾಗಲೇ ತಿಳಿಸಿದ ಅಂಶಗಳು ಮಾದರಿಯಾದವು. ಪಾಶ್ಚಾತ್ಯರ ಚಿಂತನೆಗಳು ಅವರ ಕಾವ್ಯದ ಮೂಲಕ ಕನ್ನಡ ನಾಡಿನಲ್ಲಿ ಪ್ರವಹಿಸಿತು. ಇದನ್ನು ಕುರಿತಂತೆ ಕವಿಗಳೇ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಡಿವಿಜಿಯವರು ಇವರ ಜೊತೆ ಮಾತನಾಡಿದ ಸಂದರ್ಭವನ್ನು ಹೀಗೆ ಹೇಳಿದ್ದಾರೆ.

"ಎಸ್,ಜಿ, ; 'ಆಧುನಿಕ' ಎಂಬ ಮಾತನ್ನು ಉಪಯೋಗಿಸಿದ್ದೀರಲ್ಲ, ಹಾಗೆಂದರೇನು?

ನಾನು : 'ಈಚೀಚಿನದು' ಎಂದು.

ಎಸ್,ಜಿ, ; ಈಚೀಚಿನ ಎಂದೇ ಏಕೆ ಬರೆಯಬಾರದು? ನನ್ನ ಸ್ನೇಹಿತರು ಮಹಾರಾಷ್ಟ್ರದವರು ಒಬ್ಬರಿದ್ದಾರೆ. ಅವರು ಸಂಸ್ಕೃತ ಬಲ್ಲವರು. ಅವರು ಈ 'ಆಧುನಿಕ' ಎಂಬ ಪದವನ್ನು ಒಂದು ಕಡೆ ನೋಡಿದಾಗ ಅದಕ್ಕೆ ಅರ್ಥವೇನು ಎಂದು ನನ್ನನ್ನು ಕೇಳಿದರು. ನಾನು ಆಶ್ಚರ್ಯಪಟ್ಟೆ, ಸಂಸ್ಕೃತ ಬಲ್ಲವರಿಗೇ ಅದು ಇಷ್ಟು ಕಷ್ಟವಾಗಿರುವಾಗ ಸಂಸ್ಕೃತ ತಿಳಿಯದ ನಮ್ಮ ಸಾಮಾನ್ಯ ಜನಕ್ಕೆ ಈ ಮಾತು ಹೇಗೆ ಅರ್ಥವಾಗಬೇಕು?"

ಇವರು ತಮ್ಮ ಖಂಡಕಾವ್ಯಗಳನ್ನು ರಚಿಸುದುದರ ಹಿನ್ನೆಲೆಯನ್ನು ಕುರಿತು "ಇದರಲ್ಲಿ ಇತರ ಕಾವ್ಯಗಳಲ್ಲಿರುವಂತೆ ಕೇವಲ ಕವಿ ಸಮಯ ಕಲ್ಪಿತವಾದ ವರ್ಣನಾ ವೈಖರಿಗಳೂ ಅನುಭವಕ್ಕೆ ಬಾರದ ಅಲಂಕಾರಾಡಂಬರಗಳೂ ವಿಶೇಷವಾಗಿಲ್ಲದೆ, ಸರ್ವರಿಗೂ ಅನುಭವಗೋಚರವಾಗುವ

ವಿಷಯಗಳೇ ಸ್ವಭಾವೋಚಿತವಾಗಿಯೂ, ಚಮತ್ಕಾರವಾಗಿಯೂ ಹೃದಯಂಗಮವಾಗಿಯೂ ವರ್ಣಿಸಲ್ಪಟ್ಟಿವೆ" ಎಂದಿದ್ದಾರೆ.

"ಹಾಸಿಗೆಯೊಳೆಸೆದಿರ್ದ ।
ಕೂಸಿನೊಡಲಿನ ಬೆಳಗು। ಸೂಸಿ ಸುತ್ತಲುಮಿರ್ದ ದೀವಿಗೆ
ಭಾಸುರತೆಯನು ಮರಸಿ ।
ಮಾಸಿಸಲು ಬಣ್ಣದೊಳು
ಮೂಸಿರ್ದ ಸೊಡರುಗಳ ಪೋಲ್ತಿರ್ದವು"೧೦

ಇಂಗ್ಲಿಷ್‌ನ ಕವಿತೆಗಳನ್ನೂ ಅನುವಾದಿಸಿದ ಎಸ್.ಜಿ.ನರಸಿಂಹಾಚಾರ್ಯರು ಅವುಗಳ ರಚನೆಯ ಹಿನ್ನೆಲೆ ಮಕ್ಕಳಿಗೂ ಅರ್ಥವಾಗುವಂತೆ ಇರಬೇಕು ಎಂಬ ಮನೋಭಾವ ಇದ್ದುದರಿಂದ ಇವುಗಳಲ್ಲಿ ಹೆಚ್ಚು ಪದ್ಯಗಳು ಶಾಲೆಯಲ್ಲೋದುವ ಮಕ್ಕಳಿಗಾಗಿ ಬರೆದುವು. ಸರಳತೆ, ಲಾಲಿತ್ಯ ಇವುಗಳು ತುಂಬಿರುವ ಎಸ್.ಜಿ.ನ ಅವರ ಪದ್ಯಗಳು ಸುಲಭವಾಗಿ ತಿಳಿಯುವಂತಿವೆ.

"ಮಿರಮಿರುಗುವೆ, ಹಾ, ಕಿರುತಾರಗೆಯೆ
ಅರಿಯೆನು ನಾನೆಲೆ ನೀನಾರೊ
ಧರೆಗಿಳಿಯದೆ ನೀನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ"

ಎಸ್.ಜಿ.ನ. ಅವರ ಸ್ವತಂತ್ರ ಕವಿತೆಗಳಲ್ಲಿ ಶೈಲಿ, ಭಾವ, ವಸ್ತುಗಳು ಹೊಸತನದಿಂದ ಕೂಡಿದೆ. ಇವರ ಮಳೆಗಾಲ ಕವಿತೆಯ ರಚನೆಯ ಹಿನ್ನೆಲೆಯನ್ನು ಕುರಿತು ಹೇಳುವಾಗ "ಅಯ್ಯ, ಪತ್ರಾಧಿಪತಿ, ಮೈಸೂರು ದೇಶದಲ್ಲಿ .. ಅರಮನೆಗೆ ಸೇರಿದ ರಾಜಬಾಲಿಕಾ ಪಾಠಶಾಲೆಯಲ್ಲಿ ಮುಖ್ಯೋಪಾಧ್ಯಾರಾಗಿದ್ದು, ಗತಿಸಿದ ಶ್ರೀ. ಡಿ. ಸುಬಯ್ಯ, ಬಿ. ಎ. ಅವರ ಸುಲಭವಾದ ಕನ್ನಡದಲ್ಲಿ ಒಂದು ವಾಚನಾ ಪುಸ್ತಕವನ್ನು (Reader) ರಚಿಸಬೇಕೆಂದು ಪ್ರಯತ್ನಿಸಿ, ಅದರಲ್ಲಿ ನಡುನಡುವೆ ಸೇರಿಸುವುದಕ್ಕೆ ಅನುಕೂಲವಾಗಿರುವಂತೆ, ಸ್ವಾಭಾವ ವರ್ಣನೆಯಿಂದ ಕೂಡಿದ ಕೆಲವು ಪದ್ಯಗಳನ್ನು ಮಾಡಿಕೊಡಬೇಕೆಂದು ಕೇಳಿಕೊಂಡುದರ ಮೇಲೆ ಈ ಪದ್ಯಗಳು ರಚಿಸಲ್ಪಟ್ಟವು" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೫೩) ಎಂದು ಹೇಳಿದ್ದಾರೆ ಲೇಖಕರು. ಇವರ ಸಮಕಾಲೀನ ಕವಿಗಳಾದ ಪಂಜೆ ಮಂಗೇಶರಾಯರು ಹೊಸ ಮಾದರಿಯ ಕವಿತೆಗಳನ್ನು ರಚಿಸಿದವರಲ್ಲಿ ಪ್ರಮುಖರು. ಇವರು ಶಾಲಾ ಶಿಕ್ಷಕರಾಗಿದ್ದರು. ಇವರ ತೆಂಕಣಗಾಳಿಯಾಟ, ಉದಯರಾಗ, ಸಂಜೆಯ ಹಾಡು ಮುಂತಾದ ಗೀತೆಗಳನ್ನು ಮಕ್ಕಳಿಗಾಗಿಯೇ ರಚಿಸಿದರು.

ಇವರ ಕವಿತೆಯ ಸರಳತೆಯನ್ನು ಕುರಿತು "ಕನ್ನಡ ಕವನ ರಾಜ್ಯದಲ್ಲಿ ಸರಳತೆಗೆ ಒಂದು ಹೊಸ ಹಾದಿ ಹಾಕಿಕೊಟ್ಟರು. ಅವರು ತಮ್ಮ ಬರವಣಿಗೆಗಳಿಂದಲೂ, ಸಾಹಿತ್ಯ ವಿಮರ್ಶೆಯಿಂದಲೂ, ಸಾಹಿತ್ಯವನ್ನು ಜನಜೀವನಕ್ಕೆ ಸಮೀಪವಾಗಿ ತರಲೆತ್ನಿಸಿದ ಸಾಹಸಿಗಳು. ಹಳೆಯದನ್ನು ಬಿಟ್ಟು, ಹೊಸ ಹಾದಿ ತುಳಿದವರು; ಸಂಪ್ರದಾಯ ನಿರ್ಬಂಧಗಳನ್ನು ಹರಿದು ಬಂದು–ಸಾಹಿತ್ಯ ಇಂದಿನ ಬದುಕಿಗೆ, ಜೀವನಕ್ಕೆ ತಕ್ಕ ವಾಹಕವಾಗುವಂತೆ ಶ್ರಮಿಸಿದವರು ಅವರು" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೬೧)ಎಂದಿದ್ದಾರೆ ಶ್ರೀ. ಎಚ್. ಸುಂದರರಾಯರು.

'ತೂಕಡಿಕೆಯನು ಕಳೆಯದೇಕೆ ಕುಳಿತಿಹ ಗೆಳೆಯ?' 'ಹುತ್ತರಿ ಹಾಡು' ಇವೇ ಮೊದಲಾದ ರಾಷ್ಟ್ರೀಯ ಭಾವನೆಯ ಗೀತಗಳನ್ನೂ ಪಂಜೆಯವರು ಬರೆದಿದ್ದಾರೆ. ಕೊಡಗಿನ ನಾಡಗೀತೆಯೆನಿಸಿಕೊಂಡು ಹೆಸರಾಗಿದೆ 'ಹುತ್ತರಿಯ ಹಾಡು'.

"ನಮ್ಮ ಕೊಡಗಿದು ಜಮ್ಮದು
ಜಮ್ಮ ಕೊಡಗಿನದು ನಮ್ಮದು"
"ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯಹಾಲಿನ ಮೇವನು,
ಕವಣೆ ತಿರಿ ಕಲ್ಲಾಟ ಹಕ್ಕಗೆ ಸೆಳೆದರೋ ಹೆಬ್ಬಾವನು,
ಸವರಿ ಆನೆಯ ಸೊಂಡಿಲಲ್ಲಿ ರಣ ಕೊಂಬನಾರ್ ಭೋರ್ಗರೆದರೊ
ಸವೆದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೊ,
ಅವರೆ ಸೋಲ್ ಸಾವರಿಯರು !
ಅವರೆ ಕಡುಗಲಿ ಗರಿಯರು !
ಅವರೆ ಕೊಡಗಿನ ಹಿರಿಯರು !"

ಇದರ ಲಯವೇ ಬಹಳ ರೋಮಾಂಚನಕಾರಿಯಾಗಿದೆ. ಇಲ್ಲಿಯ ಸರಳವಾದ ಭಾಷೆಯ ಪ್ರಯೋಗ, ಪ್ರಾಸದ ವಿಚಾರದಲ್ಲಿ ಆದಿ ಮತ್ತು ಅಂತ್ಯ ಪ್ರಾಸಗಳನ್ನು ಭಿನ್ನವಾಗಿ ಕಟ್ಟಿದ್ದಾರೆ. ಹೊಸ ಮಾದರಿ ಈ ಕವಿತೆಯು ಹೊಸ ಲಯವನ್ನು ಹೊಂದಿದೆ. ಈ ಗೀತೆಗಳೇ ಪಂಜೆಯವರ ಜನಪ್ರಿಯವನ್ನಾಗಿಸಿವೆ. ಅಲ್ಲದೆ ಮಕ್ಕಳಿಗಾಗಿಯೇ ಬರೆದ ಕವಿತೆಗಳಾದರೂ ಅದರ ಲಯಬದ್ಧತೆ ದೊಡ್ಡವರನ್ನೂ ಮೋಡಿ ಮಾಡುವಂತಹುದು.

"ಚಂದು ಕೇಳ್! ದಾರಿಯಲಿ ನಾ ಪೋಪೆ ಮುಂದೆ ।
ಬಂದಪನು ಬಳಿಕ ನಿನ್ನಯ ಮುದ್ದು ತಂದೆ ।
ಮಂದಿ ಮಕ್ಕಳು ಪಡೆದು ಬಾ ನೀನು ಹಿಂದೆ।
ಎಂದವನ ಬಾಯಿ ಬಿಗಿದಳು ಮುತ್ತಿನಿಂದೆ,"

ಪಂಜೆಯವರ ಸಮಕಾಲೀನರಾದ ಹಾಗೂ ಹೊಸಗನ್ನಡ ಕಾವ್ಯಕ್ಕೆ ಹೊಸ ಆಯಾಮವನ್ನು ನೀಡಿದವರಲ್ಲಿ ಹಟ್ಟಿಯಂಗಡಿ ನಾರಾಯಣರಾಯರೂ ಪ್ರಮುಖರು. ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಮೂಡಿಸಿದವರು. ತಮ್ಮ 'ಆಂಗ್ಲ ಕವಿತಾಸಾರ'ದ ಮುನ್ನುಡಿಯಲ್ಲಿ ತಮ್ಮ ಇಂಗ್ಲೀಷ್ ಕವಿತೆಗಳ ಅನುವಾದದ ಹಿನ್ನೆಲೆಯನ್ನು ಮತ್ತು ಹೊಸ ಕಾವ್ಯದ ಭಾಷೆ ಹೇಗಿರಬೇಕೆಂಬುದರ ಬಗೆಗಿನ ಚರ್ಚೆ ಹೀಗಿದೆ– "ಕಾವ್ಯಗಳನ್ನು ಹಳಗನ್ನಡದಲ್ಲಿಯೇ ಬರೆಯಬೇಕೆಂದು ಕೆಲವರ ಅಭಿಪ್ರಾಯವಿದೆ. ಇದು ಪಂಡಿತರ ಪರಂಪರೀಣ ಮತವಾಗಿರಬಹುದು. ದಕ್ಷಿಣದಲ್ಲಿ ಮಾತ್ರವಲ್ಲ, ಕೃಷ್ಣಾನದಿಯ ಉತ್ತರದಲ್ಲಿ ಗುಲ್ಬರ್ಗ, ವಿಜಾಪುರ ಜಿಲ್ಲೆಗಳಲ್ಲಿ ದೊರೆತ ಶಾಸನಗಳಲ್ಲಿಯೂ ಪದ್ಯಗಳು ಹಳಗನ್ನಡದಲ್ಲಿಯೇ ರಚಿತವಾಗಿವೆ. ಗದ್ಯದಲ್ಲಿಯೂ ಸಮಾನ ಕಾಲದ ವ್ಯಾಕರಣವು ಒಂದೇ ವಿಧವಾಗಿದೆ. ಲೋಕಪ್ರಿಯವಾದ ಕಾವ್ಯಗಳನ್ನು ಈಗ ನಡುಗನ್ನಡವೆನ್ನಿಸಿಕೊಳ್ಳುವ ಹೊಸಗನ್ನಡದಲ್ಲಿ ಬರೆಯುವ ಪದ್ಧತಿ ಪ್ರಶಂಸನೀಯವೆಂದು ನಾವು ಹೇಳಬಹುದು. ಕೆಲವು ಹಳಗನ್ನಡ ಮಾತುಗಳನ್ನು ಪದ್ಯಗಳಲ್ಲಿ ಜೋಪಾನ ಮಾಡಿ ಇಟ್ಟುಕೊಳ್ಳುವುದು ಕನ್ನಡಿಗರಿಗೆ ಭಕ್ತಿಯ ಕರ್ತವ್ಯ. ಆದರೆ ಹಳಗನ್ನಡ ಗ್ರಂಥಗಳನ್ನು ಹೆಚ್ಚಿಸುವುದರಿಂದ ಸಂಸ್ಕೃತ ಗ್ರಂಥಗಳನ್ನು ಬರೆಯುವಷ್ಟೇ ಅಥವಾ ಒಂದಿಷ್ಟು ಹೆಚ್ಚು ಉಪಯೋಗವಿರಬಹುದಲ್ಲದೆ ನಾವು ಆಶಿಸುವಷ್ಟು ಲಾಭವಿಲ್ಲ."(ಹಟ್ಟಿಯಂಗಡಿ ನಾರಾಯಣರಾಯ–ಪು. ೨೪) ಕವಿತೆಯ ಭಾಷೆಯ ಬಗ್ಗೆ ಪಂಡಿತರಿಗಿದ್ದ ಅಭಿಪ್ರಾಯವನ್ನು ತಿರಸ್ಕರಿಸಿದ್ದಾರೆ. ಭಾಷೆಯು ಆಯಾ ಕಾಲದ ಲಕ್ಷಣಗಳನ್ನು ಒಳಗೊಂಡೆ ಕಾವ್ಯಗಳಲ್ಲಿ ಅಭಿವ್ಯಕ್ತವಾಗಬೇಕು. ಇಲ್ಲವಾದರೆ ಕನ್ನಡವೂ ಇತರೆ ಭಾಷೆಗಳಂತೆ ಮೃತ ಭಾಷೆಯಾಗುತ್ತದೆ.

ಹೊಸಗನ್ನಡ ಕಾವ್ಯದ ವಸ್ತುವಿನ ಬಗ್ಗೆ ಅವರಿಗಿದ್ದ ಧೋರಣೆ– "ಕವಿಗಳಿಗೆ ಸ್ವತಂತ್ರತೆಯಿರಬೇಕು. ಪುರಾಣದ ಕಥೆಗಳನ್ನು ಅನುವಾದಿಸಿ ಹೇಳುವುದು ಈಗ ಅವಶ್ಯಕವಲ್ಲ. ಅವುಗಳನ್ನು ಪರಿವರ್ತಿಸಿ ಅವುಗಳಲ್ಲಿ ಹೊಸ ಪ್ರಸಂಗಗಳನ್ನು ಸೇರಿಸಿ ತಮ್ಮ ನೂತನಮತಿಗೆ ತೋಚಿದಂತೆ ಹೇಳಿದರೆ ಹೇಳಲಿಕ್ಕೆ ಅವಕಾಶವಿದೆ. ಬ್ರಾಹ್ಮಣರೂ ಜೈನರೂ ಇತಿಹಾಸಗಳನ್ನು ತಮಗೆ ಬೇಕಾದಂತೆ ಹವಣಿಸಿಕೊಳ್ಳಲಿಲ್ಲವೇ? ಹದಿನೆಂಟು ಅಂಗಗಳನ್ನು ವರ್ಣಿಸಬೇಕೆಂಬ ವಿಧಿಯನ್ನು ನಿರಸಿಸಬೇಕು. ಅಭಿನವವಾದಿ ವಿದ್ಯಾನಂದ ಸಂಕಲಿತ 'ಕಾವ್ಯಸಾರ'ದಲ್ಲಿ ಸುಮಾರು ಐವತ್ತು ವರ್ಣನೆಗಳಿವೆ. ಪ್ರಪಂಚದಲ್ಲಿ ವರ್ಣನೀಯ ಪದಾರ್ಥಗಳಿಗೂ ಭಾವಗಳಿಗೂ ಮಿತಿಯಿದೆಯೇ? ಭಾವಗಳು ಮುಖದಲ್ಲಿಯೂ ಚರಿತದಲ್ಲಿಯೂ ಹೇಗೆ ಕಾಣಿಸಿಕೊಳ್ಳತ್ತವೆಂದು ಕನ್ನಡ ಕವಿಗಳು 'ಭಾವಗಣ' ಓದಿದರೆ ವರ್ಣನೆಗೆ ಎಷ್ಟು ವಿಷಯಗಳು ದೊರೆಯಬಹುದು ಅವುಗಳನ್ನು ಎಷ್ಟು ವಿಧವಾಗಿ ವರ್ಣಿಸಬಹುದು ಎಂಬುದು ವಿಶದವಾದೀತು. ಕವಿರಾಜರು ರಮಣೀಯತೆಯನ್ನು ಕಾಣದ ಸ್ಥಳವೆಲ್ಲಿ? ಅವರು ತಾವು ನೋಡಿದುದನ್ನು ವರ್ಣಿಸಿದರೆ ಸಾಕು. ಸಾಮಯಿಕ ವರ್ಣನೆಗಳಿಗೆ ಈಗಿನ ಶಿಕ್ಷಿತ ಜನರು ಮೆಚ್ಚುವುದಿಲ್ಲ. ಪೂರ್ವ ಕವಿಗಳು ಉತ್ಸಾಹದಿಂದ ರಚಿಸಿದ ಕೆಲವು ವರ್ಣನೆಗಳು ಈಗಿನವರಿಗೆ ಬೀಭತ್ಸವಾಗಿವೆ. ಪೂರ್ವ ಪದ್ಧತಿಗನುಸಾರವಾಗಿ ಏಕಪ್ರಕಾರತೆಯನ್ನು ಆಚರಿಸುವುದರಿಂದ ಓದುವವರಿಗೆ ಬೇಸರವಾಗುತ್ತದೆ." (ಹಟ್ಟಿಯಂಗಡಿ ನಾರಾಯಣರಾಯ–ಪು.೨೫) ಜನರಿಗೆ ಈ ಕಾದಂಬರಿ ಪ್ರಕಾರವು ಓದಲು ಮತ್ತು ಬರೆಯಲು ಪೂರಕವಾದ ಒಂದು ಪ್ರಕಾರ. ಪ್ರಾಚೀನ

ಕೃತಿಗಳಿಗಿದ್ದ ನಿರ್ಬಂಧಗಳು ಕಾದಂಬರಿಗೆ ಇರಲಿಲ್ಲ. ಅಷ್ಟಾದಶ ವರ್ಣನೆಗಳಿಲ್ಲ. ಬಹಳ ಸರಳವಾದ ಮಾತುಗಳಲ್ಲಿ ಭಾಷಾ ಶೈಲಿ ಇರುತ್ತದೆ.

ಪ್ರಸ್ತುತ ಪಾಶ್ಚಾತ್ಯ ಸಾಹಿತ್ಯದ ಅವಶ್ಯಕತೆಯನ್ನು ಕುರಿತಂತೆ "ಹೊಸಗನ್ನಡದಲ್ಲಿ ಗ್ರಂಥಗಳನ್ನು ರಚಿಸುವ ಪದ್ಧತಿ ಹುಟ್ಟಿ ಈಗ ೮೦೦ ವರ್ಷಗಳು ಕಳೆದುಹೋದವು. ಗಡಿಯಾರದ ಮುಳ್ಳುಗಳು ಹಿಂದಕ್ಕೆ ತಿರುಗಲಾರವೆಂದು ಆಂಗ್ಲರು ಹೇಳುವುದುಂಟು. ಹೊಸಗನ್ನಡವನ್ನು ಕಾವ್ಯಗಳಲ್ಲಿ ಉಪಯೋಗಿಸಬಾರದೆಂಬ ವಾದವು ಮಹಾರಾಷ್ಟ್ರೀಯರು ಸಂಸ್ಕೃತವನ್ನೇ ಬರೆಯಬೇಕನ್ನುವಷ್ಟೇ ಅಸಂಗತವಾಗಿದೆ. ಆಂಗ್ಲ ಕವಿತೆಗಳನ್ನು ದೇಶಭಾಷೆಗಳಲ್ಲಿ ಅನುವಾದಿಸಬಾರದೆಂದು ಎರಡನೆಯ ಆಕ್ಷೇಪವಂತೆ. ಮೈಸೂರಿನಲ್ಲಿ ಶೇಕ್ಸ್‌ಪಿಯರನ ಮುಖ್ಯ ನಾಟಕಗಳನ್ನು ವಿದ್ವಾಂಸರು ಕನ್ನಡಿಸಿದ್ದಾರೆ. ಆಸ್ಥಾನ ಕವಿಗಳಾಗಿದ್ದ ಬಸವಪ್ಪಶಾಸ್ತ್ರಿಗಳು ಇವರೊಳಗೊಬ್ಬರು. ಗ್ರೀಕರ ಒಂದು ಕಥೆಯನ್ನು ಆಧಾರವಾಗಿಟ್ಟುಕೊಂಡು ಶ್ರೀಗೋವಿಂದಾಚಾರ್ಯರು ೫೦೦ ಷಟ್ಪದಿಗಳನ್ನು ರಚಿಸಿದ್ದಾರೆ. ಇಂತಹ ಪಾಷಂಡ ಕರ್ಮಗಳನ್ನು ನಿಲ್ಲಿಸಿಬಿಡಿರೆಂದು ಪಂಪನೇ ಹಂಪನಕಟ್ಟೆಯಲ್ಲಿ ಅವತರಿಸಿ ಗರ್ಜಿಸಿದರೂ ಕೇಳುವರೆಲ್ಲಿ?" ಎಂದಿದ್ದಾರೆ. ಇವರು ಪಾಶ್ಚಾತ್ಯ ಕಾವ್ಯಗಳ ಅನುವಾದಕ್ಕೆ ಹೊಸ ರೂಪವನ್ನು ನೀಡಿದವರು. ಹೊಸ ಪ್ರಯೋಗಗಳು ಹಾಗು ಅನ್ಯ ಭಾಷೆಯ ಸಾಹಿತ್ಯದ ಸ್ವೀಕಾರವನ್ನು ಇವರು ಸ್ವಾಗತಿಸಿದರು.

ಹ.ನಾರಾಯಣರಾಯರು 'ಇಂಗ್ಲೀಷ್ ಗೀತೆಗಳು' ಬರುವ ಮೊದಲೆ ಕವಿತೆಯ ಭವಿತವ್ಯ ಎಂಬ ಲೇಖನವನ್ನು ಬರೆದಿದ್ದರು. ಇವರು ಕನ್ನಡ ಕವಿತೆಯ ಭವಿತವ್ಯ ಲೇಖನದಲ್ಲಿ ಕನ್ನಡ ಕವಿತೆಗಳು ಮುಂದೆ ಹೇಗೆ ರಚನೆಗೊಳ್ಳುತ್ತವೆ ಎಂಬುದರ ಬಗ್ಗೆ ಚರ್ಚಿಸಿದರು.

೧. ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ ಇನ್ನು ಮುಂದೆ ಕನ್ನಡ ಕಾವ್ಯಗಳ ಪ್ರಸಂಗ, ರಚನೆ ಅಲಂಕಾರ – ಇವು ಬದಲಾಗುವವು.

೨. ಕವಿಗಳು ಪರಮಾರ್ಥಿಕ ವಿಷಯಗಳಿಂತ ರಾಷ್ಟ್ರಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನಗೊಡುವರು.

೩. ಛಂದಸ್ಸಿನ ಹೊಸ ಮಾದರಿಗಳನ್ನು ಕಲ್ಪಿಸುವುದು.

೪. ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್ ಶಕ್ತಿಯನ್ನು, ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನು ಆರೋಪಿಸುವ ಉತ್ಪ್ರೇಕ್ಷೆ ರೂಢಿಯಾಗಬಹುದು. (ಹಟ್ಟಿಯಂಗಡಿ ನಾರಾಯಣರಾಯ–ಪು. ೨೮)

ಇವರ ಸಾಹಿತ್ಯ–ಸಾಧನೆಯನ್ನು ಕುರಿತು "ಇವರು ಅಂದಿನ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಪ್ರಚಲಿತದಲ್ಲಿದ್ದ ಮೂರು ನಂಬಿಕೆಗಳನ್ನು ಮುರಿದರು. ಹೊಸಗನ್ನಡದಲ್ಲಿ ಕಾವ್ಯ ರಚಿಸಬಾರದು, ಆಂಗ್ಲ ಕವನಗಳನ್ನು ಅನುವಾದಿಸಬಾರದು ಮತ್ತು ಛಂದಸ್ಸಿನ ಹೊಸ ರೀತಿಗಳನ್ನು ಕಲ್ಪಿಸಲಾರದು

ಈ ಮೂರು ನಂಬಿಕೆಗಳು". (ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ–ಪು. ೯೫).

ಪ್ರಾಸವಿಲ್ಲದೆ ಪದ್ಯ ರಚಿಸುವುದೆಂದರೆ ಅವರ ದೃಷ್ಟಿಯಲ್ಲಿ ಹಣೆಗೆ ಬೊಟ್ಟಿಲ್ಲದಂತೆ. ತಮ್ಮ ವಾದಕ್ಕೆ ಅವರು ಸಂಗೀತದ ತಿಳಿವಳಿಕೆಯನ್ನು ಸಮರ್ಥನೆಗಾಗಿ ಬಳಸಿಕೊಂಡಿದ್ದಾರೆ. ಒಂದು ರಾಗದಲ್ಲಿ ವಾದಿ ಮತ್ತು ಸಂವಾದಿ ಎಂಬ ಎರಡು ಪ್ರಧಾನ ಸ್ವರಗಳಿರಬೇಕಂತೆ ಎನ್ನುವ ಅವರು ಅವುಗಳನ್ನು ಪದೇ ಪದೇ ತೋರಿಸಿದರೆ ರಾಗವು ಸ್ಪಷ್ಟವಾಗಿಯೂ ಸುಂದರವಾಗಿಯೋ ಕಾಣುವುದೆಂದು ಸಂಗೀತಜ್ಞರು ಹೇಳುವರು ಎಂದು ಹೇಳುತ್ತ ಈ ನಿಯಮವನ್ನು ಉಲ್ಲಂಘಿಸಿದರೆ ಸಮಗೀತವೇ ಅಳಿದು ಹೋಗದು. ಅಷ್ಟೇಕೆ, ಈ ಮರ್ಯಾದೆಗೆ ಉತ್ತರದಲ್ಲಿರುವ ಪ್ರಾಮುಖ್ಯವು ದಕ್ಷಿಣದಲ್ಲಿಲ್ಲವಂತೆ ಎಂದು ಹೇಳಿದ್ದಾರೆ. ಇದರ ಅರ್ಥ ಪ್ರಾಸದ ನಿಯಮವಿದ್ದರೂ ಅದರ ಉಲ್ಲಂಘನೆಯಿಂದ ಕವಿತೆಯೇ ಆಗುವುದಿಲ್ಲ ಎನ್ನುವುದು ಸುಳ್ಳು ಎಂಬುದು. ಪ್ರಾಸದ ಇತಿಹಾಸದ ಕಡೆಗೆ ಗಮನಹರಿಸುವ ಹ.ನಾರಾಯಣರಾಯರು, "ಕನ್ನಡಕ್ಕೆ 'ಸತತಂ ಪ್ರಾಸಂ' ಎಂದು ನೃಪತುಂಗನು ಬರೆದಿರುವನು. ಈ ಪದ್ಧತಿ ಎಷ್ಟು ಹಳೆಯದು ಎಂದು ಹೇಳಕೂಡದು. ಸಾಂಗತ್ಯದಲ್ಲಿ ನಾಗವರ್ಮನು ವರ್ಣಿಸಿದ ಅಕ್ಷರ ಮಾತ್ರಾ ಗಣಗಳ ಕ್ರಮವನ್ನು ಕಿತ್ತು ಹಾಕಿದರೂ ಪ್ರಾಸವನ್ನು ಬಿಡಲಿಲ್ಲ. ಪ್ರಾಸಕ್ಕೆ ಕನ್ನಡಿಗರು ಇಷ್ಟು ಮರುಳಾದುದಕ್ಕೆ ಕಾರಣವಿಲ್ಲದಿರಬಹುದೆ? ಅನುಭವಕ್ಕೆ ಕಂಡುಬರುವುದೇನು? ಎಂಬ ಪ್ರಶ್ನೆಗಳು ಮುಂದಕ್ಕೆ ಇಟ್ಟುಕೊಂಡು ಅವರು ಅದಕ್ಕೆ ಮೂರು ಕಾರಣಗಳನ್ನು ನೀಡುವರು.

೧. ಪ್ರಾಸಕ್ಕಿಂತಲೂ ಅಕ್ಷರಗಣಾನುಸರಣವೇ ಕಠಿಣ. ಒಂದು ಷಟ್ಪದಿಯಲ್ಲಿ ಆರು ಸ್ಥಳಗಳಲ್ಲಿ ಒಂದಕ್ಷರವನ್ನು ಇಟ್ಟರೆ ಸಾಕು. ಒಂದು ಅಕ್ಷರಗಣಗಳ ವೃತ್ತದಲ್ಲಿ ಗುರು ಲಘುಗಳನ್ನು ಎಷ್ಟು ನಿರ್ದಿಷ್ಟ ಸ್ಥಾನದಲ್ಲಿಡಬೇಕು? ಇಷ್ಟು ಪ್ರಯಾಸಪಟ್ಟರೂ ಕನ್ನಡ ತಾಳಗಳಿಗೆ ಎಷ್ಟು ವೃತ್ತಗಳನ್ನು ಹಾಡಬಹುದು!

೨. ಲೋಕಪ್ರಿಯವಾದ ಕವಿತೆಗಳನ್ನು ತಾಳಹಾಕಿ ಹಾಡಲಾಗುವಂತೆ ರಚಿಸುವುದು ಉಚಿತವಾದುದರಿಂದ ಅವುಗಳಲ್ಲಿ ವಾದಿಸ್ವರದಂತೆ ಕೇಳಿಸುವ ಪ್ರಾಸವನ್ನು ಕಾಪಾಡುವುದು ಉಪಯುಕ್ತ ಪದ್ಧತಿ.

೩. ಅರ್ಥಕ್ಕೆ ತೇಜವಿಲ್ಲದೆಡೆಗಳಲ್ಲಿ ಆ ಕುಂದುಕವನ್ನು ಪ್ರಾಸದಿಂದ ಅಡಗಿಸಿದಷ್ಟು ಸುಲಭವಾಗಿ ಬೇರೆ ಶಬ್ದಾಲಂಕಾರಗಳಿಂದಾಗದು.

ಇವರ ನಂತರದಲ್ಲಿ ಭಾವಗೀತೆಗೆ ಹೊಸ ಆಯಾಮವನ್ನು ನೀಡಿದವರೆಂದರೆ ಗೋವಿಂದಪೈ ಇವರ ಪ್ರಾಸ ತ್ಯಾಗದ ವಿಚಾರವು ಹೊಸಗನ್ನಡ ಭಾವಗೀತೆಯಲ್ಲಿ ಹೊಸ ಸಂಚಲನವನ್ನು ಉಂಟು ಮಾಡಿತು. 'ಮಿಂಚಿನ ಬೆಳ್ಳಿ'ಯ ಲೇಖನದಲ್ಲಿ ಹೇಳುವಂತೆ "೧೮೯೩ರ ವೇಳೆಗೆ ತಾನು ಕಾವ್ಯಗಳನ್ನು ರಚಿಸಲು ಆರಂಭಿಸಿದೆ. ೧೮೯೮–೯೯ರ ವೇಳೆಗೆ ಪ್ರಾಸ ತೊರೆದು ಕವಿತೆಗಳನ್ನು ರಚಿಸಲು ಆರಂಭಿಸಿದೆ. ೧೮೯೮–೯೯ರ ವೇಳೆಗೆ ಪ್ರಾಸ ತೊರೆದು ಕವಿತೆಗಳನ್ನು ಬರೆಯಬೇಕು ಎನಿಸಿತಾದರೂ ಬರೆಯಲಿಲ್ಲ.

೧೯೪೯ರಲ್ಲಿ ಶೇಕ್ಸ್‌ಪಿಯರ್‌ನ twelth night ನಾಟಕ ಮೊದಲನೆಯ ಅಂಕದಿಂದ ಕೆಲವು ನೋಟಗಳನ್ನು ವೃತ್ತ – ಕಾವ್ಯಗಳಲ್ಲಿ ಕನ್ನಡಿಸಿ, ಅದನ್ನು ಶ್ರೀ ಶ್ರಿ ನಂದಳಿಕೆ ಲಕ್ಷ್ಮೀನಾರಾಯಣಪ್ಪ (ಮುದ್ದಣ)ನವರಿಗೆ ಉಡುಪಿಗೆ ಕಳುಹಿಸಿಕೊಟ್ಟೆ, ಮುಂದುವರಿಸು ಎಂದು ಅವರು ಹೇಳಿದರು ಅವರು ಮುಂದುವರಿಸಲಿಲ್ಲ. ಪ್ರಾಸದ ವಿಚಾರದಲ್ಲಿ ಚೇಳಿನ ಮಂತ್ರಬಾರದೆ ಹಾವಿನ ಗುದ್ದಿನಲ್ಲಿ ಕೈ ಹಾಕಲಾರದೆ; ಆ ಬಗ್ಗೆ ಬಲ್ಲವರು ಬೆನ್ನು ತಟ್ಟದಲ್ಲದೆ ಹಾಗೆ ಬರೆಯಲಿಕ್ಕೆ ಮನಸ್ಸು ಅಳುಕಿತು. ನಂತರ ಪಂಜೆಯವರಲ್ಲಿ ಪ್ರಾಸ ಬಿಟ್ಟರೆ ಹೇಗೆ? ಎಂದು ಕೇಳಿದಾಗ ಕೇವಲ ಅಡ್ಡ ನಗೆ ಬೀರಿ ಕೊಕ್ಕೆ ಮಾತಾಡಿ ಅವರ ಪ್ರಶ್ನೆಯನ್ನು ತೇಲಿಸಿದರತೆ. ಆ ಸಂದರ್ಭದಲ್ಲಿ ಪ್ರಾಸ ಬಿಟ್ಟು ಬರೆಯಲು ಮುಂದಾಗಲಿಲ್ಲ. ನಂತರದಲ್ಲಿ ೧೯೧೧ರವರೆಗೆ ಬರೆದ ಕವಿತೆಗಳು ಪ್ರಾಸದಿಂದ ಕೂಡಿದ ಛಂದೋಬದ್ಧವಾದ ಕವಿತೆಗಳು.

ಗೋವಿಂದ ಪೈರವರು ಪ್ರಾಸ ತೊರೆಯುವ ಧೃಡ ನಿರ್ಧಾರ ಮಾಡಿದ್ದು ೧೯೧೧ರಲ್ಲಿ ಬಂಡೋದಾದಲ್ಲಿದ್ದಾಗ ೧೯೧೧ನೆಯ ಏಪ್ರಿಲ್ ತಿಂಗಳಲ್ಲಿ ನಾನು ಸುಮಾರು ಒಂದು ತಿಂಗಳು ಬಂಡೋದಾ ರಾಜ್ಯದ ನವಸಾರಿ ಎಂಬಲ್ಲಿದ್ದೆ. ಆಗ್ಗೆ ಒಂದು ಮುಂಜಾಣೆ ಮಾಳಿಗೆಯಲ್ಲಿ ಶತಪದಗೆಯ್ಯುತ್ತಿದ್ದಾಗ ಹಠಾತ್ತಾಗಿ, ಆಗೋದು ಹೋಗೋದು ದೇವರ ಇಚ್ಛೆ ಹೂಡೋದು ಬಿತ್ತೋದು ನನ್ನ ಇಚ್ಛೆ. ಇನ್ನು ಮೀನಮೇಷ ನೋಡದೆ ಪ್ರಾಸವನೀಗಲೆ ತೊರೆದು ಬಡುವುದೇ ನಿಶ್ಚಯಂ' ಎಂದಾಯಿತು. ಮರದ ಹಣ್ಣು ಮರದ ಬಂಡದಾಗೆ ಬಂತು ಕೂಡಲೇ ರವೀಂದ್ರನಾಥ ಠಾಕೂರರ 'ತಾಯಿ ಭುವನ ಮನೋಮೋಹಿನೀ' ಎಂದು ಮೊದಲಾಗುವ 'ಭಾರತ ಲಕ್ಷ್ಮೀ' ಎಂಬ ಬಂಗಾಳಿ ಗೀತೆಯನ್ನು ಕನ್ನಡಿಸಿದೆ. (ಬಂಗಾಳಿ ಕವಿತೆಯನ್ನು ಗಮನಿಸಬೇಕು) ಆಮೇಲೆ ಅವರದೇ 'ಶಿಶು' ಎಂಬ ಗ್ರಂಥದಲ್ಲಿಯ 'ವಿದಾಯ' ಎಂಬ ಕವಿತೆಯನ್ನು ಅನಂತರ ಶೇಖ್ ಮುಕಮ್ಮದ್ ಇಕ್ಬಾಲರ 'ಹಿಂದೂಸ್ತಾನ ಹಮಾರ' ಎಂಬ ಉರ್ದು ಗೀತೆಯನ್ನು ಕನ್ನಡಿಸಿದೆ. ಅಲ್ಲಿಂದ ಮೂರನೆಯ ತಿಂಗಳಲ್ಲಿ ಊರಿಗೆ ಮರಳಿದವನೇ ಅವನ್ನು ಸ್ವದೇಶಾಭಿಮಾನಿಯಲ್ಲಿ ಪ್ರಕಟಿಸಿದೆ. ಪ್ರಾಸರಹಿತವಾದ ನನ್ನ ಕವಿತೆಗಳು ಅಚ್ಚಾದದು ಅದೇ ಮೊದಲ ಬಾರಿ." (ಮಿಂಚಿನ ಬಳ್ಳಿ–ಪು. ೫, ೬)ಎಂದಿದ್ದಾರೆ.

ಗೋವಿಂದ ಪೈರವರು ಹೇಳುವಂತೆ "ಚಿಕ್ಕಂದಿನಿಂದಲೆ ಪಾಶ್ಚಾತ್ಯ ಸಾಹಿತ್ಯದಲ್ಲಿ ನನಗೆ ಚತುರ್ದಶಪದಿಯಲ್ಲಿ (sonnet) ಮೆಚ್ಚು. ಪ್ರಾಸವನ್ನು ವಿಸರ್ಜಿಸುವವರೆಗೆ ಆಗಾಗ್ಗೆ ಚತುರ್ದಶಪದಿಗಳನ್ನು ಬರೆಯಲಿಕ್ಕೆ ಯತ್ನಿಸಿದೆನಾದರೂ, ೧೪ ಪ್ರಾಸಾಕ್ಷರಗಳನ್ನು ದೊರಕಿಸಿಕೊಳ್ಳಲಾರದೆ. ಮೊದಲಿಲ್ಲದೆ ಒಡ್ಡಿ ಹೋದಂತೆ, ಒಟ್ಟಾರೆ ಆಶ್ರಮ ತೀರ ನಿಷ್ಪಟವಾಯಿತು. ಪ್ರಾಸ ತ್ಯಜಿಸಿದಂದಿನಿಂದ ಕೆಲವು ಚತುರ್ದಶ ಪದಗಳನ್ನು ಬರೆದೆ ಹರಿದೆ. ೧೯೧೬ರ ಪೂವಾರ್ಧದಲ್ಲಿ 'ಕವಿತಾವತಾರ' ಎಂಬ ಒಂದು ಚತುರ್ದಶಪದಿಯನ್ನು ರಚಿಸಿದೆ..... ಅಂದಿನಿಂದ ಇಂದಿಗೂ ಚತುರ್ದಶಪದಿಗಳನ್ನು ಸರಾಗವಾಗಿ ಬರೆಯುತಲಿದ್ದೇನೆ." ಎಂದಿದ್ದಾರೆ.

ಇಲ್ಲಿ ರೆಂಬೆಯ ನೆಳಲಲಿ ನಿರೊಟ್ಟಿಯೊಂದು
ಕಳ್ಳ ಬಿಂದಿಗೆಯೊಂದು, ಸವಿಗಬ್ಬವೊಂದು
ನೀನೆನ್ನ ಬಳಿಯೆ ಕಾಡಲಿ ಹಾಡುವಂದು
ಕಾಡೆ ಗಡ ಸಗ್ಗದಿಂದದೆನಗೆ ಲೇಸಂದು (ಗಿಳಿವಿಂಡು –ಪು. ೧೧೭)

೧೯೧೧ರಲ್ಲಿ ಏಪ್ರಿಲ್‌ನಲ್ಲಿ ಠಾಕೂರರ 'ಭಾಗ್ಯಲಕ್ಷ್ಮಿ'ಯನ್ನು ಮೊದಲಿಗೆ ಪ್ರಾಸರಹಿತವಾಗಿ ಅನುವಾದಿಸಿದರು. ಪ್ರಾಸವನ್ನು ಕುರಿತ 'ಛಾಂದಸ ಮಹಾಪ್ರಶ್ನೆ' ಬಗ್ಗೆ ಚರ್ಚೆ ನಡೆದಾಗ ಅದಕ್ಕೆ ಗೋವಿಂದ ಪೈರವರು "ಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ, ಛಂದಸ್ಸನ್ನು, ವ್ಯಾಕರಣವನ್ನು ಕೂಡ ತನಗೆ ಬೇಕಾದಂತೆ ಮಾರ್ಪಡಿಸಿಯೂ, ನೇರ್ಪಡಿಸಿಯೂ ಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ" ಎಂದಿದ್ದಾರೆ. (ಕಂನಾಡ ಸಾಹಿತ್ಯಜ್ಞರ ಆತ್ಮಕಥನ–ಪು. ೧೪). ಇವರು ಪ್ರಾಸ ತೊರೆದು ಬರೆದ ಮೊದಲ ಸ್ವತಂತ್ರ ಕವಿತೆ ಹೊಲೆಯನು ಯಾರು?. ಇದು ಅದೇ ವರ್ಷದ ಸೆಪ್ಟೆಂಬರದ ಸ್ವದೇಶಿಭಿಮಾನಿ ಪತ್ರಿಕೆಯಲ್ಲಿ ಪ್ರಕಟವಾಯಿತು.

ಇಂತಹ ಸಂದರ್ಭದಲ್ಲಿ ಹೊಸಗನ್ನಡದ ಭಾವಗೀತೆಗೆ ಬಿ.ಎಂ.ಶ್ರೀಯವರ ಕೊಡುಗೆ ಅಪೂರ್ವವಾದದ್ದು. ತನ್ನದೇ ಆದ ವಿಶೇಷ ಶೈಲಿಯನ್ನು ಕಾವ್ಯಕ್ಕೆ ನೀಡಿದವರು. ತಮ್ಮದೇ ಆದ ಛಂದೋರೂಪ ಆವಿಷ್ಕಾರ, ಹೊಸಶೈಲಿ ಹೊಸ ಮಾದರಿಯ ವಸ್ತುಗಳಿಂದ ವಿಶಿಷ್ಟವಾದ ಕಾವ್ಯ ಸೃಷ್ಟಿಸಿದವರು ಬಿ.ಎಂ.ಶ್ರೀ. ಇವರ 'ಇಂಗ್ಲಿಷ್ ಗೀತೆಗಳು' ಕವನ ಸಂಕಲವು ಹೊಸ ಮಾರ್ಗವನ್ನು ರೂಪಿಸಿದ ಕವಿತೆಗಳ ಗುಚ್ಛ. ಇಂತಹ ವಿಶಿಷ್ಟ ರೂಪಕ್ಕೆ ಪ್ರೇರಣೆ ಎಂದರೆ ಪಾಶ್ಚಿಮಾತ್ಯ ಕಾವ್ಯ. ಅವರು ತಮ್ಮ ಅರಿಕೆಯಲ್ಲಿಯೇ ಹೇಳಿಕೊಳ್ಳುವಂತೆ

"ಇಲ್ಲಿ ಕೊಟ್ಟಿರುವ ಕವಿತೆಗಳನ್ನು ಇಂಗ್ಲಿಷ್ ಕಾವ್ಯಮಾಲೆಯ ನಾಯಕ ರತ್ನಗಳೆಂದು ಅಂದುಕೊಂಡವರಲ್ಲಿ ಉತ್ತಮರಾದ ಕವಿಗಳೂ ಇಲ್ಲಿ ಎಲ್ಲರೂ ಅಲ್ಲ.... ಇಂಗ್ಲಿಷ್ ಸಾಹಿತ್ಯ ಸಮುದ್ರದ ಕರೆಯಲ್ಲಿ ತೆರೆಯೆಸೆದ ಈ ಕೆಲವು ಸಣ್ಣ ಚಿಪ್ಪುಗಳಿಂದ ಆ ದಿವ್ಯ ರತ್ನಾಕರದ ಲಾವಣ್ಯವೂ, ವಾಸನೆಯೂ, ಘೋಷವೂ, ರುಚಿಯೂ ಸಹೃದಯರ ಅನುಭವಕ್ಕೆ ಬಾರದೇ ಇರಲಾರದೆಂದು ನಾನು ನಂಬಿರುತ್ತೇನೆ" ಎಂದಿದ್ದಾರೆ.

ಬಿ.ಎಂ.ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯಕ್ಕೆ ಹೊಸ ಚಿಂತನೆಗಳು ಪ್ರವೇಶಿಸಬೇಕೆಂದರೆ ಇಂಗ್ಲೀಷ್ ಸಾಹಿತ್ಯದ ಅನುವಾದದಿಂದ ಮಾತ್ರ ಸಾಧ್ಯವೆಂಬ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ.

"ಮಾತೃಭಾಷೆಯನ್ನು ವೃದ್ಧಿಗೊಳಿಸಬೇಕಾದರೆ ಎರಡು ಮಾರ್ಗಗಳಿವೆ. ಮಾತೃಭಾಷೆಯಲ್ಲಿ ಸತ್ವವಿರಬೇಕು.... ಮಾತೃಭಾಷೆಯಲ್ಲಿ ಸತ್ವವಿಲ್ಲದಿರುವಾಗ ಭಾಷಾಂತರಗಳ ಮೂಲಕ ಸತ್ವವನ್ನು ಸಂಪಾದಿಸುವುದು ಎರಡನೇ ವಿಧ.... ಆಂಗ್ಲೇಯ ವಿದ್ಯಾಪಾರಂಗತರೇ! ಇನ್ನು ಮುಂದೆ ನೀವು

ನಿದ್ದೆಯಿಂದೆಚ್ಚೆತ್ತುಕೊಳ್ಳದೆ, ಮಾತೃ ಭಾಷೆಗೆ ಸಹಾಯಕರಾಗದೆ, ಕಾಲಕ್ಕೆ ತಕ್ಕಂತೆ ಜನರಂಜನೀಯವಾದ ಗ್ರಂಥಗಳನ್ನು ಬರೆಯದೇ ಇದ್ದರೆ, ನಮ್ಮ ಭಾಷಾಂತರ ಖಂಡನ ಮತದಿಂದ ನಿಮಗೆ ಬಹಿಷ್ಕಾರ ಪತ್ರಿಕೆಗಳನ್ನು ಕಳುಹಿಸುವೆವು. ಭಾಷೆ ಇದೆ, ನಿಮ್ಮಲ್ಲಿ ಶಕ್ತಿಯಿದೆ! ಬರೆಯಿರಿ. ಕವಿತ್ವದ ಮೇಲೆ ಕವಿತ್ವವಾಗಿ ನಮಗೆ ಅಜೀರ್ಣವಾಗಿದೆ ಲಂಘನವೇ ಗುಣವೆಂದು ನಂಬಿದ್ದೇವೆ. ಪಾಂಡಿತ್ಯದ ಮೇಲೆ ಪಾಂಡಿತ್ಯವಾಗಿ ರೋಸಿ ಹೋಗಿದ್ದೇವೆ. ನಾವು ಆಡುವ ಮಾತು, ನಾವು ಮೆಚ್ಚುವ ವಿಷಯ, ನಾವು ಏಳಿಗೆಯಾಗುವ ದಾರಿ. ಇದಕ್ಕೆ ನೀವು ಬರುವವರೆಗೂ ನಮಗೂ ನಿಮಗೂ ಗಂಟಿಲ್ಲ ಎಚ್ಚರವಿರಲಿ!"(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೯) ಎಂಬ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ.

ಇವರ ಕಾವ್ಯ ವೈಶಿಷ್ಟ್ಯವನ್ನು ಕುರಿತು "ಬಿ.ಎಂ.ಶ್ರೀ. ಪದ ಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ, ಇವೆಲ್ಲವುಗಳಲ್ಲಿ ಮೂಲ ಕವಿಯ ವ್ಯಕ್ತಿತ್ವವನ್ನು ಅನುಕರಿಸಿದರೂ, ಕನ್ನಡ ಜಾಯಮಾನಕ್ಕೆ ಹೊಂದುವಂತೆ ಅಕ್ಷರಶಃ ಅನುವಾದ ಮಾಡದೆ ಭಾವದ ಸತ್ವವನ್ನು ಹಿಡಿದು ಕವನಗಳಲ್ಲಿ ಜೀವಂತಿಕೆಯನ್ನು ಮಿಡಿದಿದ್ದಾರೆ. ಶ್ರೀಯವರ ಈ ಸಂಗ್ರಹದಲ್ಲಿ ಯುದ್ಧ, ಪ್ರೇಮ, ಸಾವು, ದೇಶಭಕ್ತಿ. ಪ್ರಕೃತಿ, ಸೌಂದರ್ಯ, ಮಾನವ ಜನ್ಮದ ಸುಖ – ದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಮುಂತಾದ ವಸ್ತುವನ್ನು ಒಳಗೊಂಡಿದ್ದು ಇಂದಿಗೂ ಪ್ರಸ್ತುತವಾಗಿದೆ."(ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು–ಒಂದು ಅಧ್ಯಯನ ಪು.೩೧) ಎಂಬ ಡಾ. ಶಾಂತಲಕ್ಷ್ಮೀಯವರು ವಿವರಿಸಿದ್ದಾರೆ.

ಶ್ರೀಯವರ ಕಾವ್ಯ ಶೈಲಿಯ ವಿಶಿಷ್ಟವಾದದ್ದು ಅವರ ಕಾವ್ಯ ವೈಶಿಷ್ಟ್ಯತೆಯನ್ನು ಕುರಿತು ಅವರೇ ಹೇಳಿರುವ ಸಾಲುಗಳು ಇಂತಿವೆ.

"ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ,
ಅವಳ ತೊಡುಗೆ ಇವಳಿಗಿಟ್ಟು
ಹಾಡ ಬಯಸಿದೆ." (ಆಧುನಿಕ ಕನ್ನಡ ಕವಿತೆ–ಪು. ೧೨)

ಬಿ.ಎಂ.ಶ್ರೀಯವರು ತಮ್ಮ 'ಇಂಗ್ಲಿಷ್ ಗೀತೆಗಳು' ಕೃತಿಯಲ್ಲಿ ಬಳಸಿರುವ ಎಲ್ಲಾ ಮಾದರಿಗಳು ಸ್ವಂತಿಕೆಯನ್ನು ಕಾಯ್ದಿರಿಸಿಕೊಂಡಿವೆ. ಇವರಿಗೆ ಇಂಗ್ಲಿಷ್ ಗೀತೆಗಳ ಮೇಲೆ ಬಹಳ ಮೋಹವಿತ್ತೆಂಬುದು ಅವರ ಕವಿತೆಯ ಸಾಲುಗಳಲ್ಲೆ ಗೋಚರಿಸುತ್ತದೆ.

"ಪಡುವ ಕಡಲ ಹೊನ್ನ ಹೆಣ್ಣು
ನನ್ನ ಜೀವದುಸಿರು, ಕಣ್ಣು
ನಲಿಸಿ ಕಲಿಸಿ, ಮನವನೊಲಿಸಿ
ಕುಣಿಸುತಿರುವಳು" (ಆಧುನಿಕ ಕನ್ನಡ ಕವಿತೆ–ಪು. ೮)

ಆದರೆ ಇದೆಲ್ಲದರ ಮೂಲ ಇಂಗ್ಲಿಷ್‌ನ ಕವಿತೆಗಳು. ಅವರೇ ಹೇಳುವಂತೆ "ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ, ಸಂಸ್ಕೃತದ ಪೋಷಣೆಯಲ್ಲೂ ಕಾವ್ಯಮಾಲೆಯನ್ನು ಬೆಳೆಸಿದವು. ಹಾಗೆ ಈ ದೈವದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ, ಪೋಷಣೆಯಲ್ಲೂ ಅದನ್ನು ಬೆಳೆಸಬೇಕು, ಇಂಗ್ಲಿಷ್ ಕಾವ್ಯಮಾಲೆ ಪರಮೋತ್ಕೃಷ್ಟವಾದುದು. ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು ಇದರ ಐಶ್ವರ್ಯದಲ್ಲಿ ಭಾಗಿಯಾಗಿ ಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ ಮುಂದೆ ಸ್ವದೇಶ ಮಾರ್ಗವೂ, ವಿದೇಶ ಮಾರ್ಗವೂ ಕಲೆತು ಒಂದಾಗಿ ಎರಡರಲ್ಲೂ ಒಗ್ಗದವು, ವಕ್ರವಾದವು ಒಟ್ಟು ಹೋಗಿ ಅತ್ಯತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ". ಎಂದು ಹೊಸ ಕವಿತೆಯ ಹೊಸ ಹಾದಿಯನ್ನು ತೋರಿಸಿದರು.

ನವೋದಯ ಸಾಹಿತ್ಯದ ಬಗ್ಗೆ ಹೊಸ ಕಲ್ಪನೆಗಳನ್ನು ಶ್ರೀಯವರು ಹೊಂದಿದ್ದರು. ಕಾವ್ಯದ ಪುನರುಜ್ಜೀವನ(Renaisonce)ದ ಬಗ್ಗೆ ತಮ್ಮ ಆಲೋಚನೆಯನ್ನು ಸ್ಪಷ್ಟಪಡಿಸಿಕೊಂಡಿದ್ದರ ಫಲವೇ 'ಇಂಗ್ಲಿಷ್ ಗೀತೆಗಳು' ಪುನರುಜ್ಜೀವನದ ಲಕ್ಷಣಗಳು ಅವರೇ ಹೇಳುವಂತೆ

"ಪುನರುಜ್ಜೀವನ ಏನೋ ಒಂದು ಬಗೆಯ ಧೈರ್ಯದಿಂದ ಕೂಡಿದ ವಿಚಾರ, ಹೊಸ ಹೊಸ ನಿರ್ಮಾಣ, ಮರುಹುಟ್ಟು, ಆಳವಾದ ಸಮನ್ವಯ ಹೊಸದು–ಹಳತು, ನಮ್ಮದು–ಹೆರರದು, ಎಲ್ಲವನ್ನೂ ಹೊಂದಿಕೆ ಮಾಡುವುದು.... ಅನೇಕ ಸಾಹಿತ್ಯಗಳೊಳಗಿನಿಂದ ಮೊಳೆಯುತ್ತಿರುವ ಹೊಸ ಸಾಹಿತ್ಯ, ಹೊಸ ವಿಚಾರ ಶಕ್ತಿ, ಹೊರ ವಿಷಯಗಳನ್ನು ತಿಳಿಯಲು ಆಸಕ್ತಿ... ಹಿರಿಯರ ಮಾತು ಇರಲಿ, ನಾವು ವಿಚಾರ ಮಾಡೋಣ, ತಿಳಿದು ಕೊಳ್ಳೋಣ, ತಿಳಿದು ನೋಡೋಣ ಎನ್ನುವುದೇ ಪುನರುಜ್ಜೀವನದ ಲಕ್ಷಣ" ಎಂದಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಇಂತಹ ಪುನರುಜ್ಜೀವನದ ಅವಶ್ಯಕತೆ ಇದೆ ಎಂಬುದು ಅವರ ಅಭಿಪ್ರಾಯ.

ಇಂತಹ ಪುನರುಜ್ಜೀವನ ಸಾಧ್ಯವಾಗಬೇಕಾದರೆ ಕನ್ನಡಿಗರು ವಿಶಾಲ ಮನೋಭಾವದವರಾಗಬೇಕು. ಮಡಿವಂತಿಕೆ ಸಲ್ಲದು. ಅವರು ಕನ್ನಡಿಗರಿಗೆ ನೀಡಿದ ಕರೆ ಹೀಗಿದೆ. "ಕನ್ನಡಿಗರ ದೃಷ್ಟಿ ವಿಶಾಲವಾಗಬೇಕು. ಗಾಳಿ, ಬೆಳಕು ಎಲ್ಲೆಲ್ಲಿಂದ ಬರುವುದೋ ಅಲ್ಲಿಂದೆಲ್ಲಾ ಅದನ್ನು ನಮ್ರತೆಯಿಂದ ಭಕ್ತಿಯಿಂದ ಸ್ವಾಗತಿಸಿ, ನಮ್ಮ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕು. ಎಲ್ಲ ದಿಕ್ಕುಗಳಿಂದಲೂ ಆಳವನ್ನು ಅಂದವನ್ನು ತುಂಬಿಕೊಂಡು ಕನ್ನಡ ಮಹಾಕಾವೇರಿಯೂ ಹರಿಯಬೇಕು." ಎಂದು ಸಾರಿದರು. ಅಲ್ಲದೆ 'ಕನ್ನಡ ನಾಡಿಗೆ ಕನ್ನಡವೇ ಗಡಿ ಅನ್ಯಥಾ ಶರಣಂ ನಾಸ್ತಿ' ಎಂಬ ದಿವ್ಯ ಮಂತ್ರವನ್ನು ನೀಡಿ ಇಂತಹ ನುಡಿಯು ಬೆಳೆಯಬೇಕಾದರೆ ಅನ್ಯ ಭಾಷೆ ಹಾಗೂ ಸಾಹಿತ್ಯದ ಸಮನ್ವಯದಿಂದ ಮಾತ್ರ ಸಾಧ್ಯ ಎಂದರು.

ಆದರೆ ಬಿ.ಎಂ.ಶ್ರೀಯವರಿಗೆ ಇಲ್ಲಿನ ಜಾನಪದದ ಸೊಗಡು ಬಹಳ ಆತ್ಮೀಯವಾದದ್ದು. ಪಾಶ್ಚಾತ್ಯರ ಸಾಹಿತ್ಯದಲ್ಲೂ ಅಂತಹ ಜನಪದ ಗೀತೆಗಳ ಸೊಗಡು ಬೆರೆತಿರುವುದನ್ನು ಮನಗಂಡಿದ್ದಾರೆ. "ಸ್ಕಾಟ್, ಬರ್ನ್ಸ್, ವರ್ಡ್ಸ್‌ವರ್ತ್ ಮೊದಲಾದ ಆಂಗ್ಲ ಕವಿಗಳ ಕಾವ್ಯದಲ್ಲಿ ನಾಡ ಹಾಡುಗಳ, ಜಾನಪದ ಗೀತೆಗಳ ಸಂಸ್ಕಾರವನ್ನು ಕಾಣಬಹದು. ಆದರಿಂದ ಅವರ ಕಾವ್ಯದಲ್ಲಿ ಒಂದು ಬಗೆಯಾದ ನಾವೀನ್ಯವುಂಟಾಯಿತು. ನಮ್ಮ ಈಗಿನ ಕನ್ನಡ ಸಾಹಿತ್ಯಕ್ಕೆ ಈ ಸಂಸ್ಕಾರವು ಅವಶ್ಯವಿದೆ. ಸಂಸ್ಕೃತ, ಅಚ್ಚೊತ್ತಿದ ಸಾಹಿತ್ಯದ ಇಂಗ್ಲಿಷ್, ಹಳಗನ್ನಡಗಳ ಪ್ರತಿಬಿಂಬವನ್ನು ತಳೆದ ಸಾಹಿತ್ಯಕ್ಕಿಂತಲೂ ಅಚ್ಚಗನ್ನಡದ ಅಚ್ಚೊತ್ತಿದ ಸಾಹಿತ್ಯದ ಅಗತ್ಯವು ಅಪ್ಪಿಷ್ಟೆಂದು ಹೇಳಬಾರದು. ಕಟ್ಟುಳ್ಳ ಮೈ ಹುಟ್ಟು, ಸವಿಯುಳ್ಳ ನುಡಿ, ತಿಳಿಯಾದ ಬಗೆ ಇವೆಲ್ಲವೂ ಬೇಕು ಈಗಿನ ಕವನಗಳಲ್ಲಿ" ಇಲ್ಲಿ ಶ್ರೀಯವರ ಗರತಿಯ ಹಾಡಿನ ಮುನ್ನುಡಿಯು ಅನ್ವಯವಾಗುತ್ತದೆ.

ಬಿ.ಎಂ.ಶ್ರೀಯವರ 'ಇಂಗ್ಲೀಷ್ ಗೀತೆಗಳು' ಕೃತಿಯ ಬಗ್ಗೆ ಬೇಂದ್ರೆ "ಇಂಗ್ಲೀಷ್ ಗೀತೆಗಳಲ್ಲಿ ಎಲ್ಲವೂ ಹೊಸದು; ಉದ್ದೇಶಪೂರ್ವಕವಾಗಿ ಅಮೂಲಾಗ್ರವಾಗಿ ಹೊಸದು; ಭಾಷೆ ಹೊಸದು, ರೀತಿ ಹೊಸದು, ಛಂದಸ್ಸು ಹೊಸದು, ಮನಸ್ಸು ಮಾಡಿದರೆ, ವ್ಯಾಕರಣ ಶುದ್ಧವಾದ ಹಳಗನ್ನಡದಲ್ಲಿ ಪ್ರಾಚೀನ ಕವಿಗಳಂತೆಯೇ ಪದ್ಯರಚನೆ ಮಾಡಬಹುದೆಂಬುದನ್ನು ಸೂಚಿಸುವುದಕ್ಕೋ ಎಂಬಂತೆ ಗ್ರಂಥದ ಮುಖ ಪತ್ರದಲ್ಲಿ ಬಂದಿರುವ "ಅವಳ ನಿರ್ಮಲ ತೇಜಂ...." ಎಂಬ ಕಂದ ಪದ್ಯವನ್ನು ಬಿಟ್ಟರೆ ಮಿಕ್ಕದೆಲ್ಲವೂ ಹೊಸಗನ್ನಡದಲ್ಲಿ ತರುವುದು ಕಷ್ಟವೆಂಬುದು ನಿಜ. ಆದರೆ ಹಾಗೆಂದು, ಅರ್ಥವಾಗದ ಪ್ರಾಕ್ತನ ಭಾಷೆಯಲ್ಲಿ ಪದ್ಯ ಕಟ್ಟಿದರೆ ಜನತೆಯ ಗತಿಯೇನು? ಹರಿಹರ ಕುಮಾರವ್ಯಾಸಾದಿಗಳು ಹಳಗನ್ನಡವನ್ನು ಬಿಟ್ಟು ನಡುಗನ್ನಡಕ್ಕೆ ತಿರುಗಿ ಅದನ್ನು ಕಾವ್ಯಕ್ಕೆ ತಕ್ಕದ್ದಾಗುವ ಹಾಗೆ ಕಡೆದಂತೆ ಹೊಸಗನ್ನಡವನ್ನು ಪಳಗಿಸಬೇಡವೇ! – ಇದೇ "ಶ್ರೀಯವರ ಮನಸ್ಸಿನ ಹಾರೈಕೆ, ಲೇಖನಿಯ ಸಾಧನೆ" (ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು–ಒಂದು ಅಧ್ಯಯನ–ಪು. ೩೨) ಎಂದಿದ್ದಾರೆ.

ಈ ಲಕ್ಷಣಗಳು ಅವರ ಕವಿತೆಗಳಲ್ಲಿ ಅಭಿವ್ಯಕ್ತಗೊಂಡಿವೆ. ಅವರ ಇಂಗ್ಲೀಷ್‌ನ ಅನುವಾದದ ಶೈಲಿ ಹೀಗಿದೆ.

ಯೌವನಕೆ ಚೆಲ್ಲಾಟ
ಮುಪ್ಪಿಗುಸಿರೆಳೆದಾಟ
ಹುಲ್ಲೆನಗೆ ಯೌವನವು, ಹೆಳವು ಮುಪ್ಪು;
(ಮುಪ್ಪು ಯೌವನ).
ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈಹಿಡಿದು ನಡೆಸೆನ್ನನ್ನು
ಇರುಳು ಕತ್ತಲೆಯ ಗವಿ; ಮನೆದೂರ; ಕನಿಕರಿಸಿ

ಕೈ ಹಿಡಿದು ನಡೆಸೆನ್ನನು.

ಹೇಳಿ ನನ್ನಡಿಯಿಡಿಸು; ಬಲುದೂರ ನೋಟವನು

ಕೇಳೆನೊಡೆಯೆ – ಸಾಕು ನನಗೊಂದು ಹೆಜ್ಜೆ. (ಪ್ರಾರ್ಥನೆ).

ಸ್ವತಂತ್ರ ಕವಿತೆಯ ಶೈಲಿಯೂ ಅಷ್ಟೇ ಮನೋಹರವಾಗಿದೆ. ಇವರ 'ಕಾಣಿಕೆ' ಒಂದು ಸ್ವತಂತ್ರ ಕವಿತೆ.

ಮೊದಲು ತಾಯ ಹಾಲ ಕುಡಿದು

ಲಲ್ಲೆಯಿಂದ ತೊದಲಿ ನುಡಿದು

ಕೆಳೆಯರೊಡನೆ ಬೆಳೆದು ಬಂದ

ಮಾತದಾವುದು

ಸವಿಯ ಹಾಡ, ಕಥೆಯ, ಕಟ್ಟಿ,

ಕಿವಿಯಲೆರೆದು, ಕರುಳ ತಟ್ಟಿ

ನಮ್ಮ ಜನರು, ನಮ್ಮ ನಾಡು,

ಎನಿನಿತಾವುದು

ನಮ್ಮ ಕವಿಗಳೆಂಬ ಕೋಡು

ತಲೆಗದಾವುದು (ಸಮಾಲೋಕನ–ಪು. ೧೪–೧೫)

ಬಿ.ಎಂ.ಶ್ರೀಯವರು ಕಾವ್ಯದ ವಸ್ತುವಿನ ಜೊತೆಗೆ ಅಲ್ಲಿನ ಛಂದಸ್ಸಿನ ಅಂಶವನ್ನು ಕನ್ನಡದಲ್ಲಿ ಪ್ರಯೋಗಿಸಿದ್ದಾರೆ. ಅವರೇ ಹೇಳುವಂತೆ 'Burns's Stonza' ಮಾದರಿಯನ್ನು ಬಳಸಿರುವುದಾಗಿ ಹೇಳಿದ್ದಾರೆ. ಅದರ ಮಾದರಿ –

ನಿಮ್ಮ ಪಿತೃಗಳು ಧೀರರು – ತೆರೆತೆರೆಗೆ

ಹೊಮ್ಮುವರು ಹುರಿಗೊಳಿಸಲು; (ಇಂಗ್ಲೆಂಡ್ ನಾವಿಕರು)

ಇದೇ ಮಾದರಿಯಲ್ಲಿ ಡಿ.ವಿ.ಜಿ.ಯವರು ರಚಿಸಿದ್ದಾರೆ ಆದರೆ ಇದರಲ್ಲಿ ಆದಿ ಪ್ರಾಸವನ್ನು ಬಳಸಿದ್ದಾರೆ. ಮಾದರಿ –

ಮಣಿಪುರಕೆ ಬಂದುವಾಗ – ಗಿಣಿಗಳು

ದಣಿದು ಮಲಗಿದವು ಬೇಗ.

(ಅರ್ಜುನ ಜೋಗಿಯ ಹಾಡು)

ಈ ಮಾದರಿಯ ಹೊಸ ಪ್ರಯೋಗಗಳು ಶ್ರೀಯವರ ಮುಂದಿನ ಕೃತಿಗಳಲ್ಲಿ ಕಾಣಬಹುದಾಗಿದೆ. ಬಿ.ಎಂ.ಶ್ರೀಯವರು ಇಂಗ್ಲೀಷ್ ಗೀತೆಗಳನ್ನು ಅನುವಾದಗೊಳಿಸುವಾಗ ಕನ್ನಡದ ಪರಿಸರಕ್ಕೆ ಹೊಂದಿಸಿಕೊಂಡು ಉತ್ಕೃಷ್ಟವಾದ ಹಾಗೂ ಸ್ವಂತಿಕೆ ಎಂಬಂತೆ ಅನಿಸುವ ಹಾಗೆ ರಚಿಸಿದ್ದಾರೆ. ದುಃಖ ಸೇತು ಕವಿತೆಯ ಈ ಭಾವವನ್ನು ಗಮನಿಸಿ.

Alls! For the Rarity
of Christion charity
under the sun!

ಕನ್ನಡದ ಅನುವಾದ:-

ಆಹ, ಎಲ್ಲಡಗಿತೋ
ಆರ್ಯಧರ್ಮದ ಕರುಣ,
ಆರ್ಯ ಜನಗಳ ಮರುಕ,
ಉರಿಯುವನೆ ಬಿಲ್ಲ!

ಶ್ರೀಯವರ ಹೊಸಹಾದಿ ಮುಂದಿನವರಿಗೆ ಪ್ರೇರಣೆಯಾಯಿತು. ಹೊಸ ಮಾದರಿಯ ಕವಿತೆಗಳು ಖಚಿತ ರೂಪದಲ್ಲಿ ದೊರೆಯಿತು. ಅವರು ಸೃಷ್ಟಿಸಿದ ಹೊಸ ಹಾದಿ ರಾಜಮಾರ್ಗವಾಯಿತು. ಈ ಸಾಧನೆಯನ್ನು ಕುರಿತು.

"…..ಕನ್ನಡದೊಳಿಂದಾದಾವ
ಕಲಕಂಠ ಕೇಕುತಿದೆ ಅದರ ಗಾನದೊಳಿಲ್ಲ
ತೋರುತಿದೆ ನೀವು ತೆರೆದಾ ನವ್ಯ ಅಕ್ಲುಲ್ಲ
ಧೀರಗತಿ, ಸುವಿಶಾಲ ವಿಶ್ವವಿಸ್ತರ ಭಾವ,
ನುಡಿದು ಕುಲಿಸಿದಿರಿ; ನುಡಿಯದೆ ಮತ್ತೆ ಕಲಿಸಿದಿರಿ;
ದುಡಿದು ಕಲಿಸಿದಿರಿ; ಮನದರಕೆಗಳನೆಚ್ಚರಿಸಿ
ಎಳೆಯರೆದೆಯಲಿ ಹಾಡುವಾಸೆಯನು ಸುಳಿಸಿದಿರಿ…"

(ಮಕಾರ-ಪು.೪೩-ಇಂಗ್ಲೀಷ್ ಗೀತೆಗಳು)

ಇವರ ಕಾವ್ಯದ ಆಕರ್ಷಣೆ ಹೇಗಿತ್ತೆಂದು ತೀ.ನ.ಶ್ರೀಯವರು ಹೀಗೆ ಹೇಳಿದ್ದಾರೆ. "ಅವರು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಒಂದು ಮಾಸಪತ್ರಿಕೆಯಲ್ಲಿ ಅಚ್ಚಾಗಿದ್ದ ಕವನವು ಅವರ ಕಾವ್ಯ ರಚನೆಗೆ ಪ್ರೇರಣೆಯಾಯಿತಂತೆ. ಆ ಪದ್ಯದ ಸಾಲುಗಳು ಇಂತಿವೆ.

'ಹಿಡಿದು ಮಂಜು ಬೀಳುತಿತ್ತು, ಚುಕ್ಕಿ ಕಣ್ಣು ಮಿಟುಕುತಿತ್ತು;
"ಕುಡಿಯೊ, ಕಂದ ಕುಡಿಯೊ" ಎಂದು ನುಡಿವ ಮಾತು ಕಿವಿಗೆ ಬಿತ್ತು;
ತಿರುಗಿ ನೋಡಲೊಬ್ಬಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು
ನೊರೆಯ ಬಿಳುಪು ಕುರಿಯ ಮರಿಯ ತಲೆಯ ತಡುವುತ್ತಿದ್ದಳು...'

"ಅದರ ರಚನಾ ಶೈಲಿ ತಾನು ಹಿಂದೆ ಓದಿ ಬಂದಿದ್ದ ಕಾವ್ಯಕ್ಕಿಂತ ಭಿನ್ನವಾಗಿತ್ತು. ಚಿಕ್ಕಂದಿನಿಂದ ಪಠ್ಯಪುಸ್ತಕಗಳಲ್ಲಿ ನಾವು ಓದಿ ಬಳಕೆಮಾಡಿಕೊಂಡಿದ್ದ ಷಟ್ಪದಿ, ಕಂದ, ವೃತ್ತ– ಈ ಯಾವುದೊಂದು ಪದ್ಯಜಾತಿಗೂ ಸೇರಿರದಿದ್ದರೂ ತಾಳಕ್ಕೆ ಹೊಸಗನ್ನಡದ ಮಾತುಗಳು, ಹುಡುಗರ ಅನುಭವಕ್ಕೆ ಕೂಡ ಸಿಲುಕುವ ವಿಷಯ ಸರಣಿ– ಇದನ್ನು ಕಂಡು ನನ್ನ ಎಳೆಯ ಮನಸ್ಸು ಈ ಪದ್ಯದ ಕಡೆಗೆ ಹೆಚ್ಚಾಗಿ ಹರಿಯಿತು. ಇಂಥ ಕವನಗಳು ಇನ್ನೂ ಉಂಟೆ? ಇದನ್ನು ಬರೆದವರು ಯಾರು? ಎಂದು ಆಸೆ ಪಟ್ಟೆ...." (ಕಂನಾಡ ಸಾಹಿತ್ಯಜ್ಞರ ಆತ್ಮಕಥನ – ಪು.೨)  ಎಂದಿದ್ದಾರೆ.

ಹೀಗೆ ಬಿ.ಎಂ.ಶ್ರೀಯವರು ಹೊಸಗನ್ನಡ ಸಾಹಿತ್ಯಕ್ಕೆ ಒದಗಿಸಿದ ಹೊಸ ಮಾರ್ಗಕ್ಕೆ ಹೊಸ ಚಿಂತನೆಗಳನ್ನು ಬೆರೆಸಿದವರು ವರಕವಿ ಬೇಂದ್ರೆಯವರು. ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಬೇಂದ್ರೆಯವರು "ಕನ್ನಡ ನುಡಿಯ ಮಾಮರವು ಚಿಗುರುತ್ತಲಿದೆ; ನನೆಕೊನೆವೋಗುತ್ತಲಿದೆ; ಹೂತು ಕಾತು ಹಣ್ಣು ಬಿಡುತ್ತಲಿದೆ... ಹೊಸ ಜೀವನದ ಅಂದಚೆಂದಗಳನ್ನು ಸೊಬಗು ಸೊಗಸುಗಳನ್ನು ಭವ್ಯತೆ ದಿವ್ಯತೆಗಳನ್ನು ಯಾವ ಹಳೆಯ ಸಾಹಿತ್ಯವೂ ಯಥಾರ್ಥವಾಗಿ ಬಣ್ಣಿಸಲರಿಯದು... ಹಿಂದಿನವರು ಭಾಷೆಯಲ್ಲಿ 'ದೇಶಿ'ಯನ್ನು 'ಕವಿರಾಜಮಾರ್ಗ'ಕ್ಕೆ ಎಳೆದು ತರಬೇಕೆಂದರು; ಇಂದಿನವರು 'ದೇಶಿ'ಯ 'ಕವಿರಾಜಮಾರ್ಗ'ಗಳನ್ನು ಸಿದ್ಧಪಡಿಸುತ್ತಲಿದ್ದಾರೆ. ಇದೇನು ಲೋಕ ವಿರುದ್ಧವಾದ ಆಚರಣೆಯಲ್ಲಿ, ಪ್ರಪಂಚದಲ್ಲಿ ಹೀಗೆಯೇ ಎಲ್ಲ ಕಡೆಗೂ ನಡೆದು ಬಂದಿವೆ. ಈಗಿನವರ ಭಾವ ಪ್ರಪಂಚದ ವಿಸ್ತಾರದೊಡನೆ ಛಂದಸ್ಸು ಹಿಗ್ಗಿದೆ," ಎಂದಿದ್ದಾರೆ. ('ಹಕ್ಕಿ ಹಾರುತ್ತಿದೆ' –  ಮುನ್ನುಡಿ.)

ಬೇಂದ್ರೆಯವರ ಈ ಚಿಂತನೆಗಳು ಅವರ ಕವಿತೆಗಳಲ್ಲಿ ವ್ಯಕ್ತವಾಗಿದೆ. ಅವರ 'ಹಕ್ಕಿ ಹಾರುತ್ತಿದೆ ನೋಡಿದಿರಾ!', 'ತೊತ್ತಿನ ಚೀಲ'ದಂತಹ ಕವಿತೆಗಳು ಇದಕ್ಕೆ ಉದಾಹರಣೆ. ಈ ಕವಿತೆಗಳ ಬಗ್ಗೆ ತೀನಂಶ್ರೀಯವರು ಹೀಗೆ ಹೇಳಿದ್ದಾರೆ. "ಹಕ್ಕಿ ಹಾರುತಿದೆ" ಎಂಬ ಪದ್ಯ ಕನ್ನಡ ಕವಿತೆಯಲ್ಲಿ ಒಂದು ಹೊಸ ತಂತಿಯನ್ನು ಮೀಟಿದೆ. ಇದುವರೆಗೂ ಕಾವ್ಯವೂ ಸಾಮಾನ್ಯವಾಗಿ ಭೂಮಿಯ ಮೇಲೆಯೇ ಮಾನವ ಹೃದಯದಲ್ಲಿಯೇ ಸಂಚರಿಸುತ್ತಿತ್ತು. ಕೇವಲ ವಿಶ್ವದ ಕಡೆಗೆ ಅದರ ದೃಷ್ಟಿ ಹರಿದಿರಲಿಲ್ಲ; ಒಂದೇ ಸಲಕ್ಕೆ ವಿಶ್ವವನ್ನೆಲ್ಲಾ ಒಳಕೊಳ್ಳುವಷ್ಟು ವಿಶಾಲವಾಗಿಯೂ ಇರಲಿಲ್ಲ; ಸೂರ್ಯ ಚಂದ್ರ ನಕ್ಷತ್ರಗಳ ಮಾತು ಬಂದರೂ ಆ ಪ್ರಸ್ತಾವಕ್ಕೆಲ್ಲಾ ಭೂಮಿಯೇ ಕೇಂದ್ರವಾಗಿತ್ತು. "ಹಕ್ಕಿ ಹಾರುತಿದೆ ನೋಡಿದಿರಾ" ಕವಿತೆಯಲ್ಲಿ ಈ ದೃಷ್ಟಿ ಹೊರಳಿತು, ಕಾವ್ಯದ ಸಂಕೋಲೆಗಳು ಮುರಿದವು ಎಂದಿದ್ದಾರೆ". ಅವರ ಕಾಲದ ಪಕ್ಷಿಯ ಕಲ್ಪನೆ ಹೀಗಿದೆ.

'ನೀಲಮೇಘ ಮಂಡಲ ಸಮ ಬಣ್ಣಾ
ಮುಗಿಲಿಗೆ ರೆಕ್ಕೆಗಳೊಡದವೊ ಅಣ್ಣಾ!
ಚಿಕ್ಕೆಯ ಮೂಲೆಯ ಸೆಕ್ಕಿಸಿಕೊಂಡು
ಸೂರ್ಯ ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ! ನೋಡಿದಿರಾ?

ಇವರ 'ತುತ್ತಿನ ಚೀಲ'ದ ವಸ್ತುವನ್ನು ಕುರಿತು 'ಬಡತನದ ಮೂಗುಬ್ಬಸವನ್ನು ಇದಕ್ಕಿಂತ ಮೇಲಾಗಿ ವ್ಯಕ್ತಪಡಿಸುವುದು ಹೇಗೆ!... ಇಂದಿನ ಆರ್ಥಿಕ ಸಂಗ್ರಾಮದ ತತ್ವವು ಈ ಕವನದಲ್ಲಿ ಮೂರ್ತಿಗೊಂಡಿದೆ. ಅಲ್ಪಾವಕಾಶದ ಕಿರಿಮೆ ಚರಣಗಳಲ್ಲಿ ಕಿರಿಯ ಮಾತುಗಳಲ್ಲಿ ಹಿರಿಯ ಘೋರಸತ್ಯವೊಂದು ವ್ಯಕ್ತವಾಗಿದೆ. ಇಲ್ಲಿಯ ನುಡಿ ಬಹು ಹಿಡಿತದಲ್ಲಿದೆ" ಎಂದಿದ್ದಾರೆ. ಪದ್ಯದ ಮಾದರಿ ಕೆಳಗಿದೆ.

"ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ
ತುತ್ತುವೆನೆಂದು
ಗದರುತ್ತಿಹುದು.
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು"(ಹಕ್ಕಿ ಹಾರುತಿದೆ –ಪು,೧೦)

ಇದೇ ಸಂಕಲನದಲ್ಲಿರುವ ಮತ್ತೊಂದು ವಿಶಿಷ್ಟವಾದ ಕವಿತೆಯೆಂದರೆ 'ಕುಣಿಯೋಣು ಬಾರ'. ಜಾನಪದ ಶೈಲಿಯ ಕವಿತೆ ಇದಾಗಿದೆ. ಅನಂತನಾರಾಯಣರವರು ಹೇಳುವಂತೆ "ಕನ್ನಡದ ಹೊಸಕವಿತೆಯಲ್ಲಿ ಮೊತ್ತಮೊದಲ ಬಾರಿಗೆ ಹಳ್ಳಿಯ ಹಾಡುಗಳ ಮುಟ್ಟುಗಳಿಗೆ ಸಾಹಿತ್ಯದಲ್ಲಿ ಮುಖ್ಯ ಸ್ಥಾನವನ್ನು ದೊರಕಿಸಿಕೊಟ್ಟ ಕೀರ್ತಿ ಗೆಳೆಯರ ಗುಂಪಿನ ಕವಿಗಳದು, ಅವುಗಳನ್ನು ಪರಿಶೋಧಿಸಿ, ಅಭ್ಯಾಸ ಮಾಡಿ, ಅವುಗಳ ಹಿರಿಯ ಗುಣವನ್ನು ಗುರುತಿಸಿ, ಪುನರ್ಜನ್ಮ ಕೊಟ್ಟುದೂ ಒಂದು. ಇದು ಗುಂಪಿನ ಹಿರಿಯ ಸಾಧನೆ" ಎಂದಿದ್ದಾರೆ. ಈ ಕವಿತೆ ಮುಂದಿನ ಅನೇಕ ಕವಿಗಳಿಗೆ

ಪ್ರೇರಣೆಯಾಯಿತು. ಹಲಸಂಗಿ ಚೆನ್ನಮಲ್ಲಪ್ಪ, ಸಿಂಪಿಲಿಂಗಣ್ಣ, ಬೇಂದ್ರೆ ಮುಂತಾದವರು ಈ ಮಾದರಿಯಲ್ಲಿ ಕವಿತೆಗಳನ್ನು ರಚಿಸಿದರು. 'ಕುಣಿಯೋಣ ಬಾರ' ಕವಿತೆ ಸಾಲುಗಳಿಂತಿವೆ –

'ಕಾಗುಣಿತ

ಬರಿಯ ಗಣಿತ

ಯಾಕ ಡೊಂಬರ ಮಣಿತ

ಸುಗ್ಗಿಯ ಸಿರಿ ಕುಣಿತ। ಕುಣಿಯೋಣು ಬಾ

ತರಗೆಲಿ ಜಿಗಿಧಾಂಗ

ಚಿಗರಲಿ ಚಿಗಿಧಾಂಗ

ನಸಿಕೊನೆ ಮುಗಿಧಾಂಗ। ಕುಣಿಯೋಣು ಬಾ

ಹೊಂಗ್ಯಾದಿನಿ ಹೊಡಿ

ಮಿಡಿನಾಗರ ಹೆಡಿ

ಹ್ಯಾಂಗೊಮ್ಮೆ ತೂರಾಡಿ। ಕುಣಯೋಣು ಬಾರ॥ (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೧೫೩)

ಬೇಂದ್ರೆಯವರು ಆರಂಭದಲ್ಲಿ ಬರೆದ ಕವಿತೆಗಳಲ್ಲಿ ಆದಿ ತ್ರಾಸವಿದೆ. ಅವರೇ ಹೇಳುವಂತೆ "ಹೊಸಗನ್ನಡ ಭಾಷೆಯ ಕಾವ್ಯ ರೂಪಗೊಂಡಿರಲಿಲ್ಲ. ಅದರ ಧಾಟಿ ತಡವರಿಸುತ್ತಿತ್ತು." ಇಂತಹುದೇ ಆದ ಲಕ್ಷಣ ಅವರ ಮೊದಲ ಕವಿತೆಗಳಲ್ಲಿವೆ. 'ಭಾವ ಹೊಸತಾದರೂ ಅದರ ರೂಪ ಹಳತು' ಎನ್ನುವ ಗುಣ ಈ ಕವಿತೆಯಲ್ಲಿವೆ.

'ಹುಣ್ಣಿಮೆಯ ಚಂದ್ರಮನು ಹಲವು ಸಲ ಕೃತ್ತಿಕೆಯ।

ಹೆಣ್ಣಿಗಾನಂದವನ್ನಿತ್ತರೂ, ಹಲವು ಸಲ

ಹಣ್ಣೆಲೆಗಳುದುರಿ ಬನ ಹಸಿರಾದರೂ ತಿರುಗಿ, ನಿದ್ರಿಸುವೆ ನಿನ್ನ ಒದಿಯಾಳ್'

(ಕಂನಾಡ ಸಾಹಿತ್ಯಜ್ಞರ ಆತ್ಮಕಥನ–ಪು. ೧೧೯).

ಸಂಧಿಕಾಲದ ಕವಿತೆಗಳ ಸ್ವರೂಪವನ್ನು ಕುರಿತು ವಿ.ಕೃ.ಗೋಕಾಕರು "ಹಳೆಯ ಛಂದಸ್ಸಿನ ಪರಂಪರೆ ಇನ್ನೂ ತೊಲಗಿರಲಿಲ್ಲ. ಆದರೆ ಹಳೆಯ ಛಂದಸ್ಸಿನಲ್ಲಿಯೇ ಆಗಲಿ, ಅಲ್ಲಲ್ಲಿ ಆಂಗ್ಲ ಕವನಗಳ ಅನುವಾದಗಳೂ ನೂತನ ದೃಷ್ಟಿಯುಳ್ಳ ಕವನಗಳೂ ಕಾಣಿಸಿಕೊಳ್ಳುತ್ತಿದ್ದವು... ಈ ಅವಧಿಯಲ್ಲಿ ರಚನೆಗೆ ಪ್ರಾರಂಭಿಸಿದ ಕವಿಗಳೆಲ್ಲ ಬಹುಶಃ ಷಟ್ಪದಿಗೆ ಅಲ್ಪಾವಧಿಯಾದರೂ ಶರಣಾಗತರಾಗಿ ಮುಂದೆ ಹೊರ ಹೆಜ್ಜೆಯಿಟ್ಟರು" ಎಂದಿದ್ದಾರೆ. ಈ ಲಕ್ಷಣ ಅಂದಿನ ಎಲ್ಲಾ ಕವಿಗಳ ಕವಿತೆಯಲ್ಲಿ ಕಾಣಬಹುದು. ಬೆಟಗೇರಿ ಕೃಷ್ಣಶರ್ಮನೂ ಪದ್ಯದ ಸಾಲುಗಳನ್ನು ಗಮನಿಸಿ.

“ಒಡೆಯ ನೀನೆಂದರಿಯದೇ ನಿ–
ನ್ನಡಿಯ ಭಜನೆಯ ಮರೆತು ಬಿಟ್ಟೆನು।
ಮಡದಿ ಮಕ್ಕಳ ಮೋಹದಲ್ಲಿ ಮದಾಂಧನಾಗಿರುತ
ಪೊಡವಿಯಂ ನಡೆದಿರುವ ಕಾಲಕೆ।
ಮಡದಿಯಾರ್, ಮೇಣ್ ಮಕ್ಕಳುಗಳಾರ್।
ಪೊಡವಿಯೊಡೆಯನೆ ಕಡೆಗೆ ನೀನಿರದಾರು ನನಗಿಹರೋ
(ಭಕ್ತಿ ಕುಸುಮಾವಳಿ, ಪ್ರಭಾತ ಮೇ, ಜೂನ್ ೧೯೧೯)

ಬೇಂದ್ರೆಯವರು ಹಾಕಿಕೊಟ್ಟ ಹೊಸಮಾರ್ಗವು ಅನೇಕರಿಗೆ ಮಾರ್ಗವಾಯಿತು. ವಿ.ಕೃ.ಗೋಕಾಕ್ ಹೇಳುವಂತೆ ‘ಹೊಸ ಕವಿತೆಯ ಹಾಗೂ ಶ್ರೀ.ಬೇಂದ್ರೆಯವರ ಪ್ರತಿಭೆಯಿಂದ ಆಕರ್ಷಿತರಾಗಿ ಪ್ರಸ್ತುತ ಲೇಖಕನಂತೆ(ಗೋಕಾಕರು) ಕಾಲೇಜಿನ ಕೆಲವು ವಿದ್ಯಾರ್ಥಿಗಳು ಬೇಂದ್ರೆಯವರೆಡೆಗೆ ಸ್ಫೂರ್ತಿಗಾಗಿ ತಿರುಗಿದರು.... ಈ ಅವಧಿಯಲ್ಲಿ ಅನಭಿಷಿಕ್ತ ಪ್ರಾಧ್ಯಾಪಕರಾಗಿ ಶ್ರೀ.ಬೇಂದ್ರೆಯವರು ಕಾಲೇಜಿನ ಅನೇಕ ವಿದ್ಯಾರ್ಥಿಗಳಿಗೆ ಜೊತೆಯಾಗಿ ಸ್ಫೂರ್ತಿದಾಯಕರಾದರು” ಎಂದಿದ್ದಾರೆ. ಇದರ ಜೊತೆಗೆ ಅವರ ಗೆಳೆಯರ ಗುಂಪಿಗೂ ಬೇಂದ್ರೆಯವರೇ ಮಾದರಿಯಾದರು. ವಿ,ಕೃ.ಗೋಕಾಕರು ಹೊಸ ಕಾವ್ಯಶೈಲಿಯನ್ನು ಸ್ವೀಕರಿಸುತ್ತಾ ಹೀಗೆ ಹೇಳಿದ್ದಾರೆ.

ಹೊಸದೆಲ್ಲ ಹುಟ್ಟಿ ಬರಲಿ
ಬೇಡಯ್ಯ ಬಂಧಗಳ ಬಂಧಿವಾಸ
ಸಾಕಯ್ಯ ವೃತ್ತಗಳಾವರ್ತ
ನಿನ್ನ ಮಣಿತವಿರಲಿ ಸಮುದ್ರದ ಖಣಿತದಂತೆ.

(ಸಾಹಿತ್ಯ ಸಂಶೋಧನ–ಪು. ೧೮೧–೧೮೨)

“ನಿನ್ನ ಕಿನ್ನರಿಯಿಂದ ಸುರಗೇಯ ಚಿಮ್ಮಿರಲು.” ಎಂಬಂತೆ ಕೀರ್ತಿನಾಥ ಕುರ್ತುಕೋಟಿಯವರಂತೆ ಅನೇಕ ಧಾರವಾಡದ ಕಿರಿಯ ಕವಿಗಳು ಅಂದು ಬೇಂದ್ರೆಯವರಿಗೆ ಅರ್ಪಿಸಿದ ಕವಿತೆಯೇ ಅವರು ಮುಂದಿನ ಪೀಳಿಗೆಗೆ ನೀಡಿದ ಸ್ಫೂರ್ತಿಯನ್ನು ಸಾರುತ್ತದೆ.

“ಕನ್ನಡದ ಬದುಕೆಲ್ಲ ಬರವ ಹಾರೈಸಿತ್ತು.

* * * *

ನೀ ಬಂದೆ

ಕಾವ್ಯ ನಂದನಕೆಯೆ ವಸಂತ ಪ್ರೇರಣೆಯಂತೆ,

ನುಡಿನುಡಿಯು ನಗುತ್ತಿತ್ತು ತುಂಬಿರುವ ಒಲವೆಂದೆ

* * * *

ಇರುಳು ಕಾಲ್‌ದೆಗೆದಿತ್ತು

ಮೂಡಲದ ಮನೆಯಿಂದ ಬೆಳಕುಕ್ಕಿ ಬಂದಿರಲು

ಹೀಗೆ ಕನ್ನಡ ಸಾಹಿತ್ಯದಲ್ಲಿ ಭಾವಗೀತೆಯು ಪಾಶ್ಚಾತ್ಯ ಪ್ರಭಾವದಿಂದ ರೂಪು ಪಡೆದು ತನ್ನದೇ ಆದ ಸ್ವಂತಿಕೆಯನ್ನು ಮೈಗೂಡಿಸಿಕೊಂಡು ವಿಶಿಷ್ಟವಾದ ಸಾಹಿತ್ಯ ಪ್ರಕಾರವಾಗಿ ಕಾಣಿಸಿಕೊಂಡಿತು.

## ೫. ಕಥನಕಾವ್ಯ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ಕಥನಕಾವ್ಯ' ಪ್ರಕಾರವು ವಿಶಿಷ್ಟವಾದದ್ದು. ಜನಪದ ಕಾವ್ಯದಲ್ಲಿ ಈ ಮಾದರಿಯ ಕಾವ್ಯಗಳು ಲಭ್ಯವಾದರೂ, ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯ ಲಭ್ಯವಾಗಲಿಲ್ಲ. ಕೆರೆಗೆ ಹಾರ, ಗೋವಿನ ಹಾಡಿನಂತಹ ಮಾದರಿಗಳು ಬಹಳ ಪ್ರಸಿದ್ಧವಾದವು. ಆದರೆ ಈ ಪ್ರಕಾರವನ್ನು ಒಂದು ಗಂಭೀರ ಸಾಹಿತ್ಯವಾಗಿ ಪರಿಗಣಿಸಲಿಲ್ಲ. ನೀತಿ ಹೇಳುವ ಮುಖ್ಯ ಉದ್ದೇಶ ಈ ಕಥನ ಕಾವ್ಯದ್ದು.

ನವೋದಯ ಸಾಹಿತ್ಯ ಕಾಲದ ಜನರ ಮನಸ್ಥಿತಿ ಹೇಗಿತ್ತೆಂದರೆ ಇಂಗ್ಲಿಷ್ ಸಾಹಿತ್ಯದಲ್ಲಿ ವಿಶೇಷತೆ, ಸೊಬಗು ಇದೆ ಎಂದು. ಆದ್ದರಿಂದ ಕಥನಕಾವ್ಯದ ಹೊಸ ಮಾದರಿ ಹೊಸಗನ್ನಡ ಸಾಹಿತ್ಯವನ್ನು ಪ್ರವೇಶಿಸಿತು. ಈಗಾಗಲೇ ಚರ್ಚಿಸಿದಂತೆ ಕನ್ನಡ ಜನಪದ ಸಾಹಿತ್ಯದಲ್ಲಿ ಗೋವಿನ ಹಾಡು, ಜನಪದ ಮಹಾಕಾವ್ಯ ಹಾಗೂ ಲಾವಣಿಗಳು ಇಂತಹ ಮಾದರಿಯನ್ನು ಹೊಂದಿದ್ದವು. ಆದರೆ ಇಂಗ್ಲಿಷ್ ಕಥನ ಕಾವ್ಯದ ಶೈಲಿ ಹಾಗೂ ವಸ್ತು ಇಲ್ಲಿನ ಜನರನ್ನು ಹೆಚ್ಚು ಆಕರ್ಷಿಸಿತು.

೧೯೦೦ರ ವೇಳೆಗಾಗಲೇ ಪಂಜೆಮಂಗೇಶರಾಯರು ಕಥನಕಾವ್ಯಗಳನ್ನು ರಚಿಸಲಾರಂಭಿಸಿದ್ದರು ಎನ್ನಲಾಗಿದೆ. ಇವರ 'ಕಡೆಕಂಜಿ' ಆರಂಭದ ಕಥನಕಾವ್ಯದಲ್ಲಿ ಒಂದು. ಇದು ವರ್ಡ್‌ವರ್ತ್‌ನ 'The last of the flock' ನ ಅನುವಾದವಾಗಿದೆ. ಆದರೆ ಇದು ಗೋವಿನ ಹಾಡು ಶೈಲಿಯಲ್ಲಿದೆ. ಇವರ ನಂತರದಲ್ಲಿ ೧೯೦೩ರ ಸುಹಾಸಿನಿ ಪತ್ರಿಕೆಯಲ್ಲಿ ಪ್ರಕಟವಾದ 'ಕೊಳಲ ಜೋಗಿ' ಕಥನ ಕಾವ್ಯವು ಪ್ರಕಟಗೊಂಡಿದೆ. ಇದನ್ನು ೧೯೦೧ರಲ್ಲಿಯೇ ಎಂ.ಎನ್.ಶ್ರೀನಿವಾಸರಾವ್‌ರವರು ಬ್ರೌನಿಂಗ್‌ನ 'The Pied Piper of Hamelin' ಎಂಬುದರ ರೂಪಾಂತರಿಸಿದ್ದರು. ೧೭ನೇ ಶತಮಾನದ ಜರ್ಮನ್‌ನ ಕತೆಯನ್ನು ಆಧರಿಸಿ ಬ್ರೌನಿಂಗ್ ಈ ಕಥನಕಾವ್ಯವನ್ನಾಗಿಸಿ ೧೯ನೇ ಶತಮಾನದಲ್ಲಿ ರೂಪಾಂತರಿಸಿದನು. ಮೂಲದಲ್ಲೂ ಇದೇ ಇಲಿಗಳ ಕಾಟ ಇದೆ. ಅಂತ್ಯದಲ್ಲಿನ ಕತೆಯ ಭಾಗವನ್ನು ಬ್ರೌನಿಂಗ್ ಬದಲಾಯಿಸಿದ್ದಾನೆ. ಕಿಂದರಿಜೋಗಿಯು ಮಕ್ಕಳನ್ನು ಮಾಯಾಲೋಕಕ್ಕೆ ಕರೆದೊಯ್ಯುವ

ಸಂದರ್ಭದಲ್ಲಿ ಮೂಲದಲ್ಲಿ ಮೂರು ಮಕ್ಕಳು ಉಳಿದುಕೊಳ್ಳುತ್ತಾರೆ. ಕುಂಟ, ಕುರುಡ ಹಾಗೂ ಕಿವುಡ ಮಾತ್ರ ಉಳಿಯುತ್ತಾರೆ. ಬ್ರೌನಿಂಗ್‌ನಲ್ಲಿ ಕುಂಟ ಮಾತ್ರ ಉಳಿಯುತ್ತಾನೆ. ಶ್ರೀನಿವಾಸರಾವ್‌ರವರು ಇದೆ ಅಂಶವನ್ನು ಸ್ವೀಕರಿಸಿದ್ದಾರೆ. ೧೯ನೇ ಶತಮಾನದ ಪಾರ್ಲಿಮೆಂಟ್ ವ್ಯವಸ್ಥೆ, ಅಲ್ಲಿನ ಆರ್ಥಿಕ, ಸಾಮಾಜಿಕ ಹಾಗೂ ಸರ್ಕಾರ ಕಾರ್ಯನಿರ್ವಹಿಸುವ ಬಗೆಯನ್ನು ತನ್ನ ಕಾವ್ಯದ ಮೂಲ ಉದ್ದೇಶವಾಗಿಟ್ಟುಕೊಂಡು ಈ ಕಥನ ಕಾವ್ಯವನ್ನು ಬರೆದಿದ್ದಾನೆ. ಶ್ರೀನಿವಾಸರಾವ್‌ರವರ ರೂಪಾಂತರದ ಭಾಗ ಹೀಗಿದೆ:-

"ಮನೆಯನು ಕಾಣನು; ಮಟವ ಕಾಣನು,
ದಿನವ ಕಳೆವನು ಮರದ ಕೆಳಗೆಯೆ,
ಮನಕೆ ಬಂದಾವೂರ ಸೇರುವ
ನಿನನು ಮುಳುಗುವ ಸಮಯದೆ
ಬಟ್ಟೆಯಿಲ್ಲವು ಹೊದೆಯಲೆಂದೊಡೆ
ಚಿಟ್ಟೆ ಬಣ್ಣದ ಚಿರತೆ ತೊಗಲನು
ಉಟ್ಟು, ತಿರುಗುವ ಕೊಳಲಜೋಗಿಗೆ
ಪಟ್ಟಭೂಮಿಯೆ ಹಾಸಿಗೆ"(ಸುಹಾಸಿನಿ ೧೯೦೩-ಜೂನ್)

ಇದೆ ಕಾವ್ಯವನ್ನು ಕುವೆಂಪುರವರು ೧೯೩೬ರಲ್ಲಿ ರೂಪಾಂತರಿಸಿದ್ದಾರೆ. ಒಂದು ಕವಿತೆಯ ಎರಡು ಮಾದರಿಗಳು ಇಲ್ಲಿ ಕಾಣಿಸುತ್ತವೆ. ಕುವೆಂಪುರವರ ಕಾವ್ಯಶೈಲಿ ಹೀಗಿದೆ-

ಇಂಗ್ಲಿಷ್‌ನ ಭಾಗ:

"And in did come the straight figure!
His Queer long coat, from heel to head,
Was half of yellow and half of red
And he himself was tall and thin,
With sharp blue eyes, each like a pin,
And light loose hair, yet swarthy skin,
No tuft on cheek nor beard on chin,
But lips where smiles went out and in,
There was no guessing his kith and kin"

ಈ ಭಾಗವನ್ನು ಕುವೆಂಪುರವರು ಹೀಗೆ ಅನುವಾದಿಸಿದ್ದಾರೆ:–

"ಬಂದನು! ಬಂದನು ಕಿಂದರಿಜೋಗಿ!
ಕೆದರಿದ ಕೂದಲ ಗಡ್ಡದ ಜೋಗಿ!
ನಾನಾ ಬಣ್ಣದ ಬಟ್ಟೆಯ ಜೋಗಿ!
ಕೈಯಲಿ ಕಿಂದರಿ ಹಿಡಿದಾ ಜೋಗಿ!
ಕುದುರೆಯ ಗೊರಸಿನ ಅಡಿಗಳ ಜೋಗಿ!
ಕಡವೆಯ ಕೊಂಬಿನ ತಲೆಯಾ ಜೋಗಿ!
ಆನೆಯ ಕಿವಿಗಳ ಕಿಂದರಿಜೋಗಿ!
ಹಂದಿಯ ದಾಡೆಯ ಕೋರೆಯ ಜೋಗಿ!
ಮಂಗನ ಮೂತಿಯ ಮುಡಿದಿಹ ಜೋಗಿ!
ಬಂದನು ಬಂದನು ಕಿಂದರಿಜೋಗಿ!
ಹಾರುತ, ತೇಲುತಲಿಳಿದನು ಜೋಗಿ!

ಶ್ರೀನಿವಾಸರಾವ್‌ರವರು ಮತ್ತು ಕುವೆಂಪುರವರು ಒಂದೇ ಕಥನಕಾವ್ಯದಿಂದ ಪ್ರೇರಣೆಯಾಗಿದ್ದರೂ; ಇಬ್ಬರೂ ತಮ್ಮ ಸ್ವಂತಿಕೆಯನ್ನು ತೋರಿದ್ದಾರೆ. ಶ್ರೀನಿವಾಸರಾವ್‌ರವರ ಕಾಲದಲ್ಲಿ ಪ್ರಾಸ ತ್ಯಾಗ ಇನ್ನೂ ಚರ್ಚಿತ ವಿಷಯವಾಗಿತ್ತು. ಇವರ ಕಾವ್ಯವು ಪ್ರಾಸ ಹಾಗು ಚೌಪದಿಯ(ಗೋವಿನ ಮಟ್ಟು) ಶೈಲಿಯಲ್ಲಿದೆ. ಕುವೆಂಪುರವರು ನಾಲ್ಕು ಮಾತ್ರೆಯ ಗಣಗಳ ಧಾಟಿ ಇದ್ದರೂ ಪ್ರಾಸ, ಛಂದಸ್ಸು ಎಲ್ಲವನ್ನೂ ಮೀರಿದೆ. ಶ್ರೀನಿವಾಸರಾವ್‌ರವರು ಬ್ರೌನಿಂಗ್‌ನ ಕಾವ್ಯಕ್ಕೆ ಹೆಚ್ಚು ನಿಷ್ಠವಾಗಿ ಬರೆದರೆ, ಕುವೆಂಪುರವರು ಅನೇಕ ಕಡೆ ಸ್ವಂತಿಕೆಯನ್ನು ಕಾಯ್ದಿರಿಸಿಕೊಂಡಿದ್ದಾರೆ. ಬ್ರೌನಿಂಗ್ ನಾಲ್ಕು ಸಾಲುಗಳಲ್ಲಿ ಬರೆದಿರುವ ವಿಷಯವನ್ನು ೧೦ ಸಾಲುಗಳಿಗೆ ವಿಸ್ತರಿಸಿಕೊಂಡಿದ್ದಾರೆ. ಈ ಕೆಳಗಿನ ಭಾಗವನ್ನು ಗಮನಿಸಿ–

ಕೃತಯುಗದೊಳು ಕೈಲಾಸದೊಳು
ಇಲಿಗಳ ಕಾಟವು ಮಿತಿಮೀರೆ
ಇಲಿಗಳ ಕೊಲ್ಲುವೆನೆಂಬಾ ರೋಷ
ಏರಲು, ಭೈರವನಾದನು ಈಶ!
ಆದರು ಆಗದೆ ಮೂಷಿಕನಾಶ

ನಂದಿಯ ಕಳುಹಿದನೆನ್ನೆಡೆಗೆ

ಕೊಂದೆನು ಅವುಗಳ ನಾ ಕಡೆಗೆ!

ಕಾಮನ ದಹಿಸಿದ ಹಣೆಗಣ್ಣು

ಮೂಷಿಕ ರೋಮವ ಸುಡಲಿಲ್ಲ.!

ಮೂಲ–

"In Tartary I freed the chain,

Last June, from his huge swarm of giants;

I eased in Asia the Nizam

Of a monstrous brood of vampire bats"

ಬಿ.ಎಂ.ಶ್ರೀಯವರು ಇಂತಹ ಕಥನ ಗೀತೆಗಳ ಬಗ್ಗೆ ಹೆಚ್ಚು ಆಸಕ್ತಿ ತೋರಿದವರು. ಇವರ 'ಇಂಗ್ಲೀಷ್ ಗೀತೆಗಳು' ಕವನ ಸಂಕಲನದಲ್ಲಿ ಥಾಮಸ್ ಹುಡ್‌ನ 'The bridge of sighs' ಅನ್ನು ದುಃಖಸೇತು ಎಂದು, ವರ್ಡ್ಸ್‌ವರ್ತನ 'The Seven Sisters' ಅನ್ನು ಚೋಳಕನ್ನೆಯರೆಂದು, ಸೌದೆಯನ 'After Blenheim' ಅನ್ನು ಬ್ಲೆನ್‌ಹೀಮ್ ಕದನ ಎಂದು, ಕೋಲ್‌ರಿಚ್‌ನ ಕನಕಾಂಗಿಯೆಂದು, ಲೇಡಿ ಲಿನ್ಡ್ಸೆಯ 'Auld Robin Grey' ಯನ್ನು ಮುದಿಯ ರಾಮಗೌಡ ಎಂದು ಕ್ಯಾಂಪ್‌ಬೆಲ್‌ನ 'Lord Lindsoy' ಅನ್ನು ಕಾರಿಹೆಗ್ಗಡೆಯ ಮಗಳು ಎಂದು ರೂಪಾಂತರಿಸಿದ್ದಾರೆ. ಭಾರತೀಯ ಮನೋಧರ್ಮದ ಹಿನ್ನೆಲೆಯಲ್ಲಿ ಇವುಗಳನ್ನು ಕನ್ನಡೀಕರಿಸಿದ್ದಾರೆ. ಇದರಲ್ಲಿನ ಹೆಣ್ಣು ಯುದ್ಧ ಸಮೂಹದ ವ್ಯವಸ್ಥೆಯನ್ನು ಈ ಪರಿಸರದ ಹಿನ್ನೆಲೆಯಲ್ಲಿ ಅನುವಾದಿಸಿದ್ದಾರೆ.

ಇದಲ್ಲದೆ ಎಂ.ಎನ್. ಕಾಮತರೂ ಇಂಗ್ಲಿಷ್‌ನ 'A six men of Hinduston' ಅನ್ನು 'ಆನೆ ಆನೆಯೋ' ಎಂದು 'The Ant and the Gross hopper' ಅನ್ನು 'ಇರುವೆಯೂ ಮಿಡಿತೆಯೂ' ಎಂದು ಅನುವಾದಿಸಿದ್ದಾರೆ. ಪಂಜೆ ಹಾಗೂ ಕಾಮತರು ಅನೇಕ ಇಂಗ್ಲಿಷಿನ ಗೀತೆಗಳನ್ನು ಅನುವಾದಿಸಿದ್ದರೂ ಇದರ ಶೈಲಿ ಗೋವಿನ ಹಾಡಿನ ಮಟ್ಟು ಮತ್ತು ಚೌಪದಿಯಲ್ಲಿದೆ. ಆದರೆ ಬಿ,ಎಂ.ಶ್ರೀಯವರ ಅನುವಾದದಲ್ಲಿ ಇಂತಹ ಚೌಕಟ್ಟು ಮೀರಿದ ರಚನೆಯನ್ನು ನೋಡಬಹುದು.

'ಏನು ಕೋಮಲ ಕಾಯ

ಹೊಳಪು ಹೊಸ ಪ್ರಾಯ!

'ಮೆಲ್ಲಗಿವಳನು ಮುಟ್ಟು

ಮರುಗಿ ಹಿಡಿದೆತ್ತು

ಊರ ಮನೆ ಬೆಳಕುಗಳು
ದೂರ ಸರಿಯುತ
ಕತ್ತಲೆಯ ಹೊಳೆ ಹರಿದು
ಹತ್ತಿರಕೆ ಬರುತ______'

ಬಿ.ಎಂ.ಶ್ರೀರವರ ಈ ಪ್ರಯತ್ನ ಮುಂದೆ ಅನೇಕರಿಗೆ ಪ್ರೇರಣೆಯಾಯಿತೆಂದರೆ ತಪ್ಪಾಗಲಾರದು. ಆರಂಭದಲ್ಲಿ ಎಚ್.ಚೆನ್ನಕೇಶವಯ್ಯ, ಎಂ.ಎನ್.ತುಳಸೀಬಾಯಿ, ಎಂ.ಎನ್.ಶ್ರೀನಿವಾಸರಾವ್ ಮುಂತಾದವರು ಈ ಮಾದರಿಯಲ್ಲಿ ಅನುವಾದಗಳನ್ನು ಮಾಡಿದರು. ನಂತರದಲ್ಲಿ ಕುವೆಂಪು, ಮಾಸ್ತಿ, ಜಿ.ಪಿ. ರಾಜರತ್ನಂ, ಎಂ.ವಿ ಕೃಷ್ಣಕುಮಾರ್ ಮುಂತಾದವರು ಈ ಪ್ರಕಾರದಲ್ಲಿ ರಚಿಸಿದರು.

ಇಂಗ್ಲಿಷ್ ಕಥನಕವನ ಪರಂಪರೆಯನ್ನು ೧೪ನೆಯ ಶತಮಾನದಿಂದ ಕಾಣಬಹುದು. ಜೆಫ್ರಿ ಛಾಸರ್ ಇಂತಹ ಕಥನಕವನವನ್ನು ಬರೆದವರಲ್ಲಿ ಬಹಳ ಪ್ರಮುಖ ವ್ಯಕ್ತಿ. ಇವನ ಕ್ಯಾಂಟರ್ಬರಿ ಕಥೆಗಳು (Conterbary tale) ಬಹಳ ವಿಶಿಷ್ಟವಾದದ್ದು. ಚರ್ಚಿಗೆ ಹೊರಟ ಯಾತ್ರಿಕರು ದಾರಿಯಲ್ಲಿ ಸಮಯವನ್ನು ಕಳೆಯಲು ಹೇಳುವಂತಹ ಕಥೆ ಇದಾಗಿದೆ. ಕಥೆಯು ಯಾತ್ರಿಕರೆ ಹೇಳುವ ಧಾಟಿಯಲ್ಲಿ ಇದೆ ಇಂತಹ ಧಾಟಿ ಕನ್ನಡದ ದುಃಖಸೇತು, ಬ್ಲೇನ್‌ಹೀಂ ಕದನದಂತಹ ಕಥನಕಾವ್ಯಗಳಲ್ಲಿ ಕಾಣಬಹುದು. ತನ್ನ ಶೈಲಿಯನ್ನು ಕುರಿತಂತೆ

'I speak plainly and with no concealings
And give account of all their words and dealings,
using their very pharoses as they fell'
(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವ–ಪು. ೨೮೭)

ಇವನ ಈ ಶೈಲಿ ಹೊಸಗನ್ನಡ ಕಥನ ಕವಿತೆಯ ರಚನೆಗೆ ಮಾದರಿಯಾಗಿದೆ 'ಯಾವ ವ್ಯಕ್ತಿಯಾದರೂ ಮತ್ತೊಬ್ಬನು ಹೇಳಿದ ಕತೆಯನ್ನು ತಾನು ಹೇಳಬೇಕಾದಾಗ, ಸಾಧ್ಯವಾದಷ್ಟು ತನಗೆ ನೆನಪಿದ್ದಷ್ಟೂ, ಅವನ ಮಾತುಗಳನ್ನೇ ನಿರೂಪಣೆಯ ರೀತಿಯನ್ನೇ ಬಳಸಬೇಕು. ಇಲ್ಲದಿದ್ದರೆ ಅವನ ಬರವಣಿಗೆಯಲ್ಲಿ ಯಥಾರ್ಥತೆ ಇರುವುದಿಲ್ಲ. ಕತೆಯು ಸುಳ್ಳಾಗಿ ತೋರುತ್ತದೆ' ಎಂಬುದು ಛಾಸರನ ಅಭಿಪ್ರಾಯ (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು, ೨೮೭)

He who repeats a tale after a man
Is bound to say, as nearly as he con,
Each single word, if he remembers it,

However rudely spoken or unfit

Or else the tole he tells will be untrue”

ದುಃಖಸೇತು ಕವಿತೆಯ ದಾಟಿಯನ್ನು ಇಲ್ಲಿ ಗಮನಿಸಬಹುದು, ಬಿ.ಎಂ.ಶ್ರೀಯವರು ಹೆಣ್ಣುಮಗಳೊಬ್ಬಳ ಸಾವಿನ ಪ್ರಸಂಗವನ್ನು ತಾವೇ ಕಂಡಂತೆ ಬರೆದಿದ್ದಾರೆ

ಏನು ಕೋಮಲಕಾಯ

ಹೊಳಪು ಹೊಸಪಾಯ!

‘ಮೆಲ್ಲಗಿವಳನು ಮುಟ್ಟು

ಮರುಗಿ ಹಿಡಿದೆತ್ತು

ಊರ ಮನೆ ಬೆಳಕುಗಳು

ದೂರ ಸರಿಯುತ್ತ

ಕತ್ತಲೆಯ ಹೊಳೆ ಹರಿದು

ಹತ್ತಿರಕೆ ಬರುತ... ...’

೧೪ನೇ ಶತಮಾನ ಇಂಗ್ಲಿಷ್ ಸಾಹಿತ್ಯದಲ್ಲಿ ನಮ್ಮ ಗೋವಿನ ಹಾಡಿನ ಮಟ್ಟಿನಲ್ಲಿ ಕಥನಕಾವ್ಯವನ್ನು ಕಾಣಬಹುದು. ಗೋವಿನ ಹಾಡು ೧೮ನೇ ಶತಮಾನದ್ದು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದು ಚೌಪದಿಯಲ್ಲಿದೆ. ಶೈಲಿ ಕನ್ನಡದ ಅಜ್ಜಿಕತೆಯ ಆರಂಭದಲ್ಲಿ ಇರುವಂತೆಯೇ ಇದೆ. ಇದು ಅಜ್ಞಾತ ಕವಿಯಿಂದ ರಚನೆಯಾಗಿವೆ.

The king sits in Dumferline town

Drinking the blude-red wine;

O where will I get a skeely skipper

To sail the new ship O mine

ಕಥನ ಕವನವು ಮಹಾಕಾವ್ಯದ ಲಕ್ಷಣಗಳನ್ನು ಮೀರಿದ್ದು. ಛಂದಸ್ಸು, ಅಲಂಕಾರ, ಅಷ್ಟಾದಶವರ್ಣನೆ, ಧೀರೋದ್ಧಾತ ನಾಯಕ, ಪ್ರತಿನಾಯಕ ಇಂತಹ ಅಂಶಗಳಿಂದ ದೂರ ಸರಿದು ಒಂದು ಸಾಮಾನ್ಯ ಘಟನೆಯನ್ನು ಕವನದ ರೂಪದಲ್ಲಿ ಹೇಳುವ ಒಂದು ಪ್ರಕಾರವೇ ಕಥನ ಕಾವ್ಯ. ಭಾವಗೀತೆಗಳು ರಂ.ಶ್ರೀ.ಮುಗಳಿಯರು “ಹೊಸಗನ್ನಡದಲ್ಲಿ ಭಾವಗೀತೆಯ ಬೆಳೆ ಹುಲುಸಾಗಿದ್ದರೂ ಕಥನ ಕವಿತೆ ಮೊದಲಿಂದ ಅಲ್ಲಲ್ಲಿ ಬೆಳೆದಿದೆ. ಕೆಲವು ಕಡೆ ಎತ್ತರವಾಗಿ

ಮುಗಿಲು ಮುಟ್ಟಿದೆ ಎಂದಿದ್ದಾರೆ."(ಜಹನಾರ – ಎಸ್.ವಿ.ಪರಮೇಶ್ವರ ಭಟ್ಟ(೧೯೪೩) ರಂ.ಶ್ರೀಮುಗಳಿಯವರ ಮುನ್ನುಡಿ)

ಕಥನ ಕವಿತೆಯ ರೂಪವು ಕನ್ನಡ ಸಾಹಿತ್ಯಕ್ಕೆ ಹೊಸದಲ್ಲವಾದರೂ ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಹುಟ್ಟಿಕೊಂಡ ಕಥನಕವಿತೆಗಳೆಲ್ಲವೂ ಇಂಗ್ಲಿಷಿನ ಭಾಷಾಂತರ ಇಲ್ಲವೆ ರೂಪಾಂತರವಾಗಿವೆ. ಇವು ಪಂಜೆ ಮಂಗೇಶರಾಯರು, ಬಿ.ಎಂ.ಶ್ರೀ, ಮಾಸ್ತಿಯವರ ಕಥನ ಕವನಗಳ ಮೇಲೆ ಪ್ರಭಾವ ಉಂಟುಮಾಡಿದೆ. ನಂತರದಲ್ಲಿ ನವೋದಯದ ಕವಿಗಳಲ್ಲಿ ಈ ಪ್ರಕಾರವು ಕೃಷಿಯನ್ನು ಮಾಡಿದ್ದಾರೆ.

ಇದರಲ್ಲಿ ಛಂದಸ್ಸಿನ ಅಂಶಗಳನ್ನು ಗಮನಿಸಿದರೆ ಚೌಪದಿಯನ್ನು ಹೆಚ್ಚಾಗಿ ಬಳಸಿದ್ದಾರೆ. ಮಾಸ್ತಿಯವರು ತಮ್ಮ ಕಥನಕವನದಲ್ಲಿ ಸರಳರಗಳೆಯನ್ನು ಬಳಸಿದ್ದಾರೆ. ಇವರ ನವರಾತ್ರಿ ಕೃತಿಯು ಕಥನಕವನಗಳ ಸಂಗ್ರಹವಾಗಿದೆ. ಇವರ ಈ ಕಥನಕವನಗಳಿಗೆ ಭಾಸರನ ಕಥನಕವನಗಳ ಪ್ರಭಾವವಿದೆ. ತಮ್ಮ ಕೃತಿಯಲ್ಲಿ ಅವನನ್ನು ಹೀಗೆ ಸ್ಮರಿಸಿದ್ದಾರೆ.

"ಆಂಗ್ಲ ದೇಶದಲಿ
ಹೊಸಕಾವ್ಯವನು ನಟ್ಟಧೀರ ಕ್ಯಾಂಟರ್ ಬರಿಯ
ಕಥನಮಂಜರಿಯ ಜೀವನವಿಜ್ಞ ನಗೆಗಾರ
ಭಾಸರ್ ಕವಿಪ್ರವರ, ಕಥನಕಲೆ ಇಂತೆಂದು
ಎನಗೆ ತೋರಿದ ಅಣ್ಣ ಅಕ್ಕಂದಿರು." (ನವರಾತ್ರಿ ೧–ಪು. ೨)

ತನಗೆ ಇಂತಹ ಕಥನ ಕವಿತೆಯನ್ನು ಕಲಿಸಿದವರು ನೀವೆಂದು ವಾಲ್ಮೀಕೀ ಕುಮಾರವ್ಯಾಸ ಸೋಮದೇವ ಗುಣಾಢ್ಯ ವಿಷ್ಣುಶರ್ಮ ಈ ಸೋಪ್, ಷಹರ್‌ಜಾದೆ ಮತ್ತು ಬೊರಾಪಿ ಯೋರವರ ಜೊತೆಗೆ ಭಾಸರನನ್ನು ಸ್ಮರಿಸಿದ್ದಾರೆ. ಭಾಸರನ ಕಥನಕವನದ ಪ್ರಭಾವ ಮಾಸ್ತಿಯವರ ಮೇಲೆಯಿದ್ದರೂ ಅವರ ಕಾವ್ಯದ ವಸ್ತು ಮಾತ್ರ ಕನ್ನಡನಾಡಿನ ಪರಿಸರ. ಆದರೆ ಭಾರಸನ ಕಥನ ಕಾವ್ಯದ ನಿರೂಪಣೆ, ಪೀಠಿಕಾ ಭಾಗ, ಕಥೆ ಬೆಳೆಯುವ ಧಾಟಿ ಎಲ್ಲವೂ ಮಾಸ್ತಿಯವರ ನವರಾತ್ರಿಯಲ್ಲಿ ಕಾಣಬಹುದಾಗಿದೆ.

ನವರಾತ್ರಿಗೆ ರಾಮುವಿನ ಚಿಕ್ಕಪ್ಪ ತನ್ನ ಎಲ್ಲ ಮಿತ್ರರೂ ಬಂದು ರಾಮುವಿನ ಮನೆಯಲ್ಲಿ ಸೇರಬೇಕೆಂದು ಪತ್ರ ಬರೆದು ಎಲ್ಲರನ್ನು ಒಟ್ಟು ಗೂಡಿಸುತ್ತಾರೆ. ಮಿತ್ರರು ಬೆಳಗಿನಿಂದ ಸಂಜೆಯತನಕ ಹೇಗೋ ಕಾಲ ಕಳೆಯಬಹುದು. ಆದರೆ ಸಂಜೆಯಲ್ಲಿ ಹೊತ್ತು ಕಳೆಯಲು ಹೀಗೆ ನಿರ್ಧರಿಸುತ್ತಾರೆ.

"ಊಟಕ್ಕೆ ಎಲ್ಲ ನಮ್ಮ ಮನೆಗೈತಂದು
ಎಲೆ ಅಡಿಕೆ ಮೆಲುತ ಯಾರೋ ಒಂದು ಕತೆ ಹೇಳಿ
ಉಳಿದವರು ಕೇಳಿ ಸಂತೋಷಿಸೋಣ"

ಎಂದು ಚಿಕ್ಕಪ್ಪ ಸೂಚಿಸುತ್ತಾರೆ. ಈ ಹಬ್ಬ ಹೀಗೆ ಹದಿನಾರು ದಿನಗಳವರೆಗೆ ನಡೆದು ದಿನವೂ ಒಂದೊಂದು ಕತೆಯನ್ನು ಹೇಳುತ್ತಿದ್ದರು. ಆಗ

ನೆರೆದ ಮಿತ್ರರ ಕಥೆಗಳನು ಅವರ ಮಾತಿನಲೆ

ಬರೆಯುವುದು ನನ್ನ ಹೊಣೆಯೆಂದು ನಿಶ್ಚಯ ಆಗಿ

ಅದೇ ಕೆಲಸ ಈ ನಡೆಯುತಿಹುದು (ನವರಾತ್ರಿ ೧–ಪು. ೧೨)

ಛಾಸರನ 'ಕ್ಯಾಂಟರ್ಬರಿಯ ಕಥೆಗಳು'ನಲ್ಲಿ ಪೀಠಿಕಾ ಭಾಗ ಹೀಗಿದೆ – ಕ್ಯಾಂಟರ್ಬರಿಯಲ್ಲಿರುವ ಸೇಂಟ್ ಥಾಮಸ್ ಚರ್ಚಿಗೆ ಯಾತ್ರೆ ಹೊರಟ ಕೆಲವರು ದಾರಿಯಲ್ಲಿ ಒಂದು ಹೊಟಲಿನಲ್ಲಿ ಸೇರುತ್ತಾರೆ. ಆ ಹೋಟಲಿನ ಯಜಮಾನ ತಾನೂ ಅವರೊಂದಿಗೆ ಬರುವುದಾಗಿಯೂ, ದಾರಿ ಕಳೆಯುವುದಕ್ಕಾಗಿ ಹೋಗುವಾಗಲೊಮ್ಮೆ ಹಿಂದಿರುಗುವಾಗಲೊಮ್ಮೆ ಪ್ರತಿಯೊಬ್ಬರೂ ಒಂದೊಂದು ಕತೆ ಹೇಳಿದರೆ ಚೆನ್ನ ಎಂದು ಸೂಚಿಸುತ್ತಾನೆ. ಅವುಗಳಲ್ಲಿ ಯಾವುದು ಅತ್ಯುತ್ತಮ ಕತೆಯೆಂದು ತಾನೇ ನಿರ್ಧರಿಸುವುದಾಗಿಯೂ ಹೇಳಿದ. ಅವನ ಮಾತನ್ನು ಆ ಯಾತ್ರಿಕರೆಲ್ಲರೂ ಒಪ್ಪುತ್ತಾರೆ. (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೮೬)

ಮಾಸ್ತಿಯವರ ಕಥನಕವನದಲ್ಲಿ ಬರುವ ಪಾತ್ರಗಳು ಅವರಿಗೆ ಚೆನ್ನಾಗಿ ಬಲ್ಲವರೇ ಆಗಿದ್ದರು. ಕಥೆ ಹೇಳಿದವರು ಟೀಕೆ ಮಾಡಿದವರು ಎಂದು ಈ ಪ್ರಸ್ತಾವನಾ ಭಾಗದಲ್ಲಿ ವರ್ಣಿತವಾಗಿರುವ ವ್ಯಕ್ತಿ ಚಿತ್ರಗಳು ಬಹುಪಾಲು ನನ್ನ ಜೊತೆಯ, ನನಗೆ ಹಿರಿಯರಾದ, ಕನ್ನಡ ಸೇವಕರನೇಕರ ಶೀಲವನ್ನು ಆಧರಿಸಿ ಬರೆದಿರುವ ಕಲ್ಪಿತ ಚಿತ್ರಗಳು ಎಂದು ಅವರೆ ಹೇಳಿದ್ದಾರೆ. ಆದರೆ ಛಾಸರನು ಪ್ರತಿಯೊಬ್ಬ ವ್ಯಕ್ತಿಯ ದೈಹಿಕ ವರ್ಣನೆಯ ಜೊತೆಗೆ ಗುಣವರ್ಣನೆ ಮಾಡಿದರೆ ಮಾಸ್ತಿಯವರು ಕೇವಲ ಗುಣವರ್ಣನೆ ಮಾಡಿದ್ದಾರೆ. ಛಾಸರನು ಮಿಲ್ಲರ್‌ನ ಪರಿಚಯವನ್ನು ಹೀಗೆ ಮಾಡಿದ್ದಾರೆ.

"The miller was a chap of sixteen stone,

A great stout fellow big in brownand bone,

he did well out of themfor he could go

and win the rom at anu wrestling show

broad, knotty and short shouldered, he would boast

he could heave any door off hinge and post,

or take a run and break it with his head

his beard, like any sow or fox, was red

and broad as well as though it were a spade;

and at its very tip his nose displayed
a wart on which there stool a tuft of hois
red as the bristles in an old soo's ear."

ಇದೇ ಭಾಗವನ್ನು ಮಾಸ್ತಿಯವರು ಮಿಲ್ಲರನ ಸ್ಥಾನದಲ್ಲಿ ಬಿ.ಎಂ.ಶ್ರೀಯವರ ವ್ಯಕ್ತಿತ್ವವನ್ನು ಕುರಿತು ಹೀಗೆ ವರ್ಣಿಸುತ್ತಾರೆ.

"ಎಲ್ಲರಿಗೆ ಮೊದಲು ಹಿರಿಯಣ್ಣನವರನು ಬಿಟ್ಟು
ಬೇರೆ ಯಾರನು ಹೇಳಲಾದೀತು? ಕನ್ನಡದ
ಹೊಸನಡೆಯ ಹೆಚ್ಚೆಗಳನಿಡಲು ಕಲಿಸಿದ ನಮ್ಮ
ಗುರುಗಳು ಇವರು ಮುಖ್ಯರು. ಎಳೆಯ ದಿವಸದಲಿ
ಇಂಗ್ಲೀಷ್ ಕಲಿತು ಒಳ್ಳೆಯ ಕವಿತೆ ಕತೆಗಳನ್ನು
ಸವಿವಂದು ನಮ್ಮ ಜನರಿಗೆ, ನಮ್ಮ ಭಾಷೆಯಲ್ಲಿ
ಇಂಥ ಕೃತಿಗಳ ರಚಿಸಿ ಒದಗಿಸುವುದೇ ತಮ್ಮ
ಮೊದಲ ಕರ್ತವ್ಯ ಎಂಬುವನು ಮನಗಂಡವರೆ
ಹಿರಿಯಣ್ಣ ಅಂದಿನಿಂದಲು ಏನ ಮಾಡುವುದು
ಎಂತು ಮಾಡುವುದು ಎನ್ನುವ ಗುಣಾಕಾರದಲಿ
ದುಡಿಯುತ್ತ ಸಾಗಿದರು. ಕನ್ನಡದ ಸಂಪತ್ತು
ಎನಿತು ಎಂತಪ್ಪುದೆಂಬುದ ತಿಳಿವ ಬಯಕೆಯಲ್ಲಿ
ತಾವು ಬೇರೆಯ ಓದನೋದಿದುದು ಒಮ್ಮೊಮ್ಮೆ
ತುಸು ಸಾಲವಾಗಿ" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೩೦೮)

ಭಾಸರನು ಆಯ್ಕೆ ಮಾಡಿಕೊಳ್ಳುವ ಪಾತ್ರಗಳಿಗೂ ಮಾಸ್ತಿಯವರ ಪಾತ್ರಗಳಿಗೂ ಬಹಳ ವ್ಯತ್ಯಾಸವಿರುವುದರಿಂದ ಅವರ ವರ್ಣನೆಯ ಶೈಲಿ ವ್ಯತ್ಯಾಸವಾಗಿದೆ. ಅಲ್ಲದೆ ಭಾಸರನಿಗಿಂತಲೂ ದೀರ್ಘವಾಗಿ ವರ್ಣನೆಗಳನ್ನು ಬೆಳೆಸಿದ್ದಾರೆ. ಮಿಲ್ಲರ್‌ನ ವರ್ಣನೆ ೧೫–೨೦ ಸಾಲುಗಳಷ್ಟು ದೀರ್ಘವಾಗಿ ವರ್ಣಿಸಿದ್ದಾರೆ. ಭಾಸರನ ವ್ಯಕ್ತಿಗಳ ವ್ಯಕ್ತಿತ್ವವು ಭಿನ್ನವಾಗಿದೆ. ಆದರೆ ಮಾಸ್ತಿಯವರ ವ್ಯಕ್ತಿಗಳು ಸಾಮಾನ್ಯ ಒಂದೇ ಮನೋಭಾವಕ್ಕೆ ಹೊಂದಿಕೆಯಾಗಿರುವುದಾದ್ದರಿಂದ ಭಾಸರನ ಪಾತ್ರಗಳು

ಮನರಂಜಕವಾಗಿ ವಿಭಿನ್ನವಾಗಿ ಕಾಣಿಸಿಕೊಳ್ಳುತ್ತವೆ. ಮಾಸ್ತಿಯವರು ಅನುವಾದಮಾಡುವ ಸಂದರ್ಭದಲ್ಲಿ ಸ್ವಂತಿಕೆ ಹಾಗೂ ಸ್ವಾತಂತ್ರ್ಯವನ್ನು ವಹಿಸಿದರಾದರೂ ಭಾಸರನ ಕೃತಿಯ ದಟ್ಟ ನೆರಳು 'ನವರಾತ್ರಿ'ಯ ಮೇಲೆ ಕಾಣುತ್ತದೆ.

ಮಾಸ್ತಿಯುವರ ಭಾಷೆಯ ಅತಿ ಪ್ರೌಢವೂ ಅಲ್ಲದಂತಿದೆ. ಪಾತ್ರಕ್ಕೆ ಸನ್ನಿವೇಶಕ್ಕೆ ಅನುಕೂಲವಾಗುವಂತೆ ಭಾಷೆಯನ್ನು ಹೊಂದಿಸಿಕೊಂಡಿದ್ದಾರೆ. ಈ ಸಾಲುಗಳನ್ನು ಗಮನಿಸಿ.

"ತನ್ನ ತಾಯನು ಕದ್ದ ಲಂಕೇಶ್ವರನ ಸದೆದು
ದೇವಿಯನು ಬಿಡಿಸಿ ತಹೆನೆಂದು ನೀಡುತಲಿರುವ
ಕೋಲು ಎಂಬಂತೆ ನಳಸೇತು ಮುನ್ನೀರಿನಲಿ
ದಿಟ್ಟವಾಗಿಹುದ ಕಂಡನು. ಅತ್ತ ಇತ್ತ ಜಲ
ಅಲೆದಲೆದು ಸೇತುವಿನ ಬಂಡೆಗಳನೋಲಗಿಸಿ
ಮಾಂತ್ರಿಕನ ದಂಡವನು ಕಂಡು ಹೆಡೆಗಳ ಸಾಲ
ತಗ್ಗಿಸಿದ ಹಾವಿನಂತಿಹುದು."

ಮಾಸ್ತಿಯವರ ಕಥನಕಾವ್ಯದ ಶೈಲಿ ಹೆಚ್ಚಾಗಿ ಸರಳರಗಳೆ ಎಂದು ಈಗಾಗಲೇ ಹೇಳಿದೆ. ಆದರೆ ಇದು ಕೆಲವೊಮ್ಮೆ ಗದ್ಯಶೈಲಿಗೆ ಜಾರುವುದು, ದೀರ್ಘವಾದ ರಚನಾ ಕ್ರಮಕ್ಕೆ ಅವಕಾಶ ಮಾಡಿಕೊಡುತ್ತದೆ. ಇದನ್ನು ಕುರಿತಂತೆ ಟಿ.ಸೀತಾರಾಮಯ್ಯನವರು "ಮಾಸ್ತಿಯವರಲ್ಲಿ ಸರಳರಗಳೆಯ ಬನಿ ಬಿಗಿವು ಒಂದೊಂದು ಕಡೆ ಸಾಲವೆನ್ನುವವರುಂಟು ಮಾತುಗಳ ಶಯ್ಯೆಯಲ್ಲಿ ಅಲ್ಲಲ್ಲಿ ಸಡಿಲ ಕಾಣುವುದುಂಟು ; ಸಾಲುಗಳಿಗಾಗಿ ಆಯ್ದು ಸೇರಿಸುವ ಪದಗಳಲ್ಲಿ ಅಗತ್ಯಕ್ಕೆ ತಕ್ಕ ದಢುವತಿ ಇಲ್ಲದೆ ಇರಬಹುದು. ಆದರೆ ಕೃತಿಯ ಕಾರ್ಯಕ್ಕೂ ರಸ ಸಾಧನೆಗೂ ವಿರೋಧವಾಗುವಷ್ಟು ಇದೆಯೆಂದರೆ ನಾನು ಒಪ್ಪಲಾರೆ ಸರಳ ರಗಳೆಯಲ್ಲಿ ಕಥನ ರಸವನ್ನು ಸಾಮಾನ್ಯ ರೀತಿಯಲ್ಲಿ ಮೊದಲು ಮಾಡಿ ಅಗತ್ಯಕ್ಕೆ ತಕ್ಕಂತೆ ಬೆಳೆಸುತ್ತಾರೆ" ಎಂದಿದ್ದಾರೆ.

ಪಂಜೆಯವರ ಕಥನ ಕವನವು ಬಹಳ ವಿಶಿಷ್ಟವಾದದ್ದು ವರ್ಡ್ಸ್‌ವರ್ತನ 'The last of the flock' ಅನ್ನು ಆಧಾರವಾಗಿಟ್ಟುಕೊಂಡು ಕಡೆಕಂಜಿಯನ್ನು ಬರೆದಿದ್ದಾರೆ. ಕವಿ ಒಮ್ಮೆ ಒಬ್ಬ ವ್ಯಕ್ತಿ ಒಂದು ಕುರಿಮರಿಯನ್ನು ಕಂಕುಳಲ್ಲಿ ಇಟ್ಟುಕೊಂಡು ಮುಖದಲ್ಲಿ ಕಳೆಗುಂದಿಸಿಕೊಂಡು ಬರುತ್ತಿದ್ದದ್ದನ್ನು ನೋಡುತ್ತಾರೆ. ತಾನು ತುಂಬ ಶ್ರೀಮಂತನಾಗಿದ್ದವು, ಕೆಟ್ಟ ಚಾಳಿಯಿಂದ ಎಲ್ಲವನ್ನು ಕಳೆದುಕೊಂಡಿರುವೆ. ಈಗ ನನಗೆ ಉಳಿದಿರುವುದೊಂದೆ ಈ ಕುರಿಮರಿ ಎಂದು ಹೇಳುತ್ತಾನೆ. ಆದರೆ ಈ ಕತೆಯನ್ನು ಐತಿಹಾಸಿಕ ಸನ್ನಿವೇಶಕ್ಕೆ ತಂದುಕೊಂಡು ರೂಪಾಂತರಿಸಿದ್ದಾರೆ. ಇದರಲ್ಲಿ ಕಾರ್ಕಳದ ಅರಸ ಹಾಗೂ ಬಿರುಮ ಸೆಟ್ಟಿಯ ನಡುವೆ ನಡೆದ ಸಂಭಾಷಣೆಯಿದೆ. ಆದರೆ ಕೊನೆಯಲ್ಲಿ

ಸೆಟ್ಟಿಯ ಕರುಣಾಜನಕ ಕಥೆ ಕೇಳಿ ರಾಜನು ಅವನ ಎಲ್ಲಾ ವಸ್ತುಗಳನ್ನು ಅವನಿಗೆ ಬರುವಂತೆ ಮಾಡುತ್ತಾನೆ ಎಂಬುದನ್ನು ಚಿತ್ರಿಸುತ್ತಾರೆ.

"ತುಳುವ ನಾಡೊಳು ಹೊಳಲು ಮೆರೆವುದು ಹಳೆಯ ಕಾರ್ಕಳ ಎಂಬುದು;
ಕೊಳವು ಕುಂಟೆಯು ಪೈರುಪಚ್ಚೆಯು ತಳೆದ ಮನೆ ಅಲ್ಲಿದ್ದವು
ಅರಸು ಒಂದಿನ ತಿರುಗುತಿರೆ, ಅ ಚ್ಚರಿಯ ಒಂದನು ಕಂಡನು–
ಮರುಕ ತೋರುವ, ಕರೆದು ಚೀರುವ  ಬರುಮ ಸೆಟ್ಟಿಯ ಕಂಡನು
(ಕನ್ನಡ ಎರಡನೆಯ ಪದ್ಯಪುಸ್ತಕ–ಪಿ.ಮಂಗೇಶರಾವ್– ಪು–೧೭)

ಇವರ ಅನೇಕ ಕಥನಕವನಗಳಲ್ಲಿ ಹಳೆಯ ಮಾರ್ಗವನ್ನು ಕಾಣಬಹುದು. ಪ್ರಾಸ, ಛಂದಸ್ಸನ್ನು ಮೀರುವ ಯತ್ನ ನಡೆಸಿಲ್ಲ.

| | | | |
|---|---|---|---|
| ಕಂದು ಮೊರೆಯ | ೩ | ೪ | |
| ನಾಂದ ಕಣ್ಣಿನ | ೩ | ೪ | |
| ಮಿಂದು ಕೆನ್ನೆಯ ಮುಸುಕಿನ | ೩ | ೪ | ೩ ಗು |
| ಬೆಂದು ಹೊರಡುವ | ೩ | ೪ | |
| ಮೂಗುಸುಯ್ಯಿನ | ೩ | ೪ | |
| ನೊಂದು ನೋಯುವ ಸೆಟ್ಟಿಯು | ೩ | ೪ | ೩ ಗು |

ಪಂಜೆಯವರು ಹೆಚ್ಚಿನ ಕಥನ ಕವನಗಳು ಗೋವಿನ ಕಥೆಯ ಮಟ್ಟಿನಲ್ಲಿಯೇ ಇವೆ. ಆದರೆ ಕೆಲವೊಮ್ಮೆ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ರಚಿಸಿದ್ದಾರೆ 'ಡೊಂಬರ ಚೆನ್ನೆ' ಇದಕ್ಕೆ ಉತ್ತಮ ಉದಾಹರಣೆ

ಆಗ ಒಡೆಯಿತು ಡೋಲು ಬಡಬಡ ಬಾಗಿ ಅರಸಿಗೆ ತಲೆಯನು
ಬೇಗ ತಿರ್ರನೆ ತಿರುಗಿ ಸರ್ರನೆ ಲಾಗ ಹಾಕಿದ ಡೊಂಬನು
ನೀರಿನೊಂದಿಗೆ ಆರುಬಿಂದಿಗೆ ಹೇರಿ ನೆತ್ತಿಯ ಮೇಲಕೆ
ಹಾರಿ ಧಿಕ್ಕಿಟ, ಕುಣಿದನಕ್ಕಟ ನೀರು ಹೊರಗಡೆ ಚೆಲ್ಲದೆ!
(ಕನ್ನಡದ ಎರಡನೆಯ ಪಠ್ಯ ಪುಸ್ತಕ–ಪು. ೩೮)

ಆದ್ದರಿಂದ ಇವರನ್ನು "ಹೊಸಗನ್ನಡದ ಕವಿತೆಗೆ ಇಂಗ್ಲಿಷಿನ ಕವಿತೆಯ ರುಚಿಯನ್ನು ತೋರಿ, ತರಿಸಿ, ಹೊಸ ಕವಿತೆಯ ಹುಟ್ಟಿಗೆ ಕಾರಣರಾದ ಕವಿಗಳ ಗುಂಪಿನಲ್ಲಿ ಪಂಜೆಯವರು ಹಿರಿಯರು

ಎಂದಿದ್ದಾರೆ." ಇವರು 'O Cal my brother back to me' ಎಂಬ ಕವಿತೆಯನ್ನು 'ಅಣ್ಣನ ವಿಲಾಪ' ಎಂಬ ಹೆಸರಿನಲ್ಲಿ ರೂಪಾಂತರಿಸಿದ್ದಾರೆ.

ಅಣ್ಣನ ವಿಲಾಪ ಪದ್ಯ ಉದಾ:-

"ಮಬ್ಬುತೆರೆ ಹಿಂದುಗಡೆ ಜಾರಿದುದು ತಾರೆ;
ಹೆಬ್ಬಿಸಿಲ ಉಗುಳುವಂತಹುದು ಹೊತ್ತಾರೆ
ಉಬ್ಬಸದಿ ಮೊದಲೆ ಬಾಲನ ಮೈಯು ತಾರೆ
ಅಬ್ಬೆ ನಡೆಯುವನೆಂತು? ಬೇಗ ಕರೆತಾರೆ
ಮುತ್ತಿನಾ ಸರಪಳಿಯೆ, ಮಾತಿನರಗಿಳಿಯೆ
ಎತ್ತ ಹೋದನು ತಮ್ಮ ಎಂಬುದನು ತಿಳಿಯೆ
ಇತ್ತವನೆ ಎತ್ತಿದನು ಕೇಳು, ಪುತ್ತಳಿಯೆ
ಬಿತ್ತಿದವ ಒತ್ತರಿಸಿದನು ತನ್ನ ಬಳಿಯೆ"

ಗೋವಿನಹಾಡು ನೀತಿಯನ್ನು ಹೇಳುವ ಬಹಳ ಪ್ರಸಿದ್ಧ ಕಥನಕವನಗಳಲ್ಲಿ ಒಂದು. ಸತ್ಯದ ಶ್ರೇಷ್ಠತೆಯನ್ನು ತಿಳಿಸುವ ಕಥೆ. ಕಥನ ಕವಿತೆಗಳು ಮನರಂಜನೆಯ ಭಾಗದಂತೆ. ಇಂತಹ ನೀತಿಗಳನ್ನು ಹೇಳುವ ಉತ್ತಮ ಪ್ರಕಾರ. ಪಾಶ್ಚಿಮಾತ್ಯ ಕಥನ ಕವನಗಳಲ್ಲಿ ಇದೇ ಅಂಶಗಳನ್ನು ಕಾಣಬಹುದಾಗಿದೆ. ಪಂಜೆ ಮಂಗೇಶರಾಯ, ಕಾಮತ್, ಮಾಸ್ತಿ ಮುಂತಾದವರ ಕಥನಕವನಗಳಲ್ಲಿ ಈ ಅಂಶವನ್ನು ಕಾಣಬಹುದು. ಕಾಮತ್‌ರವರ 'ತೋಳನೂ ಕುರಿಮರಿಯೂ' ಎಂಬ ಕಥನ ಕವನದ ಕೊನೆಯಲ್ಲಿ 'ಮಂದಮತಿಯಲ್ಲಿ ತರ್ಕ ಸಲ್ಲ, ಲೇಸಲ್ಲ' ಎಂಬ ನೀತಿವಾಕ್ಯವನ್ನು ಕಾಣಬಹುದು. ಆನೆ ಆನೆಯೋ, ಇರುವೆಯೂ ಮಿಡಿತೆಯೂ ಮುಂತಾದವು ಇಂಗ್ಲೀಷ್‌ನ ರೂಪಾಂತರ. ಇದರ ಕೊನೆಯಲ್ಲಿ ಕಾಮತ್‌ರವರ ಈ ಶೈಲಿಯನ್ನು ಅನುಸರಿಸಿದ್ದಾರೆ.

"ಕುರಿಗೂಸೆ! ಕಿರಿ ಉಣ್ಣೆ ಮರಿಯೆ! ಬಾ ಇಂದು
ಕರತರಲಿಕೆನ್ನೊಳೊರೆದಳು ನಿನ್ನ ಮಾತೆ
ಬೆರಗಾಗಿ ನೆರೆಗೆ ಬಲು ಕೊರಗಿ ಭಯ ಭೀತೆ" (ತೋಳನೂ ಕುರಿಮರಿಯೂ)

ಬೇಂದ್ರೆಯವರು ಕೃಷ್ಣಕುಮಾರಿ ಎಂಬ ಕಥನ ಕವನವನ್ನು ಬರೆಯುವ ಸಂದರ್ಭದಲ್ಲಿ "ಇದನ್ನು ಬರೆಯುವಾಗ ಬೈರನ್‌ನ ಭಾವನಿರ್ಭರತೆಯೂ ಬ್ರೌನಿಂಗ್‌ನ ವಿಚಾರವೇಗವೂ ನನ್ನ ಲಕ್ಷದಲ್ಲಿದ್ದವು" ಎಂದಿದ್ದಾರೆ.

"ಮುತ್ತಿಂದು ಮದಿರೆಯಲಿ ಬಿತ್ತು, ಬಾಯಿಗೆ ಬಂದ
ತುತ್ತು ಹೊತ್ತಿತ್ತು, ಇಂದು ಸುರಕಲ್ಪವಲ್ಲರಿಯ
ಬಿತ್ತೊಡೆದು ಸತ್ತಿತ್ತು....."

ಹೀಗೆ ಕಥನ ಕಾವ್ಯದ ಪರಂಪರೆ ಅನುವಾದದ ಮೂಲಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿ ಕನ್ನಡಿಗರಿಗೆ ಹೊಸ ಚಿಂತನೆಯನ್ನು ಹುಟ್ಟು ಹಾಕುವಲ್ಲಿ ಕಾರಣವಾಯಿತು. ಅಲ್ಲದೆ ಸಾಮಾನ್ಯರಿಗೂ ಈ ಪ್ರಕಾರವು ಸಾಹಿತ್ಯದ ಸರಳತೆಯನ್ನು ನೀಡಿತು.

**೬. ಇತರೆ ಪ್ರಕಾರಗಳು**

**೧. ಸುನೀತಗಳು**

ಹೊಸಗನ್ನಡ ಕಾವ್ಯ ಪ್ರಕಾರಗಳಲ್ಲಿ ಸುನೀತ ಅಥವಾ ಸಾನೆಟ್ ವಿಶಿಷ್ಟವಾದುದು. ಇಂಗ್ಲಿಷ್ ಕಾವ್ಯ ಪ್ರಪಂಚದಲ್ಲಿ ಈ ಪ್ರಕಾರ ಬಹಳ ಪ್ರಸಿದ್ಧವಾದುದು. ಇದರ ಮೂಲ ಇಟಾಲಿಯನ್. ೧೬ನೇ ಶತಮಾನದಲ್ಲಿ ಇಂಗ್ಲಿಷ್‌ನಲ್ಲಿ ಸಾನೆಟ್ ಹೆಚ್ಚಾಗಿ ರಚನೆಯಾಯಿತು. ಕನ್ನಡದಲ್ಲಿ ಈ ಪ್ರಕಾರವನ್ನು ಗೋವಿಂದ ಪೈಯವರು 'ಚತುರ್ದಶಪದಿ' ಎಂದು ಮೊದಲು ಕರೆದರು. ನಂತರದಲ್ಲಿ ಬೇಂದ್ರೆ, ಮಾಸ್ತಿಯವರು 'ಅಷ್ಟಷಟ್ಪದಿ' ಎಂದು ಕರೆದರು.

ಕನ್ನಡಕ್ಕೆ ಮೊದಲು ಈ ಪ್ರಕಾರವನ್ನು ಪರಿಚಯಿಸಿದವರು ಗೋವಿಂದ ಪೈಯವರು. ಪಾಶ್ಚಿಮಾತ್ಯ ಸಾಹಿತಿಗಳ ಪ್ರಕಾರ ಇದರ ಮೂಲ ವಸ್ತು ಗಂಡು ಮತ್ತು ಹೆಣ್ಣಿನ ಪ್ರೇಮ. ಇದರ ಲಕ್ಷಣವನ್ನು ಕುರಿತು ಗ್ಯಾಸ್ಕಾಯಿನ್ ಎಂಬುವನು ಹೀಗೆ ಹೇಳಿದ್ದಾನೆ "ಕೆಲವರು ಎಲ್ಲಾ ಕವಿತೆಗಳನ್ನೂ (ಸಣ್ಣದಾದುದರಿಂದ) ಸಾನೆಟ್ಟುಗಳೆಂದು ಕರೆಯಬಹುದೆಂದುಕೊಂಡಿದ್ದಾರೆ. ಈ ಪದವು ಸೊನೇರ್ ಎಂಬುದರಿಂದ ಹುಟ್ಟಿದುದು ಎಂಬುದೇ ಇದಕ್ಕೆ ಕಾರಣ. ಆದರೆ ನಾನು, ಹದಿನಾಲ್ಕು ಸಾಲಿದ್ದು, ಪ್ರತಿಯೊಂದು ಸಾಲಿನಲ್ಲಿಯೂ ಹತ್ತು ಉಚ್ಚಾರಾಂಶಗಳಿರುವುದನ್ನು ಮಾತ್ರ ಸಾನೆಟ್ಟೆಂದು ಕರೆಯಲು ಒಪ್ಪುತ್ತೇನೆ. ಮೊದಲ ಹನ್ನೆರಡು ಸಾಲುಗಳಲ್ಲಿ ನಾಲ್ಕು ನಾಲ್ಕು ಸಾಲುಗಳ ನುಡಿಗಳು, ಸಾಲು ಬಿಟ್ಟು ಸಾಲಿನಲ್ಲಿ ಪ್ರಾಸವನ್ನು ಹೊಂದಿವೆ. ಕೊನೆಯೆರಡು ಸಾಲುಗಳಲ್ಲಿ ಪ್ರಾಸ ಬಂದು ಕವಿತೆಯು ಮುಕ್ತಾಯವಾಗುತ್ತದೆ." ಎಂದಿದ್ದಾನೆ."(ಹೊಸಗನ್ನಡ ಕವಿತೆಯ ಮೇಲೆ ಇಂಗಿಷ್ ಕಾವ್ಯದ ಪ್ರಭಾವ-ಪು. ೧೯೪)

ಗೋವಿಂದ ಪೈಯವರು ಬಾಲ್ಯದಲ್ಲಿಯೇ ಈ ಪ್ರಕಾರದಲ್ಲಿ ಕವಿತೆ ರಚಿಸಲು ತೊಡಗಿದರು. ಇದಕ್ಕೆ ಇಂಗ್ಲಿಷ್ ಸಾಹಿತ್ಯವೇ ಪ್ರೇರಣೆಯೆಂದು ತಾವೇ ಪ್ರಾಸತ್ಯಾಗದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. (ಹೊಸಗನ್ನಡ ಕವಿತೆಯ ಮೇಲೆ ಇಂಗಿಷ್ ಕಾವ್ಯದ ಪ್ರಭಾವ-ಪು, ೨೦೧). ಇವರ ಸಾನೆಟ್ ಶೈಲಿಯ ಮಾದರಿ-

"ನಿನ್ನ ಮರೆವೊಗುವ ಬಳಿದೋರಿಸೆನಗೆರೆಯಾ"
'ಸರ್ವ ಧರ್ಮವ ನೀಗಿಮರೆಯ ಸೇರೆನ್ನ
ಸರ್ವ ಪಾಪದಿ ವಿಮೋಚಿಸುವೆ ನಾನಿನ್ನ'
ಸಿಡಿಲ ರಭಸದಿ ಮಿಂಚಲೀ ಭವದ್ಗೀತಂ
ವಿಶ್ವತೋಮುಖವಾಗಿ ಜಗದೆದೆಗೆ ಸೇರಿ
ಜೀವನ ರಣಾಂಗಣದ ಪ್ರಸ್ತಾನ ಭೇರಿ
ಯಿದನಾಲಿಸಿನ್ನಹೆನೆ ಬಾಳ್ವೆಗಾಂ ಭೀತಂ?
ಜ್ಞಾನಮಜ್ಞಾನಕೃತ ಪಾತಕದೊಳೆಲ್ಲ
ಸುತ್ತುವಂದೆತ್ತೆತ್ತಲೊತ್ತಿ ಮನಮೆನ್ನ
ಧ್ರುವತಾರೆಗಭಿಮುಖಮಯಸ್ಕಾಂತದನ್ನ
ನಿನ್ನಡಿಯ ನೆನವನ್ನೆ ಹಂಬಲಿಪುದಲ್ಲ!
ಆದುದರಿನಘದ ನಿಷ್ಕೃತಿಯನಘದಿ ಮುಂದೆ ;
ಪಾಪಾತ್ಮನೆನ್ನ ಪಾಪದ ಮೊರೆಯಿದೊಂದೆ
ನಿನ್ನ ಮರೆವೊಗುವ ಬಳಿದೋರಿಸೆನಗೆರೆಯಾ !"

ಇವರು ಕನ್ನಡದಲ್ಲಿ ೧೯೧೮ರಲ್ಲಿ ಬರೆದ ಮೊದಲ ಸಾನೆಟ್ 'ಕವಿತಾವತಾರ'. ನಂತರದಲ್ಲಿ 'ಮಾ ನಿಷಾದ' ಎಂಬ ಮತ್ತೊಂದು ಸಾನೆಟ್ ಬರೆದರು. ಇಂಗ್ಲಿಶ್‌ನ ಪೆಟ್ರಾರ್ಕ್, ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್, ಶೆಲ್ಲಿ ಮುಂತಾದವರ ಸಾನೆಟ್‌ನಿಂದ ಕನ್ನಡದ ಸಾನೆಟ್ ಪ್ರಭಾವಿತವಾಗಿದೆ.

ಸಾನೆಟ್‌ನ ಮಾದರಿಯ ರಚನೆಯಲ್ಲಿ ತೊಡಗಿದ ಮತ್ತೊಬ್ಬರು ಮಾಸ್ತಿಯವರು. ಅವರು ಆಂಗ್ಲ ಸಾಹಿತ್ಯವನ್ನು ಅನುಕರಿಸಿ ಬರೆಯುವ ತಮ್ಮ ಮನೋಭಾವವನ್ನು ಹೀಗೆ ಹೇಳಿದ್ದಾರೆ– "ಆಂಗ್ಲ ಸಾಹಿತ್ಯದ ಒಂದು ಜಾತಿಯ ಪದ್ಯಬಂಧವನ್ನು ಅನುಸರಿಸಿದೆ ಎಂದ ಮಾತ್ರಕ್ಕೆ ಈ ಕವಿತೆ ನಮಗೆ ಬೇಡವೆಂದು ನಮ್ಮ ಜನರು ಹೇಳಲಾರರೆಂದು ನನ್ನ ನಂಬಿಕೆ" ಎಂದು ಹೇಳಿದ್ದಾರೆ. ಜೊತೆಗೆ ಕಾವ್ಯದ ಶೈಲಿ ಹೊರಗಿನದ್ದಾದರು ಅದರ ಭಾವ ಇಲ್ಲಿಯದ್ದೇ ಎಂದು ಹೇಳುವಾಗ ಈ ಮಾತು ಅನ್ವಯವಾಗುವಂತಹುದು–"ಈ ಕಾವ್ಯದಲ್ಲಿ ಬಂದಿರುವ ಭಾವವೆಲ್ಲ ನಮ್ಮ ಬಾಳಿನಿಂದ ಬಂದಿರುವುವು, ನನ್ನ ಬಾಳಿನಲ್ಲಿ ಬೆಳೆದಿರುವವು. ಇವು ನಮ್ಮ ನಾಡಿನವಲ್ಲದಿರಲು ಕಾರಣವೇ ಇಲ್ಲ. ಹೊಸದಾಗಿದೆ ಎಂಬ ಈ ಕವಿತೆಗಳ ಬಂಧವೂ ಕೂಡ ನಮ್ಮ ಭಾಷೆಯಲ್ಲಿ ತಾನಾಗಿ ಬರಬಹುದಾದ ಬಂಧ". ಸಾನೆಟ್‌ಅನ್ನು ಕುರಿತಂತೆ ಅವರೆ ಬರೆದಿರುವ ಸಾಲುಗಳು ಇಂತಿವೆ–

"ಹದಿನಾಲ್ಕು ಸಾಲಿನಲಿ ಬರೆದ ಪದ್ಯವ ನೋಡಿ
ಇದು ಕನ್ನಡದ ಕವಿತೆಯಲ್ಲೆಂಬರಿರಬಹುದು,
ಅದೋಡಿದೀದಿನ ನಾನು ನಿನ್ನಡಿಗೆ ತರುತಿಹುದು
ಸಾಲುಗಳ ಕಟ್ಟುಗಳನ್ನಲ್ಲ ....."

* * * *

ಆಕಾರ ತೋರಿಕೆ
ಹೊಸತಾದೊಡೇನು? ಇದರಲಿ ಯಾವುದಿದೆ ಚಂದ
ಅದು ನೀನು ಎನ್ನೊಳೂದಿದ ಉಸಿರ ಭಾವವನ್ನ"

(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೨೧೮)

ಸಾನೆಟ್ ಪ್ರಕಾರದಲ್ಲಿ ಹೊರಟವರಿಗೆ ತಮ್ಮ ಭಾವನೆಗೆ ತಕ್ಕ ಹಾಗೆ ಅದರ ಸ್ವರೂಪವನ್ನು ಬದಲಾಯಿಸಿಕೊಳ್ಳಲು ಸೂಕ್ತವಾದ ಪ್ರಕಾರ ಎಂದು ವಿ.ಸೀತಾರಾಮಯ್ಯನವರ ಅಭಿಪ್ರಾಯ "ಎಷ್ಟು ಜನ ಎಷ್ಟು ಬಗೆಯ ಮನಸ್ಸಿನ ಅಗತ್ಯಗಳಿಗೂ ಬನಿಗಳಿಗೂ ಈ ಪ್ರಕಾರವನ್ನು ಉಪಯೋಗಿಸುತ್ತಾರೋ ಅಷ್ಟು ಬಗೆಯ ವಿತರಣೆ, ವಿಚಕ್ಷಣೆಯನ್ನು ಈ ಸಾನೆಟ್ ಶಿಲ್ಪದಲ್ಲಿ ರೂಪಿಸಬಹುದಾಗಿದೆ. ಒಂದು ಭಾವಕ್ಕಾಗಿ ಒಂದು ಶಿಲ್ಪ; ಈ ಪ್ರಕಾರದ ಶಿಲ್ಪಕ್ಕಾಗಿಯೇ ಈ ಭಾವ ರೂಪ ತಾಳಿತೋ ಎಂಬಂತೆ ಭಾವ ಆದಿ ಮಧ್ಯ ಅಂತ್ಯ ಹೊಂದಬೇಕು"(ಹೊಸಗನ್ನಡ ಕವಿತೆಯ ಮೇಲೆ ಇಂಗಿಷ್ ಕಾವ್ಯದ ಪ್ರಭಾವ-ಪು. ೨೧೪)

ಬೇಂದ್ರೆಯವರು ಅನೇಕ ಸಾನೆಟ್‌ಗಳನ್ನು ರಚಿಸಿದ್ದಾರೆ. ತಾನು ಬರೆದ ಸೀಸ ಪದ್ಯಗಳಿಗೆ ಸಾನೆಟ್ ಪ್ರೇರಣೆ ಎಂದಿದ್ದಾರೆ "ನಾನು ಬರೆದ ಸೀಸಪದ್ಯಗಳು ಲಕ್ಷಣಬದ್ಧವಾದ ಸಾಂಪ್ರದಾಯದ-ಸೀಸಪದ್ಯಗಳಲ್ಲ. ಮೂಲ ಸೀಸಪದ್ಯವು ದ್ರಾವಿಡ ಮಾರ್ಗದ ಗಣವೃತ್ತವಾಗಿದೆ. ನನ್ನದೊ ಶುದ್ಧ ಮಾತ್ರಾವೃತ್ತ; ಮಾತ್ರಗಣಬದ್ಧವಾಗಿದೆ... ಒಂದು ವಿಧದ ಪ್ರಾಸ ರಚನೆಯೂ ಇದೆ. ಈ ಕವನರೂಪವನ್ನು ಕೂಡ ನಾನು ಸಾನೆಟ್ ಕಣ್ಣೆದುರಿಟ್ಟು ರಚಿಸಿದ್ದೇನೆ" ಎಂದಿದ್ದಾರೆ. ಹೀಗೆ ಕನ್ನಡ ಸಾಹಿತ್ಯದಲ್ಲಿ ಸುನೀತ ಪ್ರಕಾರವು ಇಂಗ್ಲಿಷ್ ಸಾಹಿತ್ಯದ ಮೂಲಕ ಪ್ರವೇಶವನ್ನು ಪಡೆಯಿತು.

೨. ಪ್ರಗಾಥ

ಹೊಸಗನ್ನಡ ಕಾವ್ಯದ ಮತ್ತೊಂದು ಪ್ರಕಾರವೇ ಪ್ರಗಾಥ. 'ಗಾಥ' ಎಂದರೆ ಹಾಡು ಎಂಬ ಅರ್ಥವಿದೆ. ಇದರ ಮೂಲ ಗ್ರೀಕ್. "ಭಾವಗೀತೆಯಂತೆ ವಾದ್ಯದ ಜೊತೆಗೆ ಹಾಡಲು ಬರೆದ ಘೋಷ (chant) ರೂಪವಾದ ಕವಿತೆಯೇ ಓಡ್."(ಹೊಸಗನ್ನಡ ಕವಿತೆಯ ಮೇಲೆ ಇಂಗಿಷ್ ಕಾವ್ಯದ ಪ್ರಭಾವ-ಪು. ೨೨೩). ಪಿಂಡಾರ ಎಂಬ ಕವಿಯ ಪ್ರಗಾಥವೇ ಬಹಳ ಪ್ರಸಿದ್ಧವಾದದ್ದು.

ಇಂಗ್ಲಿಷಿನ ಓಡ್ ಗ್ರೀಕ್ ಸಾಹಿತ್ಯದ ಪ್ರೇರಣೆಯೇ ಆಗಿದೆ. ಅಬ್ರಹಂ ಕೌಲಿ ಇದರ ಮುನ್ನುಡಿಕಾರ. ಪ್ರಗಾಥ ಪ್ರಕಾರವು ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಾಗಿದ್ದರೂ, ಹೆಸರು ಸಂಸ್ಕೃತದ ಮೂಲವಾಗಿದೆ. ಬಿ.ಎಂ.ಶ್ರೀಯವರು ಈ ಪ್ರಕಾರಕ್ಕೆ ಪ್ರಗಾಥ ಎಂದು ನಾಮಕರಣ ಮಾಡಿದರು.

ಈ ಪ್ರಕಾರವನ್ನು ಕುರಿತು ಶ್ರೀಯವರು ಹೀಗೆ ವಿವರಿಸಿದ್ದಾರೆ. "೮ ಮತ್ತು ೧೦ ಅಕ್ಷರಗಳ ಪಾದಗಳನ್ನು ಬೆರೆಸಿ ನಾಲ್ಕು ಪಾದದ ವೃತ್ತವನ್ನು ಏಳರವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕ ಕವಿಗಳು ರಚಿಸಿದರು. ಇವು ಬಹು ಗಂಬೀರವಾಗಿಯೂ ಉತ್ಸಾಹಪೂರಿತವಾಗಿಯೂ ಇರುತ್ತವೆ... ಈ ವೈದಿಕ ವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ ಬಿಟ್ಟು ಹೋದುವು, ಕನ್ನಡ ಕವಿಗಳಿಗೂ ಕಣ್ಮರೆಯಾದುವು. ಮುಂದೆ ಬರುವ ಕವಿಗಳಾದರೂ ಜೀವಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೇ?"(ಹೊಸಗನ್ನಡ ಕವಿತೆಯ ಮೇಲೆ ಇಂಗಿಷ್ ಕಾವ್ಯದ ಪ್ರಭಾವ–ಪು. ೨೨೩).

ಕನ್ನಡದಲ್ಲಿ ಮೊದಲು ಡಿ.ವಿ.ಗುಂಡಪ್ಪನವರು ಪ್ರಗಾಥದಲ್ಲಿ ಇಂಗ್ಲಿಷ್‌ನ ಕವಿತೆಯನ್ನು ಅನುವಾದಿಸಿದರು. ಕೀಟ್ಸ್ ಕವಿಯ 'Ode on a Grecian Urn' ಯನ್ನು 'ಬೇಲೂರಿನ ಶಿಲಾಬಾಲಿಕೆಯರು' ಎಂದು ರೂಪಾಂತರಿಸಿದರು. ಈ ಎರಡೂ ಪ್ರಗಾಥಗಳ ವಸ್ತು, ಶೈಲಿ ಒಂದೆ ರೀತಿಯಲ್ಲಿದೆ. ಈ ಭಾಗವನ್ನು ಗಮನಿಸಿ

"When old age shall this generation waste,
Thou shait remain, in midst of other woe
Then ours, a friend to man, to whom thou say'st
'Beauty is truth, truth Beauty'

"ಚಿರಕಾಲಮೆಸೆವುದೌ ಚಿತ್ತವೇದಿನಿಯರಿರ
ಕುದಿವ ಲೋಕಕೆ ಮುದದ ತಣಿವ ಬೀರಿ ।
ಸೌಂದರ್ಯವೇ ವಿಶ್ವತತ್ತ್ವಮಾ ಪರತತ್ತ್ವ
ಭಾಸಮೇ ಸೌಂದರ್ಯಮೆನುತ ಸಾರಿ"
(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೨೮)

ಈ ಪ್ರಗಾಥದ ಲಕ್ಷಣವು ಕುವೆಂಪು, ಗೋವಿಂದ ಪೈರವರ ಪ್ರಗಾಥಗಳಲ್ಲಿ ಕಾಣಬಹುದಾಗಿದೆ. ಕುವೆಂಪುರವರ 'ಗೊಮ್ಮಟೇಶ್ವರ' ಹಾಗೂ ಗೋವಿಂದ ಪೈಯವರ 'ಶ್ರೀ ಗೊಮ್ಮಟ ಜಿನಸ್ತುತಿ'ಯಲ್ಲಿ ಇದೇ ಪದ ಲಾಲಿತ್ಯವನ್ನು ಕಾಣಬಹುದು. ಪ್ರಗಾಥದ ಲಕ್ಷಣವನ್ನು ಆರ್.ಎಂ.ಆಲ್ಡನ್ ಹೇಳುವಂತೆ "ಮೇಲೆ ವಿಚಾರವಾಹಿನಿ, ಒಳಗೆ ಭಾವದ ಪ್ರವಾಹ; ಭಾವಗೀತೆಯ ಪ್ರಕಾರಗಳಲ್ಲಿ ಅತ್ಯಂತ

ವಿಚಾರಯುತವಾದುದು. ಪ್ರಜ್ಞಾಪೂರ್ವಕವಾದ ಕಲೆಗಾರಿಕೆಯ ಸಿದ್ಧಿಯುಳ್ಳದ್ದು ಪ್ರಗಾಥ" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೧೭೬) ಎಂದಿದ್ದಾರೆ.

ಇಂಗ್ಲಿಷ್‌ನಿಂದ ಈ ಪ್ರಕಾರದಲ್ಲಿ ಕನ್ನಡಕ್ಕೆ ಅನುವಾದಗೊಂಡಿರುವುದು ಕಡಿಮೆಯಾದರೂ ಷೆಲ್ಲಿ, ಕೀಟ್ಸ ರಂತಹ ಕವಿಗಳ ಕಾವ್ಯಗಳ ಪ್ರೇರಣೆ ನೇರವಾಗಿ ಇಲ್ಲವೆ ಸೂಕ್ಷ್ಮವಾಗಿ ಇದೆ. ಈ ಪ್ರಕಾರದಲ್ಲಿ ಹೆಚ್ಚು ಬರೆದವರೆಂದರೆ ಮಾಸ್ತಿ ಹಾಗೂ ಬಿ.ಎಂ.ಶ್ರೀಯವರು. ಮಾಸ್ತಿಯವರ ಅರುಣ ಹೊಸ ಮಾದರಿಯಲ್ಲಿ ರಚನೆಯಾದ ಪ್ರಗಾಥವಾಗಿದೆ. ಮಾಸ್ತಿಯವರ ಪ್ರಗಾಥದ ಶೈಲಿ ಹೀಗಿದೆ:-

"ತಿಳಿನೀರಿನಲಿ ಮರಿಮೀಂಗಳು ಹಿರಿಯರ
ಬಳಿಯಲಿ ಚಲಿಸದೆ ನಿಂದವೊಲುದಯದ
ಕಿರುತಾರೆಗೆ ಕಣ್ಮಿಸುಕದೆ ನಭದಲಿ
ಹಿರಿತಾರೆಗಳೊಡನಿರುತಿರೆ, ನೀನು
ಹುಡುಗನ ತೆರದಿ
ಬೆರಳ ತೋರಲವು
ಹರಿದೋಡುವುವು:
ಸಡಗರದಿಂದೆ
ತಿರುಗಿ ಮಾರ್ಗದಲಿ ಕೆಲದಲಿ ನಿಲ್ಲುತೆ,
ಇಲ್ಲಿಗು ಬಹನೋ ಎಂದವು ನೋಡಲು,
ಮರಳಿ ಬಂದು ಅವ ಹೆದರಿಸಿ ಓಡಿಸಿ
ಚೆಲ್ಲಾಟವನಾಡುವೆ ನೀ ಸತತವು"

(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೨೩೨)

ಈ ಪ್ರಕಾರಕ್ಕೆ ವಿಶೇಷ ಕೊಡುಗೆ ನೀಡಿದವರೆಂದರೆ ಬಿ.ಎಂ.ಶ್ರೀಯವರು. ಇವರು ಒಟ್ಟು ಮೂರು ಪ್ರಗಾಥಗಳನ್ನು ರಚಿಸಿದ್ದಾರೆ. ಅವುಗಳೆಂದರೆ 'ಶ್ರೀಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ', 'ಕನ್ನಡ ತಾಯ ನೋಟ' ಮತ್ತು 'ಶುಕ್ರಗೀತೆ'. ಅವರ ಶೈಲಿ ಇಂತಿದೆ-

'ಕಾಯಿ, ತಾಯಿ, ಕೃಪೆಯ ತೋರಿ,
ನಮ್ಮ ಕೃಷ್ಣನ;
ಬೆಳ್ಳಿಬೆಟ್ಟದೊಡತಿ, ಗೌರಿ

ಬೆಳ್ಳಿಯೊಸಗೆಗೊಸಗೆ ಬೀರಿ
ಕಾಯಿ ಕೃಷ್ಣನ.
ಏಳು, ವಾಣಿ, ವೀಣೆದಾಳು
ಅಮೃತವಾಣಿಯಿಂದ ಹೇಳು,
ಪುಣ್ಯದರಸು, ಧರ್ಮದಾಳು
ದೊರೆಯ, ಕೃಷ್ಣನ,"

(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೩೫)

ಇಂತಹ ಹೊಸ ಕಾವ್ಯಗಳ ಮಾದರಿಗಳು ಕನ್ನಡ ಸಾಹಿತ್ಯವನ್ನು ಪ್ರವೇಶಿದವು. ನಂತರದಲ್ಲಿ ಕುವೆಂಪು, ಪುತಿನರಂತಹ ಕವಿಗಳೂ ಈ ಪ್ರಕಾರದಲ್ಲಿ ಕೃಷಿಯನ್ನು ಮಾಡಿದರು.

**೩. ಸರಳ ರಗಳೆ**

ಇಂಗ್ಲಿಷ್‌ನ ಬ್ಲಾಂಕ್‌ವರ್ಸ್ ಕನ್ನಡದಲ್ಲಿ ಸರಳ ರಗಳೆಯಾಗಿದೆ. ಕನ್ನಡದ ಲಲಿತ ರಗಳೆಯೇ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಸರಳ ರಗಳೆಯಾಯಿತು. "ಕಥಾಕಾವ್ಯಕ್ಕೆ ಇಷ್ಟು ಉಚಿತವಾದ ಮಟ್ಟುಗಳನ್ನು ಹಿಂದಿನ ಕವಿಗಳು ಏಕೆ ನಿರಾಕರಿಸಿದರೋ! ಆಧುನಿಕ ಕಾಲದಲ್ಲಿ ಮಾತ್ರ ರಗಳೆಗೆ ಮತ್ತಷ್ಟು ಪ್ರಾಶಸ್ತ್ಯ ದೊರೆತಿದೆ. ಲಲಿತ ರಗಳೆಯ ಪ್ರಾಸಗಳನ್ನು ತಡೆಯಿಲ್ಲದೆ ಅರಿಯಬಿಡುವುದರಿಂದ ಹುಟ್ಟಿರುವ ಸರಳ ಮಾಡಿ ಚರಣಗಳನ್ನು ತಡೆಯಿಲ್ಲದೆ ಹರಿಯಬಿಡುವುದರಿಂದ ಹುಟ್ಟಿರುವ ಸರಳ ರಗಳೆ ಈಗಾಗಲೇ ಕವಿಪ್ರಿಯವಾಗಿದೆ. ಇಂಗ್ಲಿಷ್‌ನ ಬ್ಲಾಂಕ್‌ವರ್ಸ್ ಎಂಬ ಮಟ್ಟಿನಂತೆ ನಾಟಕಗಳನ್ನೂ, ಕಥಾಕಾವ್ಯಗಳನ್ನೂ ಬರೆಯುವುದಕ್ಕೆ ಇದನ್ನು ಉಪಯೋಗಿಸುವ ಪ್ರಯತ್ನವು ಆಶಾ ಜನಕವಾಗಿ ನಡೆಯುತ್ತಿದೆ" ಎಂದು ತೀ.ನಂ.ಶ್ರೀಯವರು ಹೇಳಿದ್ದಾರೆ.(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೪೭)

ಹೊಸಗನ್ನಡದಲ್ಲಿ ಈ ಪ್ರಕಾರ ಹೆಚ್ಚು ಪ್ರಾಶಸ್ತ್ಯ ಪಡೆಯಲು ಕಾರಣ ಕನ್ನಡದಲ್ಲಿ ಇದ್ದ ರಗಳೆ ಎಂಬ ಛಂದಸ್ಸಿನ ಒಂದು ಪ್ರಭೇದದ ರೀತಿಯಲ್ಲಿದೆ. ಲಲಿತ ರಗಳೆಯಲ್ಲಿನ ಆದಿಪ್ರಾಸ ಹಾಗೂ ಅಂತ್ಯ ಪ್ರಾಸಗಳನ್ನು ತೆಗೆದರೆ ದೊರೆಯುವ ಸ್ವರೂಪವೇ ಈ ಸರಳ ರಗಳೆ. ಕನ್ನಡ ಕಾವ್ಯ ಲಕ್ಷಣಗಳಲ್ಲಿ ಒಂದಾಗಿದ್ದ ಪ್ರಾಸವು ಎಷ್ಟೋ ಜನರಿಗೆ ಸಾಹಿತ್ಯ ರಚನೆಗೆ ತೊಡಕಾಗಿದ್ದವು. ಅದರಲ್ಲೂ ಮಹಾಕಾವ್ಯಗಳ ರಚನೆಗೆ ಪ್ರಾಸದ ನಿಯತತೆ ಸಮಸ್ಯೆಯೇ.

ಸರಳ ರಗಳೆ ಇಂಗ್ಲಿಷ್‌ನ ಯಥಾವತ್ತಾದ ಸ್ವೀಕಾರವಲ್ಲ. ಹರಿಹರನಿಂದ ಆರಂಭವಾದ ರಗಳೆಯ ಸ್ವಲ್ಪ ಬದಲಾದ ಸ್ವರೂಪ ಇದಾಗಿದೆ. ನಿಯಮಿತ ಪಾದಗಳ ನಿರ್ಬಂಧವಿಲ್ಲದ ಒಂದು ದೇಸೀ ಛಂದೋರೂಪ. ಇವೆರಡರ ನಡುವೆ ಇರುವ ಬಹು ಮುಖ್ಯವಾದ ವ್ಯತ್ಯಾಸವೆಂದರೆ ಪ್ರಾಸದ ನಿಯತತೆ. ಸರಳರಗಳೆಯು ಪ್ರಾಸ ರಹಿತವಾದ ಪ್ರಕಾರ.

೨೦ನೇ ಶತಮಾನದಲ್ಲಿ ಹೊಸ ಮಾದರಿಯ ಪ್ರಕಾರಗಳು ನಮ್ಮ ಮುಂದಿದ್ದರೂ ನಮ್ಮ ಕವಿಗಳು ಮಹಾಕಾವ್ಯಗಳ ರಚನೆಗೆ ತೊಡಗಿಕೊಂಡರು. ಆದರೆ ಈ ಮಹಾಕಾವ್ಯದ ಸ್ವರೂಪವು ಹೊಸ ಸ್ವರೂಪವನ್ನು ಒಳಗೊಂಡಿತು. ಇದಕ್ಕೆ ಪಾಶ್ಚಾತ್ಯ ಕಾವ್ಯದ ಪ್ರೇರಣೆಯೇ ಕಾರಣ. ಭಾರತೀಯ ಮಹಾಕಾವ್ಯಗಳ ಲಕ್ಷಣಗಳನ್ನು ಬಿಟ್ಟು ಹೊಸ ಛಂದೋರೂಪ, ಶೈಲಿ, ಧೋರಣೆ, ಭಾಷೆಯಲ್ಲಿ ಹೊಸತನ ಕಾಣಿಸಿತು. ಇದಕ್ಕೆ ಉತ್ತಮ ಉದಾಹರಣೆ ಕುವೆಂಪುರವರ ಶ್ರೀ ರಾಮಾಯಣ ದರ್ಶನಂ, ಮಾಸ್ತಿಯವರ ಶ್ರೀರಾಮ ಪಟ್ಟಾಭಿಷೇಕ, ಗೋವಿಂದ ಪೈರವರ ಗೊಲ್ಗೋಥಾ ಮತ್ತು ವೈಶಾಖ ಖಂಡಕಾವ್ಯಗಳು.

ಗಣ ನಿಯಮ ೫ ಮಾತ್ರೆಯ ೪ ಗಣಗಳು ಪ್ರತಿ ಪಾದದಲ್ಲಿ ನಿಯತವಾದರೂ ಸರಳ ಹಾಗೂ ಸುಲಲಿತವಾದ ಕಾವ್ಯ ರಚನೆಗೆ ಪೂರಕವಾಗಿದೆ. ಆದರೆ ಕೆಲವೊಮ್ಮೆ ಕನ್ನಡದಲ್ಲಿ ಪ್ರತೀ ಪಾದದಲ್ಲಿ ೨೦ ಮಾತ್ರೆಗಳು ಇದ್ದರೂ ೫ ಮಾತ್ರೆಯ ಪದಗಳಾಗಿ ವಿಂಗಡಿಸಲು ಸಾಧ್ಯವಾದ ಮಾದರಿಗಳು ರಚನೆಯಾಗಿವೆ. ಉದಾಹರಣೆಗೆ–

"ಕೋಳಿ ಮೂರನೇ ಬಾರಿ ಕೂಗಿ ಯೇಸುವ ಕೊಲ್ಲ
ಲೆಳಸಿದ ಯೆಹೂದ್ಯರ ಮನಸ್ಸಾಕ್ಷಿಯೊಲು ಸುಮ್ಮ
ನಾಗೆ ಕಾಯಫನಕಟ ನಡೆಸಿದ ವಿಚಾರಣೆಯ
ಕೆಟ್ಟ ನೀತಿಗೆ ಹೇಸಿ ಬೆಳುಗದಿರನೆಳೆವೋಗೆ"

ಈ ಪದ್ಯ ಭಾಗದಲ್ಲಿ ಪ್ರಾಸದ ನಿಯತತೆ ಇಲ್ಲ ಹಾಗೂ ಪದ್ಯದ ಪ್ರತಿ ಸಾಲುಗಳು ೨೦ ಮಾತ್ರೆಯನ್ನು ಹೊಂದಿದೆಯಾದರೂ ೫ ಮಾತ್ರೆಯ ನಾಲ್ಕು ಗಣಗಳಾಗಿ ವಿಂಗಡಿಸಲು ಸಾಧ್ಯವಿಲ್ಲ. ಇಲ್ಲಿ ಕವಿಯ ಧೋರಣೆ ಕಾವ್ಯದ ವಿವರಣೆಯನ್ನು ಸಮರ್ಪಕವಾಗಿ ನಿಭಾಯಿಸುವುದಾಗಿದೆ. ಇದು ಹೊಸಗನ್ನಡದಲ್ಲಿ ಕಾಣಿಸಿಕೊಂಡ ಪ್ರಮುಖ ಬದಲಾವಣೆ.

ಆದರೆ ಇಂತಹ ಬದಲಾವಣೆಗಳೂ ಇಡೀ ಛಂದೋ ನಿಯಮವೇ ಅಳಿಸಿ ಹಾಕಿ ಕಾವ್ಯದ ಸೊಬಗು ನಾಶವಾಗುತ್ತಿದೆ ಎಂದು ವಿ.ಕೃ.ಗೋಕಾಕರು ಹೀಗೆ ಹೇಳಿದ್ದಾರೆ "ಐದು ಮಾತ್ರೆಗಳ ನಾಲ್ಕು ಗಣಗಳಿರಬೇಕೆಂಬ ನಿಯಮಕ್ಕೆ ಅಸ್ತಿತ್ವವೇ ಇಲ್ಲವಾಗಿದೆ......೨೦ ಮಾತ್ರೆಗಳಿದ್ದರಾಯಿತು; ಅವುಗಳನ್ನು ಯಾವ ಗಣಗಳಾಗಿಯೂ ವಿಭಾಗಿಸಬಹುದೆಂದು ಕಲ್ಪಿಸಬಹುದು"(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೨೪೯) ಎಂಬ ಮಾತನ್ನು ಬಹಳ ವಿಷಾದದಿಂದಲೇ ಹೇಳಿದ್ದಾರೆ. ಇದಕ್ಕೆ ಕಾರಣ ಪೂರ್ಣ ಪ್ರಮಾಣದಲ್ಲಿ ಕಾವ್ಯದ ಲಕ್ಷಣ ನಶಿಸಿಹೋದರೆ ಕಾವ್ಯವೇ ನಶಿಸಿದಂತೆ. ಕಾವ್ಯಕ್ಕೂ ಗದ್ಯಕ್ಕೂ ವ್ಯತ್ಯಾಸವೇ ಇಲ್ಲದಂತಾಗುತ್ತದೆ. ತೀರಾ ತೊಡಕಾಗಿರುವ ವಿಷಯಗಳಲ್ಲಿ ಬದಲಾವಣೆ ಅವಶ್ಯಕ. ಅಲ್ಲದೆ ಪ್ರತಿಯೊಂದು ಪ್ರಕಾರಕ್ಕೂ ತನ್ನದೆ ಆದ ವೈಶಿಷ್ಟ್ಯತೆಯಿದೆ. ಆದ್ದರಿಂದ ಇಂತಹ ಬದಲಾವಣೆ ಕುರಿತು ಗೋಕಾಕರು ಹೀಗೆ ಹೇಳಿದ್ದಾರೆ.

ಕನ್ನಡದಲ್ಲಿ ಮೊದಲು ಸರಳ ರಗಳೆಯನ್ನು ಬಳಸಿ ಕಾವ್ಯ ರಚಿಸಿದವರೆಂದರೆ ಮಾಸ್ತಿಯವರು. ೧೯೨೪ರಲ್ಲಿ ಮಾಸ್ತಿಯವರು ಬರೆದ 'ಸ್ಥಳಗಳ ಹೆಸರು' ಎಂಬ ಕವಿತೆಯು ಮೊದಲು ಸರಳ ರಗಳೆಯಲ್ಲಿ ರಚನೆಯಾದ ಕವಿತೆಯಾಗಿದೆ. ಆದರೆ ಇದಕ್ಕೆ ಈ ಹೆಸರನ್ನು ಇಟ್ಟವರು ತೀ.ನಂ.ಶ್ರೀಯವರು. ಮಾಸ್ತಿಯವರು ಇದಕ್ಕೆ ಬಿಡಿವೃತ್ತ ಎಂದು ಕರೆದರು. "..... ಶ್ರೀನಿವಾಸರವರ ಕೈಯಲ್ಲಿ ಸರಳ ರಗಳೆಯು ರಗಳೆಯಾಗಲಿಲ್ಲ. ರಸದೂಟವಾಯಿತು" (ಜಹನಾರ-ಪು. ೩) ಎಂದು ರಂ.ಶ್ರೀ.ಮುಗಳಿಯವರು ಹೇಳಿದ್ದಾರೆ. ಅವರ ಕಾವ್ಯ ಶೈಲಿ ಈ ರೀತಿಯಿದೆ-

"ಎಲ್ಲೆಡೆಯು ಬೆಳಕು ತುಂಬಿಹುದು; ಸಂತಸದ ದಿನ;
ಹುಡುಗ ಹುಡುಗಿಯರು ಎಲೆ ಅಡಿಕೆ ಅಗಿದಿರುವರು;
ಹುಡುಗನಿಗೆ ಸರಸದಲಿ ಆಸೆ; ಈ ನಾದಿನಿಯೊ
ಸರಸದಲಿ ಪಂತವನು ಹೂಡಿ ಮಾತಾಡುವಳು;
ಪಂತವನು ಹೂಡಿ ಹರೆಯದ ಹುಡುಗಿ ನುಡಿಸುತಿರೆ
ಪಂತವಾಡದ ಜವ್ವನಿಗನುಂಟೆ?"(ಮದಲಿಂಗನ ಕಣಿವೆ)

ಗೋವಿಂದ ಪೈರವರು ತಮ್ಮ ಗೊಲ್ಗೊಥಾ ಖಂಡಕಾವ್ಯದಲ್ಲಿ ಬಳಕೆಯಾಗಿರುವ ಛಂದೋರೂಪವನ್ನು ಕುರಿತು "ಮೊದಲ ದೃಷ್ಟಿಗೆ ಇದನ್ನು ಷೇಕ್ಸ್‌ಪಿಯರ್, ಮಿಲ್ಟನ್ ಮೊದಲಾದ ಆಂಗ್ಲ ಕವಿಗಳ ಕೃತಿಗಳಲ್ಲಿಯ 'ಸರಳ ರಗಳೆ'ಯಿಂದ ಎತ್ತಿಕೊಂಡಿರುವಂತೆ ತೋರಬಹುದಾದರೂ, ಆ ಭಾವನೆ ಬರಿಯ ಹೋಲುವೆಯನ್ನು ಕುರಿತು ಮಾತ್ರ ಒಪ್ಪಬಹುದಲ್ಲದೆ ಇದರ ಜೀವಾಳವನ್ನು ಕುರಿತಲ್ಲ..... ಕ್ರಿ.ಶ ೯೪೨ರಲ್ಲಿ ರಚಿತವಾದ ಆದಿಪುರಾಣದಲ್ಲಾದರೊ (VII ೨೭-೨೮ನೆಯ ಪದ್ಯಗಳ ನಡುವೆ) ನಮ್ಮ ಛಂದಸ್ಸಿನೋಪಾದಿಯದೇ ಪ್ರತ್ಯೇಕ ಚರಣದಲ್ಲಿ ೫-೫ ಮಾತ್ರೆಗಳ ೪ ಗಣಗಳುಳ್ಳ ಲಲಿತ ರಗಳೆಯಿದೆ. ಆತ ಏವ ನಮ್ಮ ಛಂದಸ್ಸು ಪಂಪನ ಅಥವಾ ಅವನಿಗೂ ಹಿಂದಣ ಆ ಲಲಿತ ರಗಳೆಯದೇ ನೆಟ್ಟನೆಯ ಪುತ್ರಿಕೆಯಲ್ಲದೆ ಸರ್ವಥಾ ಆಂಗ್ಲ ಸರಳ ರಗಳೆಯ ಅನುಕರಣೆಯಲ್ಲ" (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೨೫೫)

ಗೋವಿಂದ ಪೈರವರ ಈ ಹೇಳಿಕೆಗೂ ಅವರ ಕಾವ್ಯಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಪ್ರಾಸದ ಅಂಶ ಹಾಗೂ ಕಾವ್ಯ ಸಾಗಿರುವ ಶೈಲಿಯನ್ನು ಗಮನಿಸಿದರೆ ಬ್ಲಾಂಕ್‌ವರ್ಸ್‌ನ ಪ್ರಭಾವ ಸ್ಪಷ್ಟವಾಗಿ ಗೋಚರಿಸುತ್ತದೆ.

೧೯ನೇ ಶತಮಾನದಲ್ಲಿ ಪರಂಪರಾಗತವಾದ ಕಾವ್ಯದ ಸ್ವರೂಪವು ತನ್ನ ಒಟ್ಟಾರೆ ಸ್ವರೂಪದಲ್ಲಿ ಹೊಸತನವನ್ನು ಕಂಡುಕೊಂಡಿತು. ಧಾರ್ಮಿಕ, ಆಧ್ಯಾತ್ಮಿಕ, ಪೌರಾಣಿಕ ಚೌಕಟ್ಟಿನಲ್ಲಿ ರಚನೆಯಾಗುತಿದ್ದ ಕಾವ್ಯವು ಪಾಶ್ಚಾತ್ಯ ಸಾಹಿತ್ಯದ ಅನುವಾದಿತ ಕೃತಿಗಳ ಪ್ರಭಾವದಿಂದಾಗಿ ಹೊಸ ಮಾರ್ಗವನ್ನು ಪಡೆಯಿತು.

**ಪ್ರಾಸ**

ಹೊಸಗನ್ನಡ ಸಾಹಿತ್ಯದಲ್ಲಿ ಮೂಡಿದ ಹೊಸ ಚಿಂತನೆಗಳಲ್ಲಿ ಕಾವ್ಯದಲ್ಲಿ ಪ್ರಾಸವನ್ನು ತ್ಯಜಿಸುವುದು ಬಹಳ ಚರ್ಚಾರ್ಹವಾದ ಸಂಗತಿ. ಆದ್ದರಿಂದಲೇ ಇಲ್ಲಿ ಪ್ರಾಸದ ವಿಚಾರ ಕುರಿತು ನಡೆದ ಚರ್ಚೆಯನ್ನು ವಿವರಿಸಲಾಗಿದೆ. ೧೯ನೇ ಶತಮಾನ ಕೊನೆಯ ದಶಕಗಳಲ್ಲಿ ಪಾಶ್ಚಾತ್ಯ ಮಾದರಿಯ ಕವಿತೆಗಳು ಅನುವಾದ ಇಲ್ಲವೆ ಸ್ವತಂತ್ರವಾದ ರೂಪದಲ್ಲಿ ರಚನೆಯಾದವು. ಕ್ರೈಸ್ತ ಧರ್ಮದ ಅನೇಕ ಕವಿತೆಗಳು ಕನ್ನಡದ ಕಾವ್ಯದ ಲಕ್ಷಣಗಳಲ್ಲಿ ಒಂದಾದ ಖಂಡಪ್ರಾಸವುಳ್ಳ ಲಕ್ಷಣಗಳನ್ನು ಹೊಂದಿದ್ದರೆ, ಇನ್ನು ಕೆಲವು ಪ್ರಾಸರಹಿತವಾಗಿದ್ದವು. ಈ ಎರಡೂ ಮಾದರಿಗಳು ನಮ್ಮ ಕನ್ನಡಿಗರ ಮುಂದೆ ಇದ್ದವು. ೧೦ನೇ ಆಗಸ್ಟ್ ೧೯೦೬ರ ಸತ್ಯದೀಪಿಕೆ ಪತ್ರಿಕೆಯಲ್ಲಿ ಕ್ರೈಸ್ತಧರ್ಮದ ಕವಿತೆ ಈ ರೀತಿ ಇದೆ.

**ಜಪ್ಪಿನ ಶಾಂತಿ ದೇವಾಲಯದ ಪ್ರತಿಷ್ಠೆಗೆ ಹಾಡಿದ ಗೀತೆ**

(ರಾಗ – ಕನ್ನಡ ಗೀತೆ ೧೫೩)

೧.ಶುದ್ಧ, ಶುದ್ಧ, ಶುದ್ಧ
ನಿನ್ನಯಭಾವ ಪೂರ್ಣ ಶ್ರದ್ಧ
ಎಂದಾಡುತ್ತಾರೆ ದೂತರು
ಇತಿ ನಾವು ಏಕವಾಗಿ
ನಿನ್ನ ಸ್ಥಾನಕೆದುರಾಗಿ
ಕೊಂಡಾಡುತ್ತೇವೆ, ದೇವರೇ
ಭಕ್ತರ ಸಂಘದಿ
ಭಕ್ತಿಯ ಭಾವದಿ
ಪವಿತ್ರನೇ, ಪವಿತ್ರನೇ
ಪವಿತ್ರನೇ
ಸರ್ವತ್ರ ಶುದ್ಧನೆಂಬೆವು

ಗೋವಿಂದ ಪೈರವರು ಹೇಳುವಂತೆ "೧೮೯೮ – ೧೮೯೯ರ ವೇಳೆಯಲ್ಲಿ ಪ್ರಾಸವನ್ನು ತ್ಯಜಿಸಿ ಬರೆಯಬೇಕೆನಿಸಿದರೂ; ಪ್ರಯತ್ನ ನಡೆಸಲಿಲ್ಲ. ನಂತರದಲ್ಲಿ ೧೯೧೧ರಲ್ಲಿ ಪ್ರಾಸ ತೊರೆದು ಕಾವ್ಯ ರಚಿಸಬೇಕೆಂದು ನಿರ್ಧರಿಸಿ ಕವಿತೆಯನ್ನು ಬರೆದೆಬಿಟ್ಟೆನು" ಎಂದಿದ್ದಾರೆ. ಕನ್ನಡ ಕಾವ್ಯಗಳ ಲಕ್ಷಣವನ್ನು ಚರ್ಚಿಸುವ ಸಂದರ್ಭದಲ್ಲಿ ನಮ್ಮ ಪ್ರಾಚೀನ ವಿದ್ವಾಂಸಕರು ಪ್ರಾಸ ನಿರಾಕರಣೆಯನ್ನು ಕುರಿತು ಸಾಕಷ್ಟು ಚರ್ಚಿಸಿದ್ದಾರೆ.

"ಪ್ರಾಸವು ಕನ್ನಡ ಕವಿತೆಯ ವಿಶಿಷ್ಟ ಲಕ್ಷಣವು", "ನೃಪತುಂಗನ ಅಭಿಪ್ರಾಯದಂತೆ ಕನ್ನಡಕ್ಕೆ ಶಬ್ದಾಲಂಕಾರಗಳಲ್ಲಿ ಯಾವಾಗಲೂ ಪ್ರಾಸವು ಮುಖ್ಯವಾದುದು", "ವಿನುತ ಶಬ್ದಾಲಂಕಾರದೊಳ ತಿಶಯಮಿೂ ಕನ್ನಡಕ್ಕೆ ಸತತಂ ಪ್ರಾಸಂ' ಎಂದ ನೃಪತುಂಗ. ನಾಗವರ್ಮನೂ ಇದನ್ನೇ ಹೇಳಿ ಕೊನೆಯ ಚರಣದಲ್ಲಿ "ಅದು ತಪ್ಪೆ ಕಾವ್ಯ ಮೇಂ ಶೋಭಿಪುದೇ' ಎಂದು ಹೇಳಿರುವನು.

ಆಧುನಿಕ ಸಂದರ್ಭದಲ್ಲಿ ಮೊದಲು ಪ್ರಾಸ ನಿರಾಕರಣೆ ಕುರಿತಂತೆ ಚರ್ಚಿಸಿದವರು ಗೋವಿಂದ ಪೈರವರು ಎಂದು ವಿದ್ವಾಂಸರ ಅಭಿಪ್ರಾಯ. ಆದರೆ ಗೋವಿಂದ ಪೈಯವರಿಗಿಂತ ಮೊದಲೇ ಕನ್ನಡದಲ್ಲಿ ಪ್ರಾಸವನ್ನು ತ್ಯಜಿಸಬಹುದು ಎಂದು ಶ್ರೀನಿವಾಸ ರಾಘವಾಚಾರ್ಯರು ಹೊಸಗನ್ನಡ ಸಾಹಿತ್ಯ ರಚನೆಯ ಬಗ್ಗೆ ಹೇಳುವ ಸಂದರ್ಭದಲ್ಲಿ ತಮ್ಮ 'ಛಂದೋಮಾಲಿಕೆ' ಕೃತಿಯ ಮುನ್ನುಡಿಯಲ್ಲಿ ಪ್ರಸ್ತಾಪಿಸಿದ್ದಾರೆ. ಆದರೆ ಇವರು ಪ್ರಾಸ ತ್ಯಜಿಸಿ ಬರೆದಿರುವ ಕವಿತೆಗಳು ಲಭ್ಯವಾಗಿಲ್ಲ. ಈ ಕೃತಿಯು ಕನ್ನಡ ಭಾಷೆಯ ಛಂದಸ್ಸಿನ ವಿಷಯವನ್ನು ಕುರಿತದ್ದಾಗಿದೆ. ಕೃತಿಯ ಒಳಗೂ ಪ್ರಾಸದ ವಿಚಾರವಾಗಿ ಎಲ್ಲಿಯೂ ಚರ್ಚಿಸಿಲ್ಲ. ಇದರ ಮುನ್ನುಡಿಯಲ್ಲಿ–

"ಕನ್ನಡವು ಸಂಸ್ಕೃತ ಭಾಷೆಯಿಂದ ಹುಟ್ಟಿದ್ದಲ್ಲ' ಎಂದು ಇಲ್ಲಿ ದೇಶ್ಯಪದ ಮುಂತಾದ್ದರಿಂದ ತಿಳಿದುಬಂದರೂ, ಅ ವ್ಯಾಕರಣ, ಅಂಲಕಾರ, ಛಂದಸ್ಸು ಇವುಗಳ ಕ್ರಮದ ವಿಷಯದಲ್ಲಿ ಸಂಸ್ಕೃತ ಭಾಷೆಗೆ ಪ್ರತಿಬಿಂಬವಾಗಿರುವುದು. ಆದರೆ ಛಂದಸ್ಸಿನಲ್ಲಿ ಯತಿ, ಪ್ರಾಸ, ರಗಳೆ ಮುಂತಾದವು ಕೆಲವು ಮಾತ್ರಾಗಣ ವೃತ್ತ, ಇವುಗಳಿಂದ ಸ್ವಲ್ಪ ವ್ಯತ್ಯಾಸವನ್ನು ಹೊಂದಿದೆ, ಸಂಸ್ಕೃತದಲ್ಲಿಯೂ ಯತಿ ಕೆಲವೆಡೆಯಲ್ಲಿಯೇ ಇದ್ದರೂ ಕನ್ನಡದಲ್ಲಿ ಅಷ್ಟರಮಟ್ಟಿಗೂ ಐಚ್ಛಿಕವಾಗಿ ಕೆಲವೆಡೆಯಲ್ಲಲ್ಲದೆ ಹಲವು ಕಡೆಯಲ್ಲಿ ಕಾಣುವುದಿಲ್ಲ ಪ್ರಾಸಿನಿಂದ ಪದ್ಯವು ಎಷ್ಟು ಮನೋಹವಾಗಿದ್ದರೂ ಅರ್ಥಗಾಂಭೀರ್ಯಕ್ಕೂ, ಲಾಲಿತ್ಯಕ್ಕೂ ವಿಶೇಷವಾಗಿ ಭಂಗವುಂಟಾಗಿರುವುದು. ಅಭಿನವ ಪಂಪ ಮೊದಲಾದ ಜೈನ ಮಹಾಕವಿಗಳೂ ಪ್ರಾಸದ ನಿಯಮವಿಲ್ಲವೆ ಗ್ರಂಥವನ್ನು ರಚಿಸಿದ್ದಲ್ಲಿ ಅವರ ಗ್ರಂಥಗಳಲ್ಲಿ ಇನ್ನೂ ಗಾಂಭೀರ್ಯ ಲಾಲಿತ್ಯಗಳು ಹೆಚ್ಚುತ್ತಿತ್ತೆಂದು ಹೇಳುವುದಕ್ಕೆ ಅಡ್ಡಿಯೇನೂ ಇಲ್ಲ. ಆದ್ದರಿಂದ ಪ್ರಾಸವನ್ನು ನಿಯತವಾಗಲ್ಲದೆ ಐಚ್ಛಿಕವಾಗಿಟ್ಟುಕೊಳ್ಳುವ ಪಕ್ಷದಲ್ಲಿ ಸುಸಂಸ್ಕೃತದಂತೆ ಕನ್ನಡಕ್ಕೂ ವಿಶೇಷ ಪ್ರಕಾಶವುಂಟಾದೀತೆಂದು ತೋರುವುದು" ಎಂದಿದ್ದಾರೆ.

೧೯೧೦ ವೇಳೆಗಾಗಲೆ ಶ್ರೀನಿವಾಸ ರಾಘವಾಚಾರ್ಯರಲ್ಲದೆ ಇತರರು ಪ್ರಾಸ ಮುಂಡನದ ಬಗ್ಗೆ ಚರ್ಚಿಸಿದಂತೆ ಕಾಣುತ್ತದೆ. ೧೯೧೦ನೆಯ ಫೆಬ್ರವರಿ ಮಾಸದ ಶ್ರೀಕೃಷ್ಣಸೂಕ್ತಿಯಲ್ಲಿ ಪ್ರಾಸವನ್ನು ತ್ಯಜಿಸುವ ಬಗ್ಗೆ ಎಂ. ಕೃಷ್ಣಪ್ಪನವರು ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

"ಪ್ರಾಸ, ಯತಿ ಮೊದಲಾದವು ಸಂಸ್ಕೃತದಂತೆ ಐಚ್ಛಿಕವಾಗಿರಬೇಕು – ಯತಿ ಕನ್ನಡದಲ್ಲೈಚ್ಛಿಕವೆಂಬುದು ರಾಯರಿಗೇಕೆ ತೋರಲಿಲ್ಲ! ಪೂರ್ವ ಸರಣಿಗೆ ವಿರೋಧವಾಗಿ ಪ್ರಾಸವನ್ನು ಮಾತ್ರ ರಾಯರು ಹೇಗೆ ಐಚ್ಛಿಕವಾಗಿ ಅಪೇಕ್ಷಿಸುವರು? ಪ್ರಾಸನಿಯಮವು ಯಾರ ಗಂಟಲಿಗೆ ಗಾಣವೋ ಅವರು ಪದ್ಯ ಕಾವ್ಯವನ್ನೇ ಬರೆವುದವಶ್ಯವಿಲ್ಲ, ತಮಗೆ ಹೃದಯಂಗಮವಾದ

ಸಂಗತಿಗಳನ್ನೆಲ್ಲವನ್ನು ಗದ್ಯರೂಪದಿಂದಲೇ ತಿಳಿಸಬಹುದು" (ಪೂರ್ವ ಕವಿತಾ ಶೈಲಿ-ಪು. ೪೩) ಎಂದಿದ್ದಾರೆ.

ನಂತರದಲ್ಲಿ ಪ್ರಾಸದ ಬಗ್ಗೆ ಯೋಚಿಸಿದವರೆಂದರೆ ಗೋವಿಂದ ಪೈಯವರು. ಸುಮಾರು ೧೬ ವರ್ಷಗಳ ನಂತರ ಇದರ ಬಗ್ಗೆ ಆಲೋಚನೆಯನ್ನು ನಡೆಸಿ ಪ್ರಾಸ ಮುಂಡನವನ್ನು ಮಾಡಿ ಕವಿತೆಯನ್ನು ರಚಿಸಿದರು. ಇವರ ಈ ನಿರ್ಧಾರವು ಸಾಹಿತ್ಯ ವಲಯದಲ್ಲಿ ಹೊಸ ಸಂಚಲನವನ್ನು ಹುಟ್ಟು ಹಾಕಿದರು. ಪ್ರಾಸ ತ್ಯಾಗ ಕುರಿತು ಪರ ವಿರೋಧಗಳ ದೀರ್ಘ ಚರ್ಚೆಯನ್ನೇ ನಡೆಸಿದ್ದಾರೆ. ಅಂದಿನ ವಾಗ್ಭೂಷಣ, ಮಧುರವಾಣಿ ಪತ್ರಿಕೆಗಳಲ್ಲಿ ಇದನ್ನು ಕುರಿತು ವಾದಗಳು ನಡೆದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಿ ನೀಡಲಾಗಿದೆ.

ಪಂಡಿತ ಕೇಶವಶರ್ಮ ಗಲಗಲಿಯವರು "ಪ್ರಾಸವನ್ನು ಮೊದಲಿನವರು ಇಡುತ್ತಾ ಬಂದಿದ್ದಾರೆ. ಅದಕ್ಕಾಗಿ ನಾವೂ ಪ್ರಾಸವನ್ನು ಇಡಬೇಕೆಂಬ ವಾದವನ್ನು ಖಂಡಿಸಬೇಕು" ಎನ್ನುತ್ತಾ;

"ಪುರಾಣಮಿತ್ಯೇವ ನ ಸಾಧುಸರ್ವಂ
ತಾತಸ್ಯಕೂಪೋಯಮ್ ಇತಿ ಬ್ರುವಾಣಾ ಕ್ಷಾರಂ
ಜಲಂ ಕಾಪುರಾಷಾ ಪಿಬಂತಿ".

ಎಂದು ಹೇಳಿದರು. ಅಲ್ಲದೆ ಬಂಗಾಳಿಯಲ್ಲಿಯೂ ಸಹ ಮೈಕೇಲ್ ಮಧುಸೂದನ ದತ್ತರಂಥವರು 'ಮೇಘನಾದವಧ' ದಂಥ ಕಾವ್ಯದಲ್ಲಿ ಯಮಕವಿಟ್ಟಿಲ್ಲವೆಂಬುದನ್ನು ಎತ್ತಿ ತೋರಿಸಿದರು. (ಹೊಸಗನ್ನಡ ಸಾಹಿತ್ಯದ ಉದಯಕಾಲ-ಪು. ೪೯).

"ಪ್ರಾಸಕ್ಕಾಗಿ ರಸಭಂಗ ಮಾಡಿ ನಿರರ್ಥಕ ಶಬ್ದಗಳನ್ನು ಪ್ರಯೋಗಿಸಿರುವ ಸಾವಿರಾರು ಕವಿತೆಗಳನ್ನು ಪ್ರಾಚೀನ ಕವಿಗಳ ಗ್ರಂಥಗಳಲ್ಲೇ ನಾವು ತೋರಿಸುವೆವು. ಸುಮ್ಮಸುಮ್ಮನೆ ಈಗಿನ ಕವಿಗಳು ದಡ್ಡರು. ಆದುದರಿಂದ ಅವರಿಗೆ ಪ್ರಾಸ ತ್ರಾಸವೆಂದು ಆಧುನಿಕ ಕವಿಗಳ ಹೆಸರಿನಿಂದ ಕಲ್ಲು ಒಡೆಯುವದರಲ್ಲಿ ಅರ್ಥವಿಲ್ಲ ಎಂದು ಸುಳ್ಳು ಸುಳ್ಳೇ ಚೀರಾಟವೆಬ್ಬಿಸಿ 'ನರಸಿಂಹರು' ಗರ್ಜನೆ ಮಾಡಿದರೆ ಅವರ ಬೆದರಿಕೆಗೆ ಸೊಪ್ಪು ಹಾಕುವ ಅಳ್ಳೆದೆಯವರಾದ ಕನ್ನಡ ಕವಿಗಳು ಇನ್ನೂ ನಮ್ಮ ಕನ್ನಡ ಪ್ರಾಂತ್ಯದಲ್ಲಿ ಇಲ್ಲದಿರವುದು ನಮ್ಮ ಸೌಭಾಗ್ಯವೇ ಸರಿ." (ಹೊಸಗನ್ನಡ ಸಾಹಿತ್ಯದ ಉದಯಕಾಲ-ಪು. ೪೯) ಎಂದಿದ್ದಾರೆ.

ಕನ್ನಡ ವಾಮನರ ಕೃತಿಗೆ ಪ್ರತಿಕ್ರಿಯೆಯಾಗಿ ಬಹಳ ಕ್ರಮವಾಗಿ ಟೀಕಿಸಿ. ಮುಳಬಾಗಿಲ ನರಸೋಪಂತರು ೧೯೧೮ ವಾಗ್ಭೂಷಣ (ನವೆಂಬರ್) ನಲ್ಲಿ 'ಕನ್ನಡ ಛಂದಸ್ಸಿನ ಕೊಲೆ' ಎಂಬ ಲೇಖನವನ್ನು ಬರೆದಿದ್ದರು. ಇದರಲ್ಲಿ ಪ್ರಾಸ ಕುರಿತು-

"ಆಂಗ್ಲ ಭಾಷೆಗೂ ಕನ್ನಡ ಭಾಷೆಗೂ ಏನೂ ಸಂಬಂಧವಿಲ್ಲ. ಈ ಭಾಷೆಗೂ ಕನ್ನಡಕ್ಕೂ ಭೂಮ್ಯಾಕಾಶಗಳಷ್ಟು ಅಂತರವಿದೆ. ಹೀಗಿದ್ದೂ, ಆಂಗ್ಲ ಭಾಷಾ ಪದ್ಧತಿಯನ್ನು ಕನ್ನಡ ಭಾಷಾ ಲಕ್ಷಣಗಳಲ್ಲಿ ಸಮಾವೇಶ ಮಾಡಬೇಕೆನ್ನುವರು. ಎಂಥ ಅಸಮಂಜಸತನವು ಪುರಾತನ ಮಹಾ ಕವಿಗಳೂ ವಿದ್ವಾಂಸರೂ ಪ್ರಾಸವಿಲ್ಲದ ಕವಿತೆಗಳು ಕಾಕಕೋಲಾಹಲವೆಂದು ನಿರ್ಣಯಿಸಿಬಿಟ್ಟರು. ವಸ್ತು ಸ್ಥಿತಿಯು ಹೀಗಿರಲು ಪುರಾತನ ವಿದ್ವಾಂಸರ ಮತದ ವಿರುದ್ಧವಾಗಿಯೂ ಛಂದ;ಶಾಸ್ತ್ರದ ವಿರುದ್ಧವಾಗಿಯೂ, ರೂಢಿಯ ವ್ಯಾಕರಣದ ವಿರುದ್ಧವಾಗಿಯೂ ಭಾಷಾ ಸಂಪ್ರದಾಯದ ವಿರುದ್ಧವಾಗಿಯೂ ರಚಿಸಲ್ಪಡುವ ಕವಿತೆಗಳು ಕನ್ನಡ ಭಾಷೆಯ ಕೊಲೆಯನ್ನು ಮಾಡುವುದಲ್ಲದೆ. ಆ ಭಾಷೆಗೆ ಅಲಂಕಾರವಾಗಲಾರವು....ಶಾಸ್ತ್ರ ಸಮ್ಮತವಾದ ಲಕ್ಷಣಗಳಿಂದ ಯುಕ್ತವಾದ ಕವಿತೆಗಳನ್ನು ರಚಿಸುವ ಯೋಗ್ಯತೆ ಇದ್ದರೆ, ಕವಿತೆಗಳನ್ನು ರಚಿಸಬೇಕು ನಮ್ಮಲ್ಲಿ ಅಷ್ಟು ಭಾಷಾಜ್ಞಾನವೂ, ಶಬ್ಧ ಸಂಗ್ರಹವೂ ಇಲ್ಲದಿದ್ದರೆ ಅದರ ಹವ್ಯಾಸಕ್ಕೆ ಯಾಕೆ ಹೋಗಬೇಕು? ಶಾಸ್ತ್ರ ವಿರುದ್ಧವಾದ ಕಾಗೆ ಗೂಬೆಗಳ ಕವಿತೆಗಳ ಅವಶ್ಯವು ಕನ್ನಡ ಭಾಷೆ ಇರುವುದಿಲ್ಲ."(ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೮)

ಆದರೆ ೧೯ನೇ ಶತಮಾನದಲ್ಲಿ ಇಲ್ಲಿನ ಸ್ಥಳೀಯರು ರಚಿಸಿದ ಎಷ್ಟೋ ಕವಿತೆಗಳಲ್ಲಿ ಪ್ರಾಸವಿಲ್ಲದೆ ಕಾವ್ಯ ರಚನೆಯನ್ನು ಮಾಡಿದ್ದರು. ಇದಕ್ಕೆ ಇಂಗ್ಲಿಶ್ ಕಾವ್ಯದ ಪ್ರೇರಣೆಯಾಗಿಲ್ಲ. ಕನ್ನಡದ ತತ್ವಪದಕಾರರಾದ ಶಿಶುನಾಳ ಶರೀಫರ ಮತ್ತು ಗುರುದೇವ ರಾನಡೆಯವರ ಕವಿತೆಗಳು ಇದಕ್ಕೆ ಉತ್ತಮ ಉದಾಹಣೆ:–

**ಗುರುಗೋವಿಂದ ಭಟ್ಟರ ಕುರಿತ ಶರೀಫರ ಕವಿತೆ**

ಕಾಂತೆ ಕೇಳೆ ಕರುಣ ಗುಣದಿಂದ
ಎನಗಿಂತ ಪುರುಷನು
ಬಂದು ಕೊರಕಿದ ಪುಣ್ಯ ಫಲದಿಂದಾ
ಎನ್ನಂತರಂಗದ
ಕಾಂತಶ್ರೀ ಗುರುನಾಥ ಗೋವಿಂದಾ
ಶಿಶುನಾಳಾದಿಂದ
ಕಾಂತೆ ಬಾರೆಂತೆದು ಕೆರೆದೇ
ಕಾಂತ ಮಂದಿರದೊಳಗೆ ಬಯ್ದು
ಬ್ರಾಂತತಿ ಭವದುರಿತವನು ಪರಿಹರಿಸಿ
ಚಿಂತೆಯನ್ನು ಮರೆಸಿ..

------------------

ಕುರುಬರೋ ನಾವು ಕುರುಬರೋ
ಹೇಗೆ ಈಸೊಂದು ಕುರಿಮರಿ
ಕಾಯ್ದು ಕೊಂಡಿರುವಂಥ ಅಪ
ಆರೈದು ಮೂರಾರು ಹತ್ತು ಟಗರುಗಳು
ಮಯ್ಯಾಗಿ ಹೋಗ್ಯಾವ ಈ ಊರ ಒಳಗೆ
ಬ್ಯಾರೆ ಇನ್ನೂರದಾ ಹದಿನಾರು ಸಾವಿರ
ಸೂರ್ಯಾಗಿ ಹೋಗಿರುವ ಕುರಿಮರಿ ಕಾಯ್ವಂಥಗಿ

"ಕನ್ನಡ ಛಂದಸ್ಸಿನ ಮುಖ್ಯನಿಯಮವೇನು? ಈ ಪ್ರಕಾರದ ಕವಿತೆಗಳನ್ನು ಹಿಂದೆ ಸಾವಿರಾರು ವರ್ಷಗಳೊಳಗೆ ಯಾವನಾದರೂ ರಚಿಸಿರುವನೋ ಹ್ಯಾಗೆ? ಅಥವಾ ಇಂಥ ಕವಿತೆಗಳನ್ನು ರಚಿಸಲಿಕ್ಕೆ ಈಗಿನ ಕನ್ನಡ ವಿದ್ವಾಂಸರೆನಿಸಿಕೊಂಡು ಹೋದವರ ಸಮ್ಮತಿಯಿರುವುದೋ ಹ್ಯಾಗೆ? ಪ್ರಾಸವಿಲ್ಲದಂಥ ಕವಿತೆಗಳ ಸಮಾವೇಶವು ಕನ್ನಡ ಗ್ರಂಥಗಳೊಳಗೆ ಆಗಬಹುದೋ ಹ್ಯಾಗೆ? ಪುರಾತನದ ಹಾಗೂ ಈಗಿನ ಕನ್ನಡ ವಿದ್ವಾಂಸರು, ಪ್ರಾಸವಿಲ್ಲದ ಕವಿತೆಗಳನ್ನು ರಚಿಸಬಾರದೆಂದು ಯಾಕೆ ನಿಯಮಿಸಿದರು? ಎನ್ನುವ ಪ್ರಶ್ನೆಗಳ ಜೊತೆಗೆ ಆಂಗ್ಲಭಾಷಾ ಪದ್ಧತಿಯನ್ನು ಕನ್ನಡ ಭಾಷಾ ಲಕ್ಷಣಗಳಲ್ಲಿ ಸಮಾವೇಶ ಮಾಡುವುದು ಅಸಮಂಜಸ"ವೆಂಬುದು ಅವರ ಭಾವನೆ.

ಅಲ್ಲದೆ "ವಸ್ತು ಸ್ಥಿತಿಯೂ ಹೀಗಿರಲು ಪುರಾತನ ವಿದ್ವಾಂಸರ ಮತದ ವಿರುದ್ಧವಾಗಿಯೂ, ಛಂದಶಾಸ್ತ್ರದ ವಿರುದ್ಧವಾಗಿಯೂ, ರೂಢಿಯ ವ್ಯಾಕರಣ ವಿರುದ್ಧವಾಗಿಯೂ ಭಾಷಾ ಸಂಪ್ರದಾಯದ ವಿರುದ್ಧವಾಗಿಯೂ, ರಚಿಸಲ್ಪಡುವ ಕವಿತೆಗಳು ಕನ್ನಡ ಭಾಷೆಯ ಕೊಲೆಯನ್ನು ಮಾಡುವವದಲ್ಲದೆ, ಆ ಭಾಷೆಗೆ ಅಲಂಕಾರವಾಗಲಾರವು ಹಾಗೂ ತನ್ನ ಭಾಷೆಯ ನಿಜವಾದ ಉನ್ನತಿಯ ಸಲುವಾಗಿ ಪ್ರಯತ್ನಿಸುವ ಪ್ರತಿಯೊಬ್ಬ ಕನ್ನಡಿಗನೂ ಹಾಗೂ ಮಾಸ ಪತ್ರಿಕೆಗಳೂ ಇಂಥ ಕವಿತೆಗಳಿಗೆ ಆಶ್ರಯ ಕೊಡಬಾರದು" (ಹೊಸಗನ್ನಡದ ಅರುಣೋದಯ–ಪು. ೨೩೦)ಎಂದು ಹೇಳಿದರು.

ಇದಕ್ಕೆ "ಪ್ರಾಸವನ್ನು ಐಚ್ಛಿಕವಾಗಿ ಮಾಡಬೇಕೆಂದು ನಮ್ಮ ಆಶಯ. ಕವಿಯ ಇಚ್ಛೆ ಇದ್ದರೆ ಅಶ್ವ ಧಾಟಿಯಂತೆ ಹೆಜ್ಜೆಜ್ಜೆಗೆ ಪ್ರಾಸವನ್ನು ಇಡಲಿ. ನಮ್ಮ ಅಡ್ಡಿಯಿಲ್ಲ, ದ್ವಿತೀಯಾಕ್ಷರವು ಯಮಕಿತವಾಗಿಯೇ ಇರಬೇಕೆಂಬ ನಿರ್ಬಂಧ ಬೇಡ.... ಕನ್ನಡ ಕವಿತಾ ಶರೀರ ಹುಣ್ಣಿನಂತಿರುವ ಈ ಅವಯವವನ್ನು ಕೊಯ್ದುಬಿಡಬೇಕೆಂದು ಅದರ ಹಿತ ಚಿಕಿತ್ಸಕರು ಇಚ್ಛಿಸಿದರೆ, ಅಯ್ಯೋ ಇವರು ಕನ್ನಡ ಛಂದಸ್ಸಿನ ಕೊಲೆ ಮಾಡುತ್ತಾರೆ, ಕನ್ನಡ ಕವಿತ್ವದ ಕುತ್ತಿಗೆ ಕೊಯ್ಯುತ್ತಾರೆ ಎಂದು ಕೂಗೆಬ್ಬಿಸುವುದು ನಿರರ್ಥಕ" (ಹೊಸಗನ್ನಡ ಸಾಹಿತ್ಯದ ಉದಯಕಾಲ – ಪು. ೪೯) ವೆಂದು ಕೇಶವಶರ್ಮ ಗಲಗಲಿಯವರು ಹೇಳಿದ್ದಾರೆ.

ಕೇಶವಶರ್ಮ ಗಲಿಗಲಿಯವರು ವಾಸುದೇವಾಚಾರ್ಯರ ಲೇಖನಕ್ಕೆ ಉತ್ತರವಾಗಿ ಹೀಗೆ ಬರೆದರು–

"ಪ್ರಾಸ ಮುಂಡನ ಪರವಾದ ಲೇಖನವು ಶುಭೋದಯದ ಸಂಪಾದಕರಾದ, ಸುಪ್ರಸಿದ್ಧ ಲೇಖಕರಾದ ಶ್ರೀವಾಸುದೇವಾಚಾರ್ಯ ಕೆರೂರ ಮಹಾಶಯರದು. ಪತ್ರ ಸಂಪಾದಕರ ವಿರುದ್ಧ ಮತವನ್ನು ಮಂಡಿಸುವುದು ಈಗಣ ಕಾಲದಲ್ಲಿ ಕಠಿಣವಾದುದು. ಅದರಲ್ಲಿಯೂ ವಾಸುದೇವಾಚಾರ್ಯರಂಥ ವಿನೋದ ಪಟುಗಳ ಯಾವುದಾದರೊಂದು ಕೋಟಿಕ್ರಮವನ್ನು ಆಶ್ರಯಿಸಿ, ಪ್ರತಿಪಕ್ಷಗಳ ಕಣ್ಣುಗಳಲ್ಲಿ ಮಣ್ಣು ತೂರಿ ಪಾರಾಗುವ ಲೇಖನ ಚಾತುರ್ಯವಂತರ ವಿರುದ್ಧವಾಗಿ ಹೋಗುವುದು ಕಠಿನತರವಾದರೂ ಉಚಿತವಾದುದು" (ಹೊಸಗನ್ನಡ ಸಾಹಿತ್ಯದ ಉದಯಕಾಲ– ಪು. ೫೦) ಎಂದು ಹೇಳಿ ವಾಸುದೇವಾಚಾರ್ಯರು ಯತಿಭಂಗ ಮಹತ್ವದ್ದಲ್ಲವೆಂದು ಹೇಳಿದ್ದಕ್ಕೆ ಲೇಖಕರು "ಯತಿಭಂಗದಿಂದ ಉಂಟಾಗುವ ಅನರ್ಥ ಪರಂಪರೆಯನ್ನು ವಾದುದೇವಾಚಾರ್ಯರು ವಿಚಾರಿಸುವರೋ? "ಪೃಧ್ವೀಶಕೋ – ತೀರವ್ಯಾಪ್ತಿಗೆ ಸಂದ ಚಕ್ರರವಿದ್ಯೆತ್ಯ ಧ್ವಾಂತಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣ ನಮಗೀಗಾನಂದಸಂದೋಹಮಂ"– ರುದ್ರಭಟ್ಟನ ಈ ಕವಿತೆಯಲ್ಲಿ ಪ್ರಾಸಪರಾಧೀನನಾದ ಕವಿಗೆ ಕೋಟಲೆಯನ್ನು ಒತ್ತಟ್ಟಿಗೆ ಮಾಡಬೇಕಾಯಿತು. ತುರೀಯಾಶ್ರಮವನ್ನು ಮನ್ನಿಸುವ ಬ್ರಾಹ್ಮಣ ಸತ್ಕುಲ ಸಮುತ್ಪನ್ನರೇ ಈ ಯತಿ ದ್ರೋಹವು ಕ್ಷಮ್ಯವಾದುದೇ? – ಪ್ರಾಚೀನ ಕವಿಗಳು ಈ ಮುಖ್ಯ ಪ್ರಾಸದ ಗುದ್ದಿಯನ್ನು ಕಟ್ಟಿ ಕೊಂಡಿದ್ದರಿಂದಲೇ ಕನ್ನಡದಲ್ಲಿ ಸಂಸ್ಕೃತದ ಮನೋರಮವಾದ ಉಪಜಾತಿ, ಮಂಜುಭಾಷಿಣಿ – ಮೊದಲಾದ ಲಘುವೃತ್ತಗಳು ವಿಪುಲವಾಗಿ ಪ್ರಚಾರದಲ್ಲಿ ಬರಲಿಲ್ಲ ...... ಪ್ರಾಸವಶರಾದ ಕವಿಗಳು ಸಲೆ, ವಲಂ ಮೊದಲಾದ ನಿರರ್ಥಕ ಪದಗಳನ್ನು ಪ್ರಯೋಗಿಸಬೇಕಾಯಿತು" (ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೫೧) ಎಂದು ಅಭಿಪ್ರಾಯಪಟ್ಟರು. ಇದಲ್ಲದೆ ಲೇಖಕರು ಪ್ರಾಸದ ಈ ಕೋಟಲೆಗಾಗಿ ಅನೇಕ ದೃಷ್ಟಾಂತಗಳನ್ನು ಕೊಟ್ಟು ಕೊನೆಗೆ, ಹೀಗೆ ಸಾರಿ ಹೇಳಿದ್ದಾರೆ;

"ಆದುದರಿಂದ ನಾವು ಪುನಃ ಪುನಃ ಸಾರುವುದೇನೆಂದರೆ, ಕವಿತಾಸುಂದರಿಯ ಪಾದಗಳಲ್ಲಿರುವ ಮುಖ್ಯ ಪ್ರಾಸವೆಂಬ ಶೃಂಖಲೆಯನ್ನು ಕಡಿದು ಒಗೆದು ಆಕೆಯನ್ನು ಬಂಧಮುಕ್ತಳನ್ನಾಗಿ ಮಾಡಿರಿ. ಸ್ವಚ್ಛಂದವಾಗಿ ಆಕೆಯು ನಮ್ಮ ಕರ್ನಾಟಕ ವಾಙ್ಮಯೋಪವನದಲ್ಲಿ ವಿಹರಿಸಲಿ. ಸ್ವಾತಂತ್ರ್ಯದ ಪವಿತ್ರವಾದ ಪ್ರಭಾತ ಕಾಲದ ಈ ದಿವಸಗಳಲ್ಲಿ ಕನ್ನಡ ಕವಿತ್ವ ವರವರ್ಣಿನಿಯೊಬಳು ಬಂಧನದಲ್ಲಿ ಬಿದ್ದು ನರಳುವುದು ಬೇಡ. ಹೂಂ, ಕನ್ನಡ ಕವಿತ್ವ ಬಂಧುಗಳೇ ಕರ್ನಾಟಕ ಸಾರಸ್ವತ ಅಭಿಮಾನಿಗಳೇ, ಈ ಮಂಗಳ ಪ್ರಸಂಗದಲ್ಲಿ ಕವಿತಾಭಾಮಿನಿಯ ಬಂಧಮೋಚನ ಪ್ರಸಂಗದಲ್ಲಿ ಸುಮ್ಮನಿರಬೇಡಿರಿ." (ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೫೫) ಎಂದಿದ್ದಾರೆ. ಅಲ್ಲದೆ ಪತ್ರಿಕೆಯೊಂದರಲ್ಲಿ ಈ ವಿಷಯ ಕುರಿತು

ಮುಖ್ಯ ಪ್ರಾಸದ ತ್ರಾಸವ
ದೂರೀಕರಿಸುತ್ತ ಕವಿತೆಯಂ ಬಂಧನದಿಂ
ಬಿಡಿಸುತ್ತಿರುವಾ ಕವಿಗಳ ಚರಣಾಂಬೋಜಾತದಲ್ಲಿ ವಂದಿಪೆವೀಗಳ್
(ವಾಗ್ಭೂಷಣ – ನವೆಂಬರ್ ೧೯೧೮ ಪು. ೩೪೫)

ಮತ್ತೆ ಕೆಲವರು ಪ್ರಾಸವನ್ನು ಪೂರ್ಣವಾಗಿ ತಿರಸ್ಕರಿಸದೆ ಅದರಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳಬಹುದು ಎಂದು ತಿಳಿಸಿದರು. "ಪ್ರಾಸ ಮರ್ಯಾದೆಯನ್ನನುಸರಿಸದ ಪದ್ಯಗಳು ಪುನಃ ಕರ್ನಾಟಕದಲ್ಲಿ ಆವತರಿಸಿರುವವೆಂಬ ವರ್ತಮಾನ ಕೊಟ್ಟುದುದ್ದಕ್ಕಾಗಿ ತಮಗೆ ಸಾವಿರಾರು ನಮಸ್ಕಾರ! ಅಂದೊಮ್ಮೆ ಇದೇ ರೀತಿಯಲ್ಲಿ, ಇದೇ ರೋಗವು ಹಬ್ಬುವುದಕ್ಕಾರಂಭವಾಗಿ 'ಸ್ವದೇಶಾಭಿಮಾನಿಯಲ್ಲಿಯೂ 'ಸಾಧ್ವಿ'ಯಲ್ಲಿಯೂ ಬಹುಕಾಲ ತರ್ಕವಿತರ್ಕಗಳು ನಡೆದಿದ್ದುವು . ಬರೆದವರೂ ಪ್ರಕಟಿಸಿದವರೂ ಆರಾದರೇನು, ಈ ಪ್ರಾಸತ್ಯಾಗದಿಂದ ಕನ್ನಡ ನಾಡಿಗಾಗುವ ಪ್ರಯೋಜನವೇನೋ ತಿಳಿಯಬರುವುದಿಲ್ಲ. ಕರ್ನಾಟಕ ಮಧುಸೂದನತ್ತರೆಂಬ ಬಿರುದು ಆರಿಗಾದರೂ ಬೇಕಿದ್ದರೆ, ಅವರು ಅದನ್ನು 'ಪ್ರಾಸತ್ಯಾಗದಿಂದ ಸಂಪಾದಿಸ ಬೇಕಾಗಿಲ್ಲ; ಸುಲಭ ಶೈಲಿಯನ್ನುಳ್ಳ, ಪ್ರಾಸಯುಕ್ತ ಪದ್ಯಗಳಿಂದಲೇ ಸಂಪಾದಿಸಬಹುದಾಗಿದೆ. ಇಷ್ಟರ ಮೇಲೆ, ಕರ್ನಾಟಕ ದೇಶದಲ್ಲಿ, ಪ್ರಾಸವಿಲ್ಲದ ಪದ್ಯಗಳು, ತಾಸ್ರಿಲ್ಲದೆ ಹಾರಾಡುವುದಾದರೆ, ಕ್ರಾಸು ಹಾಕಿ ಪದ್ಯಗಳನ್ನೇಕೆ ನಿರ್ಮಿಸಬಾರದೆಂದು ಇದೂ ಒಂದು ಪ್ರಶ್ನೆ." (ವಾಗ್ಭೂಷಣ – ೧೯೧೮ – ನವೆಂಬರ್).

"ರಸಪ್ರಧಾನವಾದ ಕಾವ್ಯವನ್ನು ಮಾಡುವ ಕವಿಗಳು ತಮಗೆ ಪ್ರಾಸದ ತೊಂದರೆಯಾದರೆ ಅದನ್ನು ಮೀರಬಾರದು. ಕೆಲವು ಜನ ಪ್ರಾಚೀನ ಮಹಾಕವಿಗಳಿಗೆ ಪ್ರಾಸವು ತೊಂದರೆಯೆನಿಸಲಿಲ್ಲವೆಂದು ಎಲ್ಲ ಕವಿಗಳಿಗೂ ಹಾಗೆಯೇ ಆಗಬೇಕೆಂಬ ನಿಯಮವಿಲ್ಲ ಇವರ ರಸತ್ಕಾವ್ಯಗಳು ಮುಂದಿನ ಕಾಲದಲ್ಲಿ ಪ್ರಾಸಾತಿಕ್ರಮಣಕ್ಕೆ ಉದಾಹರಣೆಗಳಾಗುವುವು".

"ಕನ್ನಡದಲ್ಲಿ ಚರಣದ ಎರಡನೆಯ ಅಕ್ಷರವು ಪ್ರಾಸಕ್ಕೆ ಯುಕ್ತವೆಂದು ಪ್ರಾಚೀನ ಕವಿಗಳು ನಿರ್ಧರಿಸಿದ್ದು ತಪ್ಪೆಂದು ನಾನು ಸರ್ವಥಾ ಉಸುರಲಾರೆ. ಆದರೆ, ಈ ಪ್ರಾಸಕ್ಕೆ ಬದಲಾಗಿ ಅಂತ್ಯ ಪ್ರಾಸವನ್ನು ಆಚರಿಸಿದರೆ ಇಂಪಾಗಲಾರದೆಂದೂ ವಾದಿಸಲಾರೆ. ಕೊಡಗರ ಹಾಡುಗಳಲ್ಲಿ ಅಂತ್ಯ ಪ್ರಾಸವೇ ಪ್ರಧಾನ ಪ್ರಾಚೀನ ದ್ರಾವಿಡರ ಪದ್ಧತಿ ಹೀಗಿರಬಹುದಿತ್ತು. ನಾನೊಂದು ಸಾವಿರ ಚರಣಗಳನ್ನು ರಚಿಸಿರಬಹುದು ಇದುವರೆಗೆ ಪ್ರಾಸ ಮಂಡನಕ್ಕೆ ನನ್ನ ಕಿವಿ ಬಗ್ಗಲಿಲ್ಲ".

ಕಾವ್ಯನಂದ ಪುಣೇಕರರವರು ೧೯೧೮ರ ವೇಳೆಗಾಗಲೇ ಪ್ರಾಸವನ್ನು ಬಿಟ್ಟು ಕವಿತೆಗಳನ್ನು ರಚಿಸಿದ್ದರು.

ಪ್ರಾಸತ್ರಾಸಕೆ ತೊಡಕದೆ
ದೇಶದೊಳಗಿರ್ದ ಕನ್ನಡದ ನುಡಿ ಬಿಡದೆ
ಮೋಸದಿ ಕದಿಯದೆ ಪರಪದ
ಮೀಸಲ ಕಲ್ಪನೆಯನೀಮ ಕಾವ್ಯಾನಂದಂ
ಅವರ ಕವಿತೆಯ ಮಾದರಿ ಇಲ್ಲಿದೆ.
ಅಪ್ಪಾಜಾತರಿ ಧೋತರೋ? ಮಗನೆ ಈ ಊರಲ್ಲಿಯೇ ಇಲ್ಲವು
ಎಲ್ಲಾ ಗೊತ್ತಿದೆ ಬಲ್ಲೆ, ಪೇಟೆಗೆ ನಡಿ, ಮಲ್ಲಪ್ಪನಲ್ಲಿಲ್ಲವೇ?
ಅವ್ವಾ ಸಕ್ಕರಿಕಡ್ಡಿಯೇ? ಮಗಳೇ ಜಂತಾದಾವು ನಮ್ಮಪ್ಪಗೆ
ತಾಸೇ ಸಪ್ಪಳವಾಗೆ, ಪೋಗೆ ಹುಡುಗರ್, ಹಾ ನಿಟ್ಟುಸಿರ್ ಬಿಟ್ಟರು
(ಪ್ರಭಾತ – ೧೯೧೮ ಪು. ೩೨)

ಇವರ ಈ ನಿರ್ಧಾರವನ್ನು ಪ್ರೋತ್ಸಾಹಿಸಿ ವಲ್ಲಭ ಕಟ್ಟಿಯವರು ಕಾವ್ಯನಂದ ಪುಣೇಕರರ ಬಗ್ಗೆ ಹೀಗೆ ಬರೆದಿದ್ದಾರೆ. "ಕನ್ನಡದಲ್ಲಿ ಚರಣದ ಎರಡನೆಯ ಅಕ್ಷರವು ಪ್ರಾಸಕ್ಕೆ ಯುಕ್ತವೆಂದು ಪ್ರಾಚೀನ ಕವಿಗಳು ನಿರ್ಧರಿಸಿದ್ದು ತಪ್ಪೆಂದು ನಾನು ಸರ್ವಥಾ ಉಸುರಲಾರೆ. ಆದರೆ, ಈ ಪ್ರಾಸಕ್ಕೆ ಬದಲಾಗಿ ಅಂತ್ಯ ಪ್ರಾಸವನ್ನು ಆಚರಿಸಿದರೆ ಇಂಪಾಗಲಾರದೆಂದೂ ವಾದಿಸಲಾರೆ. ಕೊಡಗರ ಹಾಡುಗಳಲ್ಲ ಅಂತ್ಯ ಪ್ರಾಸವೇ ಪ್ರಧಾನ. ಪ್ರಾಚೀನ ದ್ರಾವಿಡರ ಪದ್ಧತಿ ಹೀಗಿರಬಹುದಿತ್ತು. ನಾನೊಂದು ಸಾವಿರ ಚರಣಗಳನ್ನು ರಚಿಸಿರಬಹುದು. ಇದುವರೆಗೆ ಪ್ರಾಸ ಮುಂಡನಕ್ಕೆ ನನ್ನ ಕಿವಿ ಒಗ್ಗಲಿಲ್ಲ." (ಪ್ರಭಾತ – ೧೯೧೮ ಪು. ೩೨)

ಪ್ರಾಸವನ್ನು ತೆಗೆದುಹಾಕಬೇಕೆಂದು ಸನ್ ೧೯೧೮ರ 'ಕರ್ನಾಟಕ ವೈಭವ'ದಲ್ಲಿ ಆರ್. ಜಿ. ಹಬ್ಬು ಎನ್ನುವವರು ಪ್ರತಿಪಾದಿಸಿದರು. 'ಕನ್ನಡ ಕೋಗಿಲೆ' ಪತ್ರದ ಸಂಪಾದಕರಾಗಿದ್ದ ಮುಳಿಯ ತಿಮ್ಮಪ್ಪಯ್ಯನವರೂ, ಕಾವ್ಯಾನಂದ ಪುಣೇಕರ ಅವರೂ ಪ್ರಾಸವನ್ನು ತೆಗೆದುಹಾಕಬೇಕೆಂದೇ ಹೇಳಿದರು. ಆರ್. ಮಂಗೇಶರಾಯರೂ, ಮುಳಬಾಗಲ ನರಸೋಪಂತರೂ ಇದನ್ನು ವಿರೋಧಿಸಿದರು. ಅನಂತರ ಪಂಡಿತ ಕೇಶವಶರ್ಮ ಗಲಗಲಿಯವರು ಪ್ರಾಸವನ್ನು ಬಿಡಬೇಕೆಂದು ಪುನರ್‌ಪ್ರತಿಪಾದಿಸಿದರು. ಇದನ್ನು ಕೆರೂರು ವಾಸುದೇವಾಚಾರ್ಯರು ವಿರೋಧಿಸಿದರು. ಆದರೆ, ಕಾವ್ಯಾನಂದ ಪುಣೇಕರ, ಕನ್ನಡ ವಾಮನ, ಗೋವಿಂದ ಪೈ ಅವರಂಥ ಕವಿಗಳು ಪ್ರಾಸವನ್ನು ಬಿಟ್ಟೇ ಕನ್ನಡದಲ್ಲಿ ಕಾವ್ಯರಚನೆ ಮಾಡಹತ್ತಿದರು.

"ಪ್ರಾಸತ್ಯಾಗದಿಂದ ಕನ್ನಡ ನಾಡಿಗಾಗುವ ಪ್ರಯೋಜನವೇನೂ ತಿಳಿಯಬರುವುದಿಲ್ಲ ಕರ್ನಾಟಕದ ಮಧುಸೂದನದತ್ತರೆಂಬ ಬಿರುದು ಆರಿಗಾದರೂ ಬೇಕಿದ್ದರೆ; ಅವರು ಅದನ್ನು ಪ್ರಾಸತ್ಯಾಗದಿಂದ

ಸಂಪಾದಿಸಬೇಕಾಗಿಲ್ಲ; .... ಇಷ್ಟರ ಮೇಲೆ ಕರ್ನಾಟಕ ಮಧೂಸೂದನರ ಇಷ್ಟ ಉಪ್ಪಿಲ್ಲದ ಸಾರನ್ನೇ ಬಡಿಸಬೇಕೆಂದಿದ್ದರೆ ಬಡಿಸಲಿ, ಕರ್ನಾಟಕ ದೇಶದಲ್ಲಿ ಪ್ರಾಸವಿಲ್ಲದ ಪದ್ಯಗಳು, ತ್ರಾಸಿಲ್ಲದೆ ಹಾರಾಡುವುದಾದರೆ, .... ಕ್ರಾಸು ಹಾಕಿ ಪದ್ಯಗಳನ್ನೇಕೆ ನಿರ್ಮಿಸಬಾರದೆಂದು ಇದೂ ಒಂದು ಪ್ರಶ್ನೆ" (ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ – ಪು. ೧೩೪) ಎಂದು ಹಲವರು ಹೇಳಿದರು. ಮತ್ತೊಬ್ಬ ವ್ಯಕ್ತಿ ಇದಕ್ಕೆ ಪೂರಕವಾಗಿ ಕವಿತೆಯ ರೂಪದಲ್ಲಿ ಬರೆದರು ಇವರ ಪ್ರಕಾರ ಪ್ರಾಸ ತ್ಯಾಗ ಮಾಡಿದವರು ನಪುಂಸಕರು. ಅಲ್ಲದೆ ಪ್ರಾಸ ತ್ಯಾಗ ಮಾಡಿದವರನ್ನು ಪ್ರಾಸ ಸಹಿತ ಪದ್ಯದ ಮೂಲಕವೇ ಖಂಡಿಸಿದವರಿದ್ದಾರೆ. 'ಪ್ರಾಸನಿಂದಕಂಗೆ ಕಟುವಾಣಿ' ಎಂಬ ಶೀರ್ಷಿಕೆಯ ಪದ್ಯವನ್ನು ಬರೆದವರು 'ಗದಾಧರ' ಎಂಬವರು. ಇದು 'ಮಧುರವಾಣಿ'ಯ ಫೆಬ್ರವರಿ ೧೯೧೯ರ ಸಂಚಿಕೆಯಲ್ಲಿ ಪ್ರಕಟವಾಯಿತು.

ಪ್ರಾಸನಿಂದಕಂಗೆ ಕಟುವಾಣಿ

ಕಂದ॥ ಕವಿಯಾಗಲಪೇಕ್ಷಸಿ ಯಾ।
ಕವಿತಾ ನಿಯಮಾನುರೋಧದಿಂ ನಡೆಯದ ಮಾ॥
ನವನೊಳ್ ಮೇಣ್ ಸಗ್ಗಕ್ಕೆಳ।
ಸುವ ಪಾಪಿಷ್ಠನೊಳದಾವದಿರ್ಕುಂ? ಭೇದಂ।೧
ಪ್ರಾಸಮನಿಡುವೊಡೆ ನಿನಗಾ।
ಯಾಸಮದಪ್ಪೊಡೆ ಬಿಡುವುದು ಪದ್ಯ ರಚನೆಯಂ॥
ಸಾಸಮಿದಲ್ಲವೆ? ಲೋಕದೊ।
ಳಾಶಿಸುವುದು ಮದುವೆಯಂ ನಪುಂಸಕನುಂ ಪೇಳ್॥೨
ಚರಿಸಿದ ದಾರಿಯೊಳಂ ತಾ।
ನೆರಚುತೆ ಮಳಮಂ ತಿರುಗುವ ಸಿಂಬಳಬುಳುವೊಲ್॥
ಪೆರರ ಬಗೆಯೊಳಂ ನೀನೀ।
ದುರಭಿಪ್ರಾಯಮನದೇಕೆ ಪುಟ್ಟಿಸುವಯ್? ಪೇಳ್॥೩
ಕವಿ ಷೆಕ್ಸ್‌ಪಿಯರ್, ಕವಿ ಕೇ।
ಶವ ಸುತ, ಮಧುಸೂದನಾದಿಗಳವೊಲ್ ನೀನೂ॥
ಕವನಂಗೆಯ್, ಬೊಗಳ್ವುದೆ? ಬೊಗ।

ಳುವ ಕರ್ಚ್ಚಲ್ ಶಕ್ತಿಯಿಲ್ಲದಾ ಶ್ವಾನವೊಲ್॥ಳ

ಏಕಿಂತು 'ಸಾನೃಷಿಃ ಕುರು।

ತೇ ಕಾವ್ಯಂ' ನುಡಿ ಜನಿಸಿತು? ಲೋಕದೆ ಮರುಳೇ॥

ಪ್ರಾಕಾರಮನೇರಿದೊಡಂ।

ಕಾಕಂ ಗರುಡಂಗೆ ತೊಣೆಯದಕ್ಕುಮೆ? ಪೇಳಯ್॥೫ (ಗದಾಧಾರ 'ಪ್ರಾಸನಿಂದಕಂಗೆ ಕಟುವಾಣಿ' (ಮಧುರವಾಣಿ – ಫೆಬ್ರುವರಿ. ೧೯೧೯)

ಶ್ರೀಗಳ ಇಂಗ್ಲಿಷ್ ಗೀತೆಯಲ್ಲಿ ಪ್ರಾಸವಿಲ್ಲದೆ ಇರುವುದನ್ನು ಕಂಡು ಅದಕ್ಕೆ ವಿಮರ್ಶೆಯನ್ನು ಬರೆಯುವಾಗ "ಸಂಸ್ಕೃತ ವೃತ್ತಗಳು ಪ್ರಾಸವನ್ನರಿಯವು, ಆದರೂ ಸಂಸ್ಕೃತ ಕವಿಗಳು ಗೀತಗಳನ್ನು ಬರೆಯುವಾಗ ಪ್ರಾಸಕ್ಕೆ ಶರಣು ಹೋಗಿದ್ದಾರೆ. ಪ್ರಾಸವನ್ನು ಬಿಟ್ಟು ಬರೆಯುವ ಒಂದು ಅಂದ ಆಂಗ್ಲ ಸಾಹಿತ್ಯದಲ್ಲಿದ್ದರೂ, ಇಂಗ್ಲಿಷ್ ಗೀತೆಗಳಲ್ಲಿ ಮೂಲದಲ್ಲಿ ಪ್ರಾಸ ಸಹಿತವಾಗಿ ಇರುವ ಪದ್ಯಗಳು ಇಲ್ಲಿ ಪ್ರಾಸರಹಿತವಾಗಿ ಏಕೆ ಮಾರ್ಪಟ್ಟಿವೆಯೋ ತಿಳಿಯದು..... ಪ್ರಾಸವಿಲ್ಲದ ಪದ್ಯವು ಕಾವ್ಯ ಗುಣವಿದ್ದರೆ ಕಾವ್ಯವೇ ಆಹುದು, ಆದರೂ ಭಾವದ ಬಿಸಿಗೆ ಹೊರಬಿದ್ದು ಎದ್ದ ವಾಣಿಯ ಉದ್ಗಾರವು ಬರಿದು ಆವಿಯಲ್ಲ. ಅದು ಮಿಂಚುಮುಡಿಯುವ ಮೋಡ. ಗದ್ಯವು ಅತಿವೃತ್ತಗಂಧಿಯಾಗುವುದು ಹೇಗೆ ಅದಕ್ಕೆ ಕೊರತೆಯೋ ಹಾಗೆಯೇ ಭಾವೋದ್ರೇಕದ ಪದ್ಯಗಳಲ್ಲಿ ಉಚಿತ ಪ್ರಾಸವಿಲ್ಲದರುವುದು ಒಂದು ಕುಂದು"(ಇಂಗ್ಲೀಷ್ ಗೀತೆಗಳು–ಪು. ೧೭) ಎಂದು ಹೇಳಿದ್ದಾರೆ.

'ಇಂಗ್ಲೀಷ್ ಗೀತೆಗಳು' ರಚನೆಯಾದ ವರ್ಷದಲ್ಲೇ ಪುಂಡೂರು ಲಕ್ಷೀನಾರಾಯಣ ಪುಣಂಚತ್ತಾಯರ 'ರಾಷ್ಟ್ರಗೀತ ರತ್ನಾಕರ' ಎಂಬ ಕವನಸಂಕಲನವೂ ಪ್ರಕಟವಾಗಿದೆ. ಇದರಲ್ಲಿ ಕವಿತೆಗಳನ್ನು ಅಂದಿನ ಜನರಲ್ಲಿ ದೇಶಭಕ್ತಿಯನ್ನು ಪ್ರೇರೇಪಿಸುವ ಹಾಗೂ ಅಂದಿನ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡವರಿಗೆ ಕೃತಜ್ಞತೆಯನ್ನು ಸಲ್ಲಿಸುವ ಹಿನ್ನೆಲೆಯನ್ನು ಹೊಂದಿದೆ. ಇದರಲ್ಲಿರುವ ಕವಿತೆಗಳು ಕೂಡ ಪ್ರಾಸ ರಹಿತವಾಗಿವೆ. ಪದ್ಯದ ಮಾದರಿ ಹೀಗಿದೆ:–

**ಲೋಕಮಾನ್ಯ ತಿಲಕ**

(ಶೃಂಗಾರವನು ಬೀರ್ಪುದೀವನ) ಎಂಬಂತೆ

ಶ್ರೀ ಲೋಕಮಾನ್ಯ ಸುಖಂಕರ ॥ಧನ॥ ॥ಪ॥

ಭೂಲೋಲ ಬಾಲಗಂಗಾಧರ ॥ಧನ್ಯ॥ ॥ಅಪ॥

ದೇವ! ಗಂಗಾಧರ! ಪಾರ್ವತೀ ಸುಕುಮಾರ॥

ದೇವಸೇನಾನೀ ಸಮಾನಾನಿ ॥ಧನ್ಯ॥

ಸತ್ಯಭಾಮಾಕಾಂತ। ನಿತ್ಯಗೋಪಾಲಕ॥

'ಗೀತರಹಸ್ಯ' ವಿಕಾಸಕ ॥ಧನ್ಯ॥

**ಮಹಾತ್ಮಾ ಗಾಂಧಿ**

(ದೇವಿ ಭುವನ ಮನಮೋಹಿನಿ)ಎಂಬಂತೆ

ಗಾಂಧೀ ಜಯತು ಕರುಣಾನಿಧಿ ॥ಪ॥

ಲೋಕಮನೋಹರ ಮೋಹನಗಂಧಿ। ಜಯತು ಸುಗುಣ ಶರಧಿ ॥ಅಪ॥

ಧರ್ಮದಂಡಧರ। ವೈರಿಭಯಂಕರ।

ಆಫ್ರಿಕ ಹಿತಕರ। ಚಂಪಸುಖಂಕರ।

ಖೇಡ ಜನೋದಧಿರಾಜ! ಕಳಾಧರ।

ಖೇದತಮೋಹರ। ಭಾಸ್ಕರ ॥೧॥

ಬೇಂದ್ರೆಯವರಿಗೆ ಪ್ರಾಸದ ಬಗ್ಗೆ ಪೂರ್ಣ ಒಲವಿಲ್ಲ. ಆದರೆ ಅವಶ್ಯಕತೆ ಇದ್ದಾಗ ಅದನ್ನು ಬಿಟ್ಟರೆ ಪದ್ಯಕ್ಕೆ ಸೊಬಗು ಇಲ್ಲದಂತಾಗುತ್ತದೆ ಎಂದಿದ್ದಾರೆ. (ಸಂಭಾವನೆ ೧೯೪೦-ಪು. ೭೧)

"ಸಂಸ್ಕೃತ ವೃತ್ತಗಳು ಪ್ರಾಸವನ್ನರಿಯವು. ಆದರೂ ಸಂಸ್ಕೃತ ಕವಿಗಳು ಗೀತಗಳನ್ನು ಬರೆಯುವಾಗ ಪ್ರಾಸಕ್ಕೆ ಶರಣುಹೋಗಿದ್ದಾರೆ. ಪ್ರಾಸವನ್ನು ಬಿಟ್ಟು ಬರೆಯುವ ಒಂದು ಅಂದ ಆಂಗ್ಲ ಸಾಹಿತ್ಯದಲ್ಲಿದ್ದರೂ ಇಂಗ್ಲಿಷ್ ಗೀತಗಳಲ್ಲಿ ಮೂಲದಲ್ಲಿ ಪ್ರಾಸ ಸಹಿತವಾಗಿ ಇರುವ ಪದ್ಯಗಳು ಇಲ್ಲಿ ಪ್ರಾಸರಹಿತವಾಗಿ ಏಕೆ ಮಾರ್ಪಟ್ಟಿವೆಯೋ ತಿಳಿಯದು..... ಪ್ರಾಸವಿಲ್ಲದ ಪದ್ಯವು ಕಾವ್ಯ ಗುಣವಿದ್ದರೆ ಕಾವ್ಯವೇ ಅಹುದು. ಆದರೂ, ಭಾವದ ಬಿಸಿಗೆ ಹೊರಬಿದ್ದು ಎದ್ದ ವಾಣಿಯ ಉದ್ಗಾರವು ಬರಿದು ಆವಿಯಲ್ಲ. ಅದು ಮಿಂಚಿ ಮಿಡಿಯುವ ಮೋಡ. ಗದ್ಯವು ಅತಿವೃತ್ತಗಂಧಿಯಾಗುವುದು ಹೇಗೆ ಅದಕ್ಕೆ ಕೊರತೆಯೋ ಹಾಗೆಯೇ ಭಾವೋದ್ರೇಕದ ಪದ್ಯಗಳಲ್ಲಿ ಉಚಿತ ಪ್ರಾಸವಿಲ್ಲದಿರುವುದು ಒಂದು ಕುಂದು."(ಪ್ರಾಸ ನಿರಾಸ : ವಾಗ್ಭೂಷಣ ಜನವರಿ ೧೯೧೯ ಪು. ೨೮೭)

ಮ.ಪ್ರ. ಪೂಜಾರರವರು ಸಂಸ್ಕೃತ ಪಂಡಿತರು. ಆದರೆ ಪ್ರಾಸದ ವಿಚಾರವಾಗಿ ಅವರು ನೀಡಿರುವ ಹೇಳಿಕೆ ಗಮನಾರ್ಹವಾದದ್ದು. "ಕಾವ್ಯ ಪುರುಷನಿಗೆ ರಸವು ಆತ್ಮವು. ಶಬ್ಧ ಅರ್ಥಗಳು ಶರೀರವು; ಕಾವ್ಯಗುಣಗಳು ಶೌರ್ಯಾದಿ ಗುಣಗಳು; ಅಲಂಕಾರಗಳು ಕಟಕಕುಂಡಲಾದಿ ಅಲಂಕಾರಗಳು. ನೀರಸ ಕಾವ್ಯವು ಆತ್ಮವಿಲ್ಲದ ಶರೀರದಂತೆಯೇ ಅಲಂಕಾರಗಳು ಶರೀರಕ್ಕೆ ಶೋಭೆಯನ್ನುಂಟು ಮಾಡುವಂತೆ ಕಾವ್ಯಕ್ಕೆ ಶೋಭೆಯನ್ನುಂಟು ಮಾಡುವುದೇ ಹೊರತು ಕಾವ್ಯತ್ವನ್ನುಂಟುಮಾಡಲಾರವು. ಅಲಂಕಾರಗಳಲ್ಲಿಯೂ ಕೂಡ ಶಬ್ದಾಲಂಕಗಳು

ಅರ್ಥಾಲಂಕಾರಗಳಿಗಿಂತ ಕಡಿಮೆ ತರದವು. ಕನ್ನಡದ ಪ್ರಾಸವು ಅನುಪ್ರಾಸದ ಅಭ್ಯಾಸ ರೂಪವಾಗಿರುವುದೆಂದು ಇಟ್ಟುಕೊಂಡರೂ ಕಾವ್ಯ ಮಾರ್ಗದಲ್ಲಿ ಅದಕ್ಕೆ ಮಹತ್ವವೇನೂ ಇಲ್ಲ. ಇದೊಂದು ಶಬ್ದಾಲಂಕಾರವೆಂದರೂ ಇದಕ್ಕೆ ಎಷ್ಟು ಕೊನೆಯ ಸ್ಥಾನವಿರುವುದೆಂಬುದನ್ನು ಹೇಳಬೇಕಾಗಿಲ್ಲ.... ಕಾವ್ಯ ದೃಷ್ಟಿಯಿಂದ ಛಂದೋಬದ್ಧತೆಗೆ ಅಷ್ಟೊಂದು ಪ್ರಾಮುಖ್ಯವಿಲ್ಲ. ಛಂಧಸ್ಸಂಬಂಧವಿಲ್ಲದ ಗದ್ಯಭಾಗವೂ ಕಾವ್ಯವೇ. ಕವಿಯ ಮುಖದಿಂದ ಹೊರಟ ರಸಲಹರಿಯು ಇಲ್ಲವೆ ಭಾವಲಹರಿಯು ಕಾವ್ಯವು. ಅದಕ್ಕೆ ಛಂದಸ್ಸಂಬಂಧವು ಕೃತ್ರಿಮವಾದುದು; ಸಹಜವಾದುದಲ್ಲ. ಕವಿಯ ಹೃದಯಾಬ್ಧಿಯಲ್ಲೆದ್ದ ರಸಲಹರಿಗಳು ಸ್ವಾಭಾವಿಕವಾಗಿ ಹೊರಬೀಳುವುದು ಆತನಾಡುವ ವಾಕ್ಯಗಳ ರೂಪದಿಂದಲೇ ಅವು ಅಕ್ಷರಗಳ ಇಲ್ಲವೆ ಮಾತ್ರೆಗಳ ಲೆಕ್ಕವನ್ನು ನೋಡಲಾರವು". (ಹೊಸಗನ್ನಡ ಸಾಹಿತ್ಯದ ಉದಯಕಾಲ-ಪು. ೫೪)

"ಪ್ರಾಸವು ಕನ್ನಡ ಕವಿತೆಯ ವಿಶಿಷ್ಟ ಲಕ್ಷಣವು" "ನೃಪತುಂಗನ ಅಭಿಪ್ರಾಯದಂತೆ ಕನ್ನಡಕ್ಕೆ ಶಬ್ದಾಲಂಕಾರಗಳಲ್ಲಿ ಎಲ್ಲಾವಾಗಲೂ ಪ್ರಾಸವು ಮುಖ್ಯವಾದುದು, "ನುತ ಶಬ್ದಾಲಂಕಾರದೊಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ' ಎಂದ ನೃಪತುಂಗ. ನಾಗವರ್ಮನೂ ಇದನ್ನೇ ಹೇಳಿ ಕೊನೆಯ ಚರಣದಲ್ಲಿ "ಅದು ತಪ್ಪೆ ಕಾವ್ಯ ಮೇಂ ಶೋಭಿಪುದೇ' ಎಂದು ಹೇಳಿರುವನು."

"ರಸಪ್ರಧಾನವಾದ ಕಾವ್ಯವನ್ನು ಮಾಡುವ ಕವಿಗಳು ತಮಗೆ ಪ್ರಾಸದ ತೊಂದರೆಯಾದರೆ ಅದನ್ನು ಮೀರಬಾರದು. ಕೆಲವು ಜನ ಪ್ರಾಚೀನ ಮಹಾಕವಿಗಳಿಗೆ ಪ್ರಾಸವು ತೊಂದರೆಯೆನಿಸಲಿಲ್ಲವೆಂದು ಎಲ್ಲ ಕವಿಗಳಿಗೂ ಹಾಗೆಯೇ ಆಗಬೇಕೆಂಬ ನಿಯಮವಿಲ್ಲ ಇವರ ರಸತ್ಕಾವ್ಯಗಳು ಮುಂದಿನ ಕಾಲದಲ್ಲಿ ಪ್ರಾಸಾತಿಕ್ರಮಣಕ್ಕೆ ಉದಾಹರಣೆಗಳಾಗುವುವು".

ಪ್ರಾಸ ತ್ಯಾಗದ ನಂತರ ಗೋವಿಂದ ಪೈಯವರು ಪ್ರಾಸದ ಬಗ್ಗೆ ತಮ್ಮ ದೃಢ ನಿರ್ಧಾರವನ್ನು ತಿಳಿಸಿದರು. ಇದರ ಪರಿಣಾಮವಾಗಿ ಪೈಯವರು ಪ್ರಾಸರಹಿತವಾಗಿ ಬರೆದ 'ಹೊಲೆಯನು ಯಾರು?' ಎಂಬ ಕವಿತೆ 'ಸ್ವದೇಶಾಭಿಮಾನಿ' ಯಲ್ಲಿ ಪ್ರಕಟವಾಯಿತು. ಇದಕ್ಕೆ ವಿದ್ವಾಂಸರ ಕಡೆಯಿಂದ ಕೋಲಾಹಲವೇ ಎದ್ದಿತು.. ಕೊನೆಗೆ, ಗೋವಿಂದ ಪೈಗಳು ಈ ಬಗೆಗೆ ತಮ್ಮ ಕೊನೆಯ ಮಾತನ್ನು ಹೇಳಿದರು:

"ಕನ್ನಡ ಕಾವ್ಯಮಾರ್ಗದಲ್ಲಿ 'ಹುಲಿ ಹುಲಿ' ಎಂದು ನನ್ನ ಪ್ರಾಸತ್ಯಾಗವನ್ನು ಬಿರುಸಾಗಿ ಖಂಡಿಸಿ, ಆ ಪತ್ರಿಕೆಯಲ್ಲಿ ಪತ್ರವ್ಯವಹಾರದ ಹೂಲಿ ಎದ್ದಿತು. ಅದಕ್ಕೆ ಪ್ರತ್ಯುತ್ತರವಾಗಿ.... ಕನ್ನಡಕ್ಕೆ ಪ್ರಾಸವೇನೂ ವೇದವಾಕ್ಯವೂ ಅಲ್ಲ; ಶಾಶ್ವತವೂ ಅಲ್ಲ; ಅದನ್ನು ಬೇಕಾದಾಗ ಬೇಕಾದಂತೆ ಬಿಟ್ಟುಬಿಡಬಹುದು. ಅವಸರ ಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ, ಛಂದಸ್ಸನ್ನೂ ವ್ಯಾಕರಣವನ್ನೂ ಕೂಡ ತನಗೆ ಬೇಕಾದಂತೆ ಮಾರ್ಪಡಿಸಿಯೂ ನೇರ್ಪಡಿಸಿಯೂಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ. ಬೇಕಾದವರು ಈ ಹೊಸ ಹಾದಿಯನ್ನು ಹಿಡಿಯಲಿ, ಬೇಡದವರು ಹಳೆಯ ಹಾದಿಯಲ್ಲೇ ನಡೆಯಲಿ,

ಮತ್ತೂ ಇಂದು ಒಬ್ಬನೇ ನಡೆವ ಮೇಕೆದಾರಿಯೇ ಮುಂದೆ ತೇರು ಎಳೆವ ಹೆದ್ದಾರಿ".(ಸ್ವದೇಶಾಭಿಮಾನಿ-೧೯೧೨)

ಗೋವಿಂದ ಪೈಯವರು ಹೇಳುವಂತೆ "ಚಿಕ್ಕಂದಿನಿಂದಲೆ ಪಾಶ್ಚಾತ್ಯ ಸಾಹಿತ್ಯದಲ್ಲಿ ನನಗೆ ಚತುರ್ದಶಪದಿಯಲ್ಲಿ (Sonnet) ಮೆಟ್ಟು. ಪ್ರಾಸವನ್ನು ಪ್ರಾಸವನ್ನು ವಿಸರ್ಜಿಸುವವರೆಗೆ ಆಗಾಗ್ಗೆ ಚತುರ್ದಶಪದಿಗಳನ್ನು ಬರೆಯಲಿಕ್ಕೆ ಯತ್ನಿಸಿದೆನಾದರೂ, ೧೪ ಪ್ರಾಸಾಕ್ಷರಗಳನ್ನು ದೊರಕಿಸಿಕೊಳ್ಳಲಾರದೆ. ಮೊದಲಿಲ್ಲದೆ ಒಡ್ಡಿ ಹೋದಂತೆ, ಒಟ್ಟಾರೆ ಆಶ್ರಮ ತೀರ ನಿಷ್ಪಟವಾಯಿತು. ಪ್ರಾಸ ತ್ಯಜಿಸಿದಂದಿನಿಂದ ಕೆಲವು ಚತುರ್ದಶ ಪದಗಳನ್ನು ಬರೆದೆ ಹರಿದೆ. ೧೯೧೬ರ ಪಶ್ಚಾರ್ಧದಲ್ಲಿ 'ಕವಿತಾವತಾರ' ಎಂಬ ಒಂದು ಚತುರ್ದಶಪದಿಯನ್ನು ರಚಿಸಿದೆ..... ಅಂದಿನಿಂದ ಇಂದಿಗೂ ಚತುರ್ದಶಪದಿಗಳನ್ನು ಸರಾಗವಾಗಿ ಬರೆಯುತಲಿದ್ದೇನೆ."

"ಇಲ್ಲಿ ರಂಬೆಯ ನೆಳಲಲಿ ನಿರೊಟ್ಟಿಯೊಂದು
ಕಳ್ಳ ಬಿಂದಿಗೆಯೊಂದು, ಸವಿಗಬ್ಬವೊಂದು
ನೀನೆನ್ನ ಬಳಿಯೆ ಕಾಡಲಿ ಹಾಡುವಂದು
ಕಾಡೆ ಗಡ ಸಗ್ಗದಿಂದದೆನಗೆ ಲೇಸಂದು"(ಗಿಳಿವಿಂಡು-ಪು. ೧೧೭)

**ಭಾಷೆ**

ಕಾವ್ಯದ ಭಾಷೆ ಹೇಗಿರಬೇಕು ಎಂಬುದರ ಬಗ್ಗೆ ನಮ್ಮಲ್ಲಿ ಚರ್ಚೆಗಳು ನಡೆದಿದೆ. ಇದಕ್ಕೆ ಕಾರಣ ಪಾಶ್ಚಾತ್ಯ ಕಾವ್ಯಗಳ ಪರಿಚಯ ಸರಳವಾದ ಮಾತುಗಳಿಂದಲೇ ಕಾವ್ಯದ ಸೃಷ್ಟಿ ಸಾಧ್ಯವೆಂದು ತಿಳಿಸಿಕೊಟ್ಟಿತು. ವರ್ಡ್ಸ್‌ವರ್ತ್ ಭಾಷೆ ಹೇಗಿರಬೇಕು ಎಂಬುದರ ಬಗ್ಗೆ ಹೀಗೆ ಹೇಳಿದ್ದಾರೆ. "ಪದ್ಯದ ಭಾಷೆ ಸಾಧ್ಯವಾದಷ್ಟು ಮನುಷ್ಯನು ದೈನದಿನ ಬದುಕಿನಲ್ಲಿ ಉಪಯೋಗಿಸುವ ಭಾಷೆಯಾಗಿರುತ್ತದೆ. ಇದು ಯಾವಾಗಲೂ ಅವನ ನಿಜವಾದ ಭಾವನೆ ಹಾಗು ಅಭಿರುಚಿಯೊಂದಿಗೆ ವ್ಯಕ್ತವಾಗುತ್ತದೋ ಆಗ ಆ ಒಂದು ಸಂಯೋಜನೆಯಲ್ಲಿ ದೈನಂದಿನ ಜೀವನದ ಮೌಲ್ಯಮಾಪನ ಮತ್ತು ಅಯೋಗ್ಯತೆಯನ್ನು ಮೀರುವಂತಹುದಾಗಿರುತ್ತದೆ."೧

ಕಾವ್ಯದ ಶ್ರೇಷ್ಠತೆಗೆ ಅದರ ಭಾಷೆಯು ಮುಖ್ಯವಾದದ್ದು. ಕವಿಯ ಭಾಷೆಯು ಅಂದಿನ ಕಾಲಮಾನಕ್ಕೆ ಅನುಗುಣವಾಗಿರಬೇಕು. ಆಗಲೇ ಕಾವ್ಯಕ್ಕೆ ಮಹತ್ವ ದೊರೆಯುತ್ತದೆ. ಕವಿಯ ಅನುಭವವು ಭಾಷೆಯ ಮೂಲಕ ಒಂದು ಮೂರ್ತರೂಪವನ್ನು ಪಡೆಯುತ್ತದೆ. ಭಾಷೆಯು ಪ್ರಸ್ತುತದಲ್ಲಿ ಹೊಸತೆನಿಸಿದರೆ; ಅದಕ್ಕೆ ಹಿಂದಿನ ಭಾಷೆ ಹಳತಾಗತ್ತದೆ. ಇದು ಕನ್ನಡ ಭಾಷೆಗೂ ಅನ್ವಯವಾಗುತ್ತದೆ. ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಾಹಿತ್ಯದ ಭಾಷೆ ಕುರಿತಂತೆ ಹೆಚ್ಚು ಚರ್ಚೆಗಳು ನಡೆದಿವೆ. ಪದ್ಯ ಗದ್ಯಗಳ ಭಾಷೆ ಹೀಗೆ ಇರಬೇಕು ಇಲ್ಲವೆ ಬದಲಾವಣೆಯಾಗಬೇಕು ಎನ್ನುವ ವಾದಗಳೂ ವಿದ್ವಾಂಸರ ಮಧ್ಯೆ ಇತ್ತು. ಪದ್ಯದ ಶ್ರೇಷ್ಟತೆಯು ಅದರ ಭಾಷೆಯಿಂದ ನಿರ್ಧಾರವಾಗುತ್ತದೆ ಎಂಬುದು

ಹಲವರ ಅಭಿಮತ. ಆದರೆ ಹೊಸಗನ್ನಡ ಸಾಹಿತ್ಯ ರೂಪುಗೊಳ್ಳುವ ಸಂದರ್ಭದಲ್ಲಿ ದೇಶೀ ಭಾಷೆಯ ಸೊಗಡು ಕಾವ್ಯದಲ್ಲಿ, ಗದ್ಯದಲ್ಲಿ ಹೆಚ್ಚಾಯಿತು. ಇಂಗ್ಲಿಷ್ ಭಾಷೆಯ ಸರಳತೆ ಸ್ಥಳೀಯರನ್ನು ಆಕರ್ಷಿಸಿತು. ಅನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಬೇಕು. ಇದರಿಂದ ಕಾವ್ಯ ರಚನೆಯ ಸಾರ್ಥಕತೆಯು ಸಾಧ್ಯ. ಇಂತಹ ಮಹತ್ವದ ಕಾಳಜಿಯು ೧೯ನೇ ಶತಮಾನದಲ್ಲಿ ಕಾಣಿಸಿಕೊಂಡಿತು.

ಸಾಹಿತ್ಯವೆಂಬುದು ಕೇವಲ ಒಂದು ವರ್ಗದವರಿಗೆ ಸೀಮಿತವಾಗಿದ್ದ ಕಾಲದಲ್ಲಿ ಇಂಗ್ಲಿಷ್‌ನಿಂದ ದೊರೆತ ಜ್ಞಾನವು ಅಂದಿನ ವ್ಯವಸ್ಥೆಯ ವಿರುದ್ಧ ಸಾಹಿತ್ಯದ ಮೂಲ ಪ್ರತಿಭಟನೆಯನ್ನು ಸಾರಿತು. ಎಷ್ಟೆ ವಿರೋಧಗಳು ಟೀಕೆಗಳು ಎದುರಾದಾಗಲೂ ದಿಟ್ಟ ಹೆಜ್ಜೆ ಇಟ್ಟು ಸಾಹಿತ್ಯದ ದಿಕ್ಕನ್ನು ಬದಲಾಯಿಸಿದರು. ಚದುರಂಗರು ಹೇಳುವಂತೆ "ಸಾಮಾಜಿಕ ಜೀವನದಲ್ಲಿ ಅತೃಪ್ತಿ ಕಾಣಿಸಿಕೊಂಡಾಗ ಸಹಜವಾಗಿ ಪ್ರತಿಭಟನೆ ಕಾಣಿಸಿಕೊಳ್ಳುತ್ತದೆ. ಅಂತೆಯೇ ಸಮಾಜದಿಂದ ಸೃಷ್ಟಿಗೊಂಡ ಸಾಹಿತ್ಯದಲ್ಲಿಯೂ ಅತೃಪ್ತಿ ಕಾಣಿಸಿಕೊಂಡಾಗ ಪ್ರತಿಭಟನೆ ಕಾಣಿಸಿಕೊಳ್ಳುವುದು ಅನಿವಾರ್ಯ. ಸಾಹಿತ್ಯ ಸಂಪ್ರದಾಯ ಮತ್ತು ಪ್ರತಿಭಟನೆಯನ್ನು ಕಾಲಕಾಲಕ್ಕೆ ಬಿಂಬಿಸುತ್ತಾ ಇರುತ್ತದೆ. ಇದನ್ನು ಜಗತ್ತಿನ ಎಲ್ಲಾ ಸಾಹಿತ್ಯಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಸಂಪ್ರದಾಯ ಮತ್ತು ಪ್ರತಿಭಟನೆಗಳ ನಿರಂತರ ಮತ್ತು ಅನಿವಾರ್ಯ ಪ್ರಯೋಗದಿಂದಲೇ ಸಾಹಿತ್ಯ ತನ್ನ ಜೀವನವನ್ನು ಜೀವಂತಿಕೆಯನ್ನು ಪುನಃ ಪುನಃ ಪಡೆದುಕೊಳ್ಳುತ್ತವೆ ಎಂಬುದು ಬದುಕು ಮತ್ತು ಸಾಹಿತ್ಯಗಳ ಸಂದರ್ಭದಲ್ಲಿ ಪೂರ್ಣಸತ್ಯ. ಪ್ರತಿಭಟನೆ ಯಾವ ರೂಪದಲ್ಲಿ ಬೇಕಾದರೂ ಬರಬಹುದು" ಎಂದಿದ್ದಾರೆ

ಈ ಮಾತು ಹೊಸಗನ್ನಡ ಸಾಹಿತ್ಯ ಸಂದರ್ಭಕ್ಕೆ ಪೂರಕವಾಗಿದೆ. ಇಂತಹ ಅತೃಪ್ತಿಯು ಜನರಲ್ಲಿ ಇತ್ತು. ಸಾಹಿತ್ಯದ ಭಾಷೆ ಹೊಸಗನ್ನಡ ಸಾಹಿತ್ಯದ ಚಿಂತನೆ ಪ್ರಮುಖವಾದದ್ದು ಇಂತಹ ಪ್ರತಿಭಟನೆ ವಚನ ಸಾಹಿತ್ಯದ ಸಂದರ್ಭದಲ್ಲಿ ಕಾಣಿಸುತ್ತದೆ. ಮಾರ್ಗದಿಂದ ದೇಸೀಯತೆಗೆ ಹೊರಳಿದ ಸಾಹಿತ್ಯ ಪ್ರಕಾರ ಇದು. ಅಂತಹವುದೇ ಆದ ಚಿಂತನೆ ೧೯ ಮತ್ತು ೨೦ನೆಯ ಶತಮಾನದಲ್ಲಿ ಕಾಣಿಸಿತು. ಇಂತಹ ಹೊಸತನವು ಏಕಕಾಲಕ್ಕೆ; ಅದರಲ್ಲೂ ನಮ್ಮದಲ್ಲದ ಆಲೋಚನೆಗಳನ್ನು ಸಿದ್ಧಾಂತಗಳನ್ನು ಸ್ವೀಕರಿಸುವಾಗ ಸ್ವೀಕಾರ ಮತ್ತು ನಿರಾಕರಣೆಗಳು ಎದುರಾಗುತ್ತವೆ.

"ಸಾಹಿತ್ಯದ ಭಾಷೆಯೂ ಇಂತಹ ಗೊಂದಲದ ವಾತಾವರಣವನ್ನೂ ಸೃಷ್ಟಿಸಿತ್ತು. ನಮ್ಮ ಭಾಷೆಯು ಬರಬರುತ್ತ ಕೆಟ್ಟು ಹೋಗುತ್ತ ಬಂತು. ಲಕ್ಷ್ಯ ಲಕ್ಷಣಗಳು ಸರಿಯಾಗದೆ ಇದ್ದರೂ ಚಿಂತೆಯಿಲ್ಲ. ಹೊಸಹೊಸತಾದ ಗ್ರಾಮ್ಯಭಾಷೆಗಳಿಗೆ ಮಾತ್ರ ಗ್ರಂಥಗಳಲ್ಲಿ ಅವಕಾಶವ ಕೊಡದಿದ್ದರೆ

---

1"The language of poetry is as far as possible, a selelction of the language really spoken by men; this selection whenever it is made with true taste and feeling will of itself form a distinction and will entirely separate the composition from the valgority and meanness of ordinary life." (words worth preface to lyrical Ballods P.೧೨)

ಸಾಕು. ಇಲ್ಲವೆ ಅಂಥಾ ಪುಸ್ತಕಗಳನ್ನು ವಿದ್ಯಾಸ್ಥಾನಗಳಿಗೆ ತಾರದೆಯಿದ್ದರಾದರೂ ಚೆನ್ನಾಗಿದ್ದೀತು. ಈ ವಿಷಯದಲ್ಲಿ ತೆಲುಗು ತಮಿಳು ಭಾಷೆಗಳವರು ಎಷ್ಟೋ ಬುದ್ಧಿವಂತರಾಗಿರುವರು ಅವರುಗಳನ್ನು ನೋಡಿಯಾದರೂ ನಮ್ಮವರು ಭಾಷೆಯ ಸರಿಮಾಡಿಕೊಳ್ಳಬಾರದೆ" ಎಂಬ ಅಭಿಪ್ರಾಯಗಳು ಕೆಲವರ ಬಳಿಯಲ್ಲಿ ನಾನು ಚರ್ಚಿಸಿದೆನು. ಅವುಗಳಲ್ಲಿ ಕೆಲವಂಶಗಳನ್ನು ಒಪ್ಪದೆ ಕೆಲವರು "ಈಗೆಲ್ಲರೂ ದೇಶದಲ್ಲಿ ಮಾತನಾಡುವ ಸಾಧಾರಣ ಗ್ರಾಮ್ಯ ಭಾಷೆಯನ್ನೇ ಪ್ರಚಾರಕ್ಕೆ ತರತಕ್ಕದಲ್ಲದೇ ಪ್ರಾಚೀನ ಗ್ರಾಮ್ಯ ಭಾಷೆಯಿಂದ ಉಪಯೋಗವೇನಿದೆ? ಹಾಗೆ ಪೂರ್ವದ ಭಾಷೆಯಂ ಕಲಿತವರು ರಾಜಕಾರ್ಯದಲ್ಲಿ ಪ್ರವರ್ತಿಸಿದರೆ ಅಲ್ಲಿನ ಕಾಗದ ಪತ್ರಗಳು ಅರ್ಥವಾಗದೆಯೂ, ಹಳ್ಳಿಗಾಡಿನ ರೈತರ ಮಾತು ತಿಳಿಯದೆಯೂ, ಲೋಕ ವ್ಯವಹಾರವನ್ನೇನು ನಡೆಯಿಸಲಾರರು? ಇದಲ್ಲದೆ ಸಹಜವಾಗಿ ಎಲ್ಲರೂ ಮಾತನಾಡುವ ಭಾಷೆಯಿಂದ ಗ್ರಂಥರಚನೆಯಂ ಮಾಡದೆ ಪೂರ್ವಪದ್ಧತಿಗಳನ್ನೇ ಅವಲಂಬಿಸುತ್ತಿದ್ದರೆ ನವನಾಗರೀಕತೆ ಎಂತಹ ಅಭಿವೃದ್ಧಿಯನ್ನು ಹೊಂದಿರುವುದೋ ನೋಡಿದಿರಾ? ಅದರಂತೆಯೇ ಈಗೀಗ ನಮ್ಮ ಭಾಷೆಯೂ ಸ್ವಲ್ಪವಾಗಿ ನವನಾಗರಿಕತೆಯನ್ನು ಹೊಂದುತ್ತಿರುವುದು. ತೆಲುಗು ಮೊದಲಾದವುಗಳಲ್ಲಿ ಹಾಗಿಲ್ಲದೆ ಗ್ರಾಂಥಿಕ ಭಾಷೆಯಲ್ಲಿ ಅರ್ಧಾನುಸ್ವರ, ಶಕಟರೇಫಾದಿ ನಿರ್ಬಂಧವನ್ನು ಅಧಿಕವಾಗಿಟ್ಟು ಕೊಂಡಿರುವುದರಿಂದಲೂ ಹೊಸ ಹೊಸ ಗ್ರಂಥಗಳನ್ನು ಪ್ರಚಾರಕ್ಕೆ ತಾರದಿರುವುದರಿಂದಲೂ ಆ ಜನಗಳಿಗಿನ್ನೂ ನವನಾಗರೀಕತೆ ರುಚಿಸದಿರಬಹುದೆಂದು ತೋರುತ್ತೆ"(ವಾಗ್ಭೂಷಣ ಪತ್ರಿಕೆ) ಎಂದು ಘಂಟಾಘೋಷವಾಗಿ ಹೇಳುತ್ತಾರೆ.

ಇಂತಹ ಹೇಳಿಕೆಯನ್ನು ಸಾರಾಸಗಟಾಗಿ ಲೇಖಕರು ನಿರಾಕರಿಸಿದ್ದಾರೆ. ಒಬ್ಬ ವ್ಯಕ್ತಿ ಮನೆಯಲ್ಲಿದ್ದ ರೀತಿಯಲ್ಲೇ ಹೊರಗೆ ಹೋಗದೆ ವಿಶೇಷವಾಗಿ ಅಲಂಕಾರ ಮಾಡಿಕೊಳ್ಳುವಂತೆ ಗ್ರಾಮ್ಯ ಭಾಷೆಗಿಂತ ಉತ್ತಮ ಭಾಷೆಯನ್ನು ಬಳಸಬೇಕೆಂದು ಸುದೀರ್ಘವಾದ ಲೇಖನವನ್ನು ಬರೆದಿದ್ದಾರೆ (ಹಿತಬೋಧಿನಿ – ಕರ್ಣಾಟ ಭಾಷಾವಿಷಯೋಪನ್ಯಾಸ – ಪು ೩೭೨,೩೭೪–೭೫(ಗರಣಿ ವೈಯಾಕರಣಿ) ಗ.ವೈ. ಕೃಷ್ಣಾಚಾರ್ಯರು ಆಗಸ್ಟ್ ೧೮೮೧ ೩/೧೦ – ಸರಕಾರದ ಬ್ಯಾಲೆಡ್ ಮುದ್ರಾಕ್ಷರ ಶಾಲೆ ಮೈಸೂರು ಮೊದಲು ಆರಂಭವಾಗಿದ್ದು ಜುಲೈ ೧೮೮೧ ೭/೯ ರಲ್ಲಿ)

ಸಾಹಿತ್ಯದ ಭಾಷೆ ಯಾವಾಗಲೂ ಮಾತಾಡುವ ಭಾಷೆಯಲ್ಲಿ ಇರಬಾರದು. ಅದರಲ್ಲೂ ಕಾವ್ಯದ ಭಾಷೆ ಪ್ರೌಢವಾಗಿರಬೇಕು. ಇಲ್ಲವಾದರೆ ಹಾಸ್ಯಾಸ್ಪದವಾಗುತ್ತದೆ ಎಂದು ಆರ್ ತಾತಾರವರು ಹೀಗೆ ಹೇಳಿದ್ದಾರೆ "ಹಳಗನ್ನಡ ವ್ಯಾಕರಣ ವಿಧಿಗಳನ್ನು ಅನುಸರಿಸಿ ಹಳಗನ್ನಡದಲ್ಲಿ ಗ್ರಂಥಗಳನ್ನು ಬರೆವುದೊಂದು, ಹಳಗನ್ನಡಕ್ಕೆ ಹೊಸರೀತಿಯನ್ನು ಏರ್ಪಡಿಸಿ ಬರೆವುದೊಂದು ನಮ್ಮ ದೇಶದ ಮಿತಿಗಳಿಗೆ ಕಾವಿಯನ್ನುಡಿಸಿ, ತಲೆಗೆ ಚಟ್ಟೆಗಾರರ ಟೋಪಿಯನ್ನು, ಕಾಲಿಗೆ ಚಡಾವನ್ನು ತೊಡಿಸಿ ಜೋಗವಟ್ಟೆಗೆಯಲ್ಲಿ ಸೋಡಾ ಬಾಟಲುಗಳನ್ನು, ಚುಟ್ಟಗಳನ್ನೂ ತುಂಬಿಸಿಟ್ಟರೆ ನೋಡಲಿಕ್ಕೆ ಆನಂದವಾಗಿರುವುದಿಲ್ಲವೇ! ಹೊಸ ಹೊಸ ಪದ್ದತಿಯೆಂದರೆ ಕಾವ್ಯಗಳಲ್ಲಿ ಕಲ್ಪಸ್ಥಾಯಿಯಾಗಿರುವಂತೆ ಬರೆಯುವುದೊಂದು ದಾರಿ, ಕ್ಷಣಕ್ಕೆ ಒಂದು ವಿಧವಾಗಿ ಮಾತನಾಡುವ ಭಾಷೆಯಲ್ಲಿ ಬರೆಯುವುದಾದರೆ ಮತ್ತೊಂದು ದಾರಿಯನ್ನು ಹಿಡಿಯುವುದು.... ಭಾಷೆಯ ಮರ್ಯಾದೆಯನ್ನು ಕೆಡಿಸದೆ ಸಾಧ್ಯವಾದಷ್ಟು

ಮಟ್ಟಿಗೆ ಶುದ್ಧವಾಗಿ ಬರೆಯಲು ಪ್ರಯತ್ನಿಸಿರುವುದಾಗಿ" ಹೇಳಿಕೊಂಡಿದ್ದಾರೆ. (ಮರುನ್ನಂದನ ಶತಕಂ ೧೯೧೩ ಪೀಠಿಕೆ – ಪುಟ. ೧)

ಇಂತಹ ಆಲೋಚನೆಗಳು ಪ್ರತಿರೋಧಗಳು ಕಾವ್ಯದ ಭಾಷೆಗೆ ಇತ್ತು ಆದರೂ ಭಾಷೆ ಸರಳವಾಗಿದ್ದಾಗ ಮಾತ್ರ ಕವಿಯ ಭಾವನೆಯನ್ನೂ ಅರಿತು ಕಾವ್ಯವನ್ನು ಆನಂದಿಸಬಹುದೆಂದು ಅನೇಕರು ಅಭಿಪ್ರಾಯ ವ್ಯಕ್ತಪಡಿಸಿದರು. ಉಗ್ರಾಣ ಮಂಗೇಶರಾವ್‌ರವರು. "ಅಂದವಾದ ಭಾವನೆಯನ್ನು ಅದೊಂದು ಸಂತೋಷದ ಸಮಯದಲ್ಲಿ ಮನವೊಪ್ಪುವ ಸುಂದರವಾದ ಪದಗಳಿಂದ ಬರೆದ ಕವಿಯ ನುಡಿಯ ಸವಿಯನರಿತು ಆನಂದಿಸಬಹುದು; ಆದರೆ ಆ ನುಡಿಯ ಇಂಪನ್ನೂ ಮಾತಿನ ಬಿನ್ನಾಣವನ್ನೂ ಅರ್ಥದ ಸ್ವಾರಸ್ಯವನ್ನೂ ಅಲಂಕಾರದೌಚಿತ್ಯವನ್ನು ಇತರರಿಗೆ ತಿಳಿಯ ಹೇಳುವುದೆಂದರೆ ತಾನು ಕಲ್ಲು ಸಕ್ಕರೆ ತಿಂದು, ಅದರ ಸವಿಯನ್ನು ಇತರರಿಗೆ ಬಣ್ಣಿಸಿದಂತೆಯೇ ಸರಿ (ಕನ್ನಡ ಸಹಕಾರಿ – ಉಗ್ರಾಣ ಮಂಗೇಶರಾವ್ ಪು. ೧೩೬ – ಸೆಪ್ಟೆಂಬರ್ ೧೯೨೨)

ಇಂತಹ ಆನಂದವು ದೊರಯಬೇಕಾದರೆ ಭಾಷೆಯು ಸರಳವಾಗಿರಬೇಕು. ಅಲ್ಲದೆ ಆ ಕಾಲದ ಸ್ಥಳದ ಭಾಷೆಯು ಕಾವ್ಯದ ಭಾಷೆಯಾಗಬೇಕು. ಈ ಸಾಮಾನ್ಯರಾಡುವ ಭಾಷೆ ಕಾವ್ಯದ ಭಾಷೆಯಾದಾಗ ಮಾತ್ರ ಕೃತಿಯ ಸತ್ವವು ಜನರನ್ನು ತಲುಪುತ್ತದೆ. ಆದ್ದರಿಂದ ಕಾಲಕ್ಕೆ ತಕ್ಕಂತೆ ಸಾಹಿತ್ಯದ ಸ್ವರೂಪ ಬದಲಾಗುತ್ತ ಅದರ ಭಾಷೆಯು ಬದಲಾಗಬೇಕು. ಹೊಸ ಭಾವಗಳಿಗೆ ಹೊಸ ಶೈಲಿಯ ಜೊತೆಗೆ ಹೊಸ ಪದಗಳು ರಚನೆಯಾಗಬೇಕು. ಗೋವಿಂದ ಪೈಯವರು ಕಾಲಕ್ಕೆ ತಕ್ಕಂತೆ ಜೀವನ ಶೈಲಿಯಲ್ಲಿ ಬದಲಾವಣೆಗಳು ಕಂಡು ಬರುವಂತೆ, ಸಾಹಿತ್ಯದಲ್ಲೂ ಇಂತ ಬದಲಾವಣೆಯ ಅವಶ್ಯಕತೆ ಇದೆ ಎಂದು ಹೇಳಿದ್ದಾರೆ.

"ಕವಿತೆಯಲ್ಲಿ ಆಯಾ ಕಾಲಕ್ಕೆ ಅನುಗುಣವಾದ ಭಾವನೆಗಳು; ಆ ಭಾವನೆಗಳ ಧ್ವನಿಗೆ ಅನುಗುಣವಾದ ರೂಪು ಮೊದಲಾದವು ಇಲ್ಲದಿದ್ದರೆ, ಸಾವಿರಾರು ವರ್ಷಗಳ ಹಿಂದಿನ ಸನಗನ್ನು ಈಗಣ ಯೋಧನು ಹೇಗೆ ತೊಟ್ಟುಕೊಳ್ಳಬಹುದೋ? ಹೊಸ ಭಾವನೆಗಳನ್ನು ತಟ್ಟನೆ ಮೂಡಿಸಲಿಕ್ಕೆ ಹಳೆಯ ಶಬ್ದಗಳು ನೆರವಾಗದೆಂದಾದರೆ, ಕವಿ, ಹೊಸ ಶಬ್ಧಗಳನ್ನು ಕೂಡ ಸೃಷ್ಟಿಸಿ, ತನ್ನ ಭಾವನೆಗಳನ್ನು ಬೆಳಗಿಸಬೇಕೆಂದೇ ನನಗೆ ತೋರುತ್ತದೆ. ಆದುದರಿಂದ ಇದೆಲ್ಲ ಬಗೆಯ ನವೀನತೆಯು ಆಯಾ ಕಾಲದಲ್ಲಿ ಬರಲೇಬೇಕು ಈ ಬಗೆಗಳ ನವೀನತೆಯಿಂದಲೇ ಕನ್ನಡ ಸಾಹಿತ್ಯದ ಪುನರುಜ್ಜೀನವೆಂದು ನನ್ನ ದೃಢನಂಬಿಕೆ. ಕವಿಗೆ ಬೇಕಾದುದು ತುಂಬ ಸ್ವಾತಂತ್ರ್ಯ. ಅದನ್ನಾತನು ನೀಗಲಾಗದೆ ಕಳಕೊಂಡನೆಂದೇ ತಿಳಿಯಬೇಕು." (ಗೋವಿಂದ ಪೈ– ಪಾಂಡೇಶ್ವರ ಗಣಪತಿರಾಯರ ಹೂಗೊಂಚಲಿನ ವಿಮರ್ಶೆ, ಉದಯ ಭಾರತ– ಜೂನ್ ೧೯೨೮ – ಪು. ೭೧.೭೨).

ಇತರೆ ಭಾಷೆಯು ಸಾಹಿತ್ಯಗಳ ಜ್ಞಾನವನ್ನೂ ಸರಿಯಾಗಿ ಜನರಿಗೆ ಪರಿಚಯು ಮಾಡಿಕೊಡಬೇಕಾದರೆ ಕೆಲವು ಹೊಸದಾದ ಇಲ್ಲವೆ ಅಪರಿಚಿತ ಪದಗಳನ್ನು ಉಪಯೋಗಿಸಲೇ ಬೇಕಾಗುತ್ತದೆ. ಆದರೆ ಹೊಸ ಪದ ಸೃಷ್ಟಿಯ ಕೆಲಸ ಕಷ್ಟದ ಕೆಲಸ. ಆ ಕೆಲಸವನ್ನು ಮಾಡಿದ ಮೇಲೆ ಅದನ್ನು ರೂಢಿಗೆ ತರುವವರೆಗೂ ಮತ್ತು ಜನರು ಅದರ ಬಗ್ಗೆ ಒಲವು ತೋರಿಸುವುದಕ್ಕೆ

ಸಮಯ ಬೇಕಾಗುತ್ತದೆ. ಆದರೆ ಒಂದು ಭಾಷೆಯನ್ನು ಬೆಳೆಸಿ, ಅದರ ಜನರನ್ನು ಮೇಲಕ್ಕೆತ್ತಬೇಕೆಂದು ಆಸೆ ಪಡುವವರು ಇಂಥಾ ಕಷ್ಟಕ್ಕೆ ಸಿದ್ಧರಾಗಿರಬೇಕು.

ಪಾಶ್ಚಿಮಾತ್ಯ ವಿದ್ವಾಂಸರು ಶಿಕ್ಷಣದ ದೃಷ್ಟಿಯಿಂದ ಕಾವ್ಯದ ವಸ್ತು ಬದಲಾಗಬೇಕೆಂದು ಬಯಸಿದರು. ಅದುವರೆಗಿನ ಕಾವ್ಯದ ವಸ್ತುವಿಗಿಂತ ಮಕ್ಕಳಿಗೆ ಅರ್ಥೈಸಿಕೊಳ್ಳಲು ಅನುಕೂಲವಾಗುವಂತೆ ಇರಬೇಕು ಎಂದು ಬಯಸಿದರು. ಈ ಆಲೋಚನೆಯೆ ಕಾವ್ಯದ ವಸ್ತು ಬದಲಾಗಲು ಕಾರಣವಾಯಿತು. ಶಾಲೆಗಳಿಗೆ ಮಕ್ಕಳ ಅನುಕೂಲಕ್ಕಾಗಿ ಸರಿಯಾಗಿ ಕವಿತೆಗಳನ್ನು ರಚಿಸಿ ೧೮೮೬ರಲ್ಲಿ 'ಕನ್ನಡ ಕಾವ್ಯ ಭಾಗ – ೧' ಪಠ್ಯ ಪುಸ್ತಕವನ್ನು 'ಜೆಬಿ' (ಜೆ.ಬ್ರಿಗಿಲ್ ಇರಬೇಕು) ಅವರು ಪ್ರಕಟಿಸಿದ್ದಾರೆ. ಅವನ ಉದ್ದೇಶವು "ಕನ್ನಡವು ಜೀವಂತ ಭಾಷೆಯೇ ಅದರೆ ಎಳೆಯ ಮಕ್ಕಳಿಗೆ ಹೆಚ್ಚಿನ ಪದ್ಯಗಳನ್ನು ನೋಡಿದರೆ ಹಾಗೆನಿಸುವುದಿಲ್ಲ.' ಎಂಬುದಾಗಿದೆ ಇದಲ್ಲದೆ ಮಕ್ಕಳಿಗಾಗಿ ರಚನೆಯಾಗುವ ಪದ್ಯಗಳ ಲಕ್ಷಣವನ್ನು ಕುರಿತು "ಕಾವ್ಯವು ಸಂಸ್ಕೃತದಂತಹ ಆಡಂಬರದ ಹಾಗೂ ನಿಯಮಬದ್ಧವಾದ ಸಾಹಿತ್ಯದ ಅನುಕರಣೆಯನ್ನು ಮತ್ತು ಕ್ಲಿಷ್ಟಕರವಾದ ನುಡಿಗಟ್ಟುಗಳು ಹಾಗು ಪದಗಳನ್ನು ಬಿಟ್ಟು, ಸರಳವಾದ, ಸಹಜವಾದ, ನೈಸರ್ಗಿಕವಾದ, ಸುಲಲಿತವಾದ ಎಲ್ಲರಿಗೂ ಅನ್ವಯಿಸುವ ಆಡುಭಾಷೆಯಲ್ಲಿ ಇರಬೇಕು."೨

ಇದರಲ್ಲಿ ಪ್ರಕಟವಾದ ಕವಿತೆಗಳು ಹೀಗಿವೆ.

**ನಾಯಿಯ ವರ್ಣನೆ**

ಒಂದು ನಾಯಿಯು ತನ್ನ ಬಾಯೊಳು
ಚಂದವಾಗಿರ್ದೊಂದು ರೊಟ್ಟಿಯ
ಅಂದದಿಂದಲಿ ಕಟ್ಟಿಕೊಂಡು ಹೊಳೆಯವಾಟತಿರೆ
ಸಂದ ನೆರಳವ ಕಂಡು ಇದುಮ–
ತೊಂದು ಸೊಣಗನು ಯಿದರ ಬಾಯೊಳ
ಗಿಂದ ಕಸಗೊಳಬೇಕು ರೊಟ್ಟಿಯಿನೆಂದು ಬಗೆಯುತ॥

**ಹಿರಿಯರ ಮಾತು ಮೀರಬಾರದು**

ತಂದೆಯೊಬ್ಬನು ಮಗನ ಕರದಿಂ
ತೆಂದ; ನೋಡ್ಯೆ ! ನಮ್ಮ ಕರೆಯೊಳ

2 "Free from all bombastic pedantic imitation of Sanskrit fashion of expression, the eloaborate phraseology and the fanciful word combination, only aiming at simplicity clear-ness naturalness and graceful, compatible with the spoken dialect"

ಗೊಂದು ಮೊಸಳೆಯ ಕಂಡೆನೈ ಮರಿ ಸಹಿತ ಇರುವುದನ್ನು
ಕಂದ, ನೀನಾ ಕೆರೆಗೆ ಹೋಗದಿ
ರೆಂದು ಬುದ್ಧಿಯ ಹೇಳಿದನು, ಮ
ತ್ತೊಂದು ದಿನದೊಳಗಪ್ಪನಿಲ್ಲದ ಸಮಯದಲ್ಲಿ ಹಾಡು॥

**ವಸ್ತು**

೧೯ನೇ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯಗಳ ಅನುವಾದಗಳು ಇಂತಹ ಹೊಸ ಆಲೋಚನೆಗಳಿಗೆ ಪೋಷಣೆ ನೀಡಿತು. ತಮ್ಮ ಆಲೋಚನೆ ಬದುಕು ಇತರಿಗಿಂತ ಹೇಗೆ ಭಿನ್ನವಾಗಿದೆ? ನಮ್ಮ ಕಾವ್ಯದ ಸ್ವರೂಪಕ್ಕಿಂತ ಹೊಸ ರೂಪದ ಕಾವ್ಯಗಳ ರಚನೆ ಹೇಗೆ ವೈಶಿಷ್ಟ್ಯದಿಂದ ಕೂಡಿದೆ ಎಂಬುದರ ಅರಿವು ಇಂಗ್ಲಿಷ್ ಶಿಕ್ಷಣದ ಮಹತ್ವದ ಕೊಡುಗೆ. ಇದರಿಂದ ಹುಟ್ಟಿಕೊಂಡ ಹೊಸ ಸಾಹಿತ್ಯವೆ ಹೊಸ ಚಿಂತನೆಯ ಫಲ. ಇದಕ್ಕೆ ಮಾಸ್ತಿಯವರು "ಆಧುನಿಕ ಕಾವ್ಯವು ಈ ಶತಮಾನದ ಆರಂಭದಲ್ಲಿ ಪ್ರಾರಂಭವಾಯಿತು. ಜಾನಪದ ಛಂದಸ್ಸನ್ನು ಪ್ರೌಢವಾದ ವಸ್ತುವಿಗೆ ಬಳಸುವುದೂ ಜನಬಳಕೆಯ ಮಾತಿನ ಹತ್ತಿರ ಹತ್ತಿರದ ಭಾಷೆಯನ್ನೇ ಸಾಹಿತ್ಯದಲ್ಲಿ ಬಳಸುವುದೂ ಈ ಹೊಸತನದ ಲಕ್ಷಣಗಳು" ಎಂದಿದ್ದಾರೆ.

ಇಂಗ್ಲಿಷ್ ಸಾಹಿತ್ಯದ ಪ್ರಭಾವವು ಕನ್ನಡ ಕಾವ್ಯ ಪರಂಪರೆಯ ಮೇಲೆ ಉಂಟುಮಾಡಿದ ಪ್ರಭಾವವನ್ನು ಕುರಿತು ಇ.ಪಿ. ರೈಸರವರು ಇದರ ಬಗ್ಗೆ "ಪಾಶ್ಚಾತ್ಯ ವಿಚಾರಗಳ ಮಹಾಪ್ರವಾಹದಿಂದ ಕನ್ನಡ ಸಾಹಿತ್ಯವಾಹಿನಿ ಬಹಳ ಬದಲಾಯಿಸಿವೆ ಮತ್ತು ವಿಶಾಲವಾಗಿವೆ' ಎಂದಿದ್ದಾರೆ. ಶ್ರೀಯವರು ಕೂಡ "ಈಗ ೧೯ನೆಯ ಶತಮಾನದಲ್ಲಿ ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ ಐಹಿಕ ಸಾಧನ ಸಂಪತ್ತು ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶ ಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ದೇಶಾಭಿಮಾನವನ್ನೂ, ಹೊಸ ರುಚಿಯನ್ನೂ ಕಲಿತು, ಹೊಸ ರೀತಿಗಳಲ್ಲಿ ಕಾವ್ಯ ಸೃಷ್ಟಿಯನ್ನು ಅಭ್ಯಾಸಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತ ಕವಿತೆಗಳೂ, ಹೊಸ ಕಾವ್ಯರೂಪಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು ಲಕ್ಷ್ಯಕ್ಕೆ ತಾರದೆ ಸ್ವತಂತ್ರ್ಯ ಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿವೆ." (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೫)

ಇಂಗ್ಲಿಷ್ ಸಾಹಿತ್ಯಗಳ ಅನುವಾದಗಳು ಇಂತಹ ಹೊಸ ಆಲೋಚನೆಗಳಿಗೆ ಪೋಷಣೆ ನೀಡಿತು. ತಮ್ಮ ಆಲೋಚನೆ ಬದುಕು ಇತರಿಗಿಂತ ಹೇಗೆ ಭಿನ್ನವಾಗಿದೆ? ನಮ್ಮ ಕಾವ್ಯದ ಸ್ವರೂಪಕ್ಕಿಂತ ಹೊಸ ರೂಪದ ಕಾವ್ಯಗಳ ರಚನೆ ಹೇಗೆ ವೈಶಿಷ್ಟ್ಯದಿಂದ ಕೂಡಿದೆ ಎಂಬುದರ ಅರಿವು ಇಂಗ್ಲಿಷ್ ಶಿಕ್ಷಣದ ಮಹತ್ವದ ಕೊಡುಗೆ. ಇದರಿಂದ ಹುಟ್ಟಿಕೊಂಡ ಹೊಸ ಸಾಹಿತ್ಯವೆ

ಹೊಸ ಚಿಂತನೆಯ ಫಲ. ಇದಕ್ಕೆ ಮಾಸ್ತಿಯವರು "ಆಧುನಿಕ ಕಾವ್ಯವು ಈ ಶತಮಾನದ ಆರಂಭದಲ್ಲಿ ಪ್ರಾರಂಭವಾಯಿತು. ಜಾನಪದ ಛಂದಸ್ಸನ್ನು ಪ್ರೌಢವಾದ ವಸ್ತುವಿಗೆ ಬಳಸುವುದೂ ಜನಬಳಕೆಯ ಮಾತಿನ ಹತ್ತಿರ ಹತ್ತಿರದ ಭಾಷೆಯನ್ನೇ ಸಾಹಿತ್ಯದಲ್ಲಿ ಬಳಸುವುದೂ ಈ ಹೊಸತನದ ಲಕ್ಷಣಗಳು." (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೫) ಎಂದಿದ್ದಾರೆ.

ಈ ಹೊಸ ಸಾಹಿತ್ಯವು ಕೇವಲ ಬಾಹ್ಯರಚನೆಯಲ್ಲಿ ಮಾತ್ರ ಹೊಸತನವನ್ನು ಕಂಡುಕೊಳ್ಳದೆ ವಸ್ತುವಿನಲ್ಲೂ ಹೊಸತನವನ್ನು ಸ್ವೀಕರಿಸಿತು. ಶ್ರೀಯವರು "ಈಗ ಇಂಗ್ಲಿಷ್ ಸಾಹಿತ್ಯ ವೃಷ್ಟಿಯಿಂದ ಹುಚ್ಚು ಹೊಳೆಯಾಗಿ ಮೊರೆಯುತ್ತ ಬಂಡೆಗಳ ನಡುವೆ ನೂರು ಕವಲಾಗಿ ಒಡೆಯುತ್ತ, ಜನ್ಮ ಭೂಮಿಯ ಘಟ್ಟಗಳನ್ನು ತೊರೆದು ದಿವ್ಯ ವೇಗದೊಡನೆ ಕೆಳಕ್ಕೆ ಧುಮುಕಿ, ಸ್ವತಂತ್ರವಾಗಿ, ವಿಸ್ತಾರವಾಗಿ ಬಯಲುನಾಡಿನಲ್ಲಿ ಪಯಿರ ಸಮೃದ್ಧಿಯನ್ನು ಪಡೆದು ವಿಹಾರ ಮಾಡಲು ತವಕಿಸುತ್ತಿದೆ."೧೮ ಎಂದು "ಶ್ರೀ"ಯವರಂದುದು ನಿಜ. ಅಷ್ಟೆ ಅಲ್ಲ. "ವಿಹಾರ ಮಾಡಲು ತವಕಿಸುತ್ತಿದೆ" ಎಂಬುದನ್ನು ಬದಲಾಯಿಸಿ 'ವಿಹರಿಸುತ್ತಿದೆ' ಎಂದರೆ ತಪ್ಪಾಗದು. (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೬)

ಇಂತಹ ಬದಲಾವಣೆಗೆ ಮುಖ್ಯಕಾರಣವೆಂದರೆ ಪೂರ್ವದ ಕಾವ್ಯಗಳು. ಕೇವಲ ಏಕ ಮಾದರಿಯ ವಸ್ತು. ಪೌರಾಣಿಕ, ಆಧ್ಯಾತ್ಮಿಕ ವಿಚಾರಗಳು, ಕ್ಲಿಷ್ಟವಾದ ಛಂದೋ ಬಂಧ, ಕಠಿಣ ಶಬ್ದ ಪ್ರಯೋಗ ಮುಂತಾದ ವಿಚಾರಗಳು ಸಾಹಿತ್ಯದ ಬಗ್ಗೆ ನೀರಸ ಭಾವನೆಯನ್ನು ಉಂಟುಮಾಡಿತ್ತು. ಆದರೆ ಇಂಗ್ಲಿಷ್ ಕಾವ್ಯದ ಹೊಸ ವಿಚಾರಗಳು ಜನರನ್ನು ಆಕರ್ಷಿಸಿತು. ಟಿ. ಎಸ್. ಎಲಿಯಟ್ ಹೇಳುವಂತೆ ಅತ್ಯಂತ ಒಳ್ಳೆಯದಾದ ಸಂಪ್ರದಾಯದಲ್ಲಿಯೂ ಒಳ್ಳೆಯದು ಕೆಟ್ಟದು, ಎರಡೂ ಇದ್ದೇ ಇರುತ್ತದೆ. ವಿಮರ್ಶೆ ವಿವೇಚನೆಗೆ ಯೋಗ್ಯವಾದುದೂ ಇರುತ್ತದೆ. ಹಳೆಯದೆಂದೊಡನೆಯೇ ಭಕ್ತಿಯಿಂದ ಅದನ್ನು ಅನುಕರಿಸಬೇಕಾಗಿಲ್ಲ, ಅನುಸರಿಸಬೇಕಾಗಿಲ್ಲ. ನಾಲ್ಕಾರು ನಿಯಮಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅವುಗಳನ್ನೇ ಅನುಸರಿಸುತ್ತೇವೆ ಎನ್ನುವುದು ಜೀವಂತತೆಯ ಲಕ್ಷಣವಲ್ಲ. ಏಕೆಂದರೆ ಒಂದು ಕಾಲದಲ್ಲಿ ಬಹಳ ಮುಖ್ಯವಾದ ನಂಬಿಕೆಗಳು, ಒಳ್ಳೆಯ ರೂಢಿಗಳು, ಮತ್ತೊಂದು ಕಾಲದಲ್ಲಿ ಕೆಟ್ಟದಾಗಿರುವುದು ಸಾಧ್ಯವೆಂಬುದನ್ನು ನೆನೆಯಬೇಕು. ಸಂಪ್ರದಾಯವನ್ನು ಬುದ್ಧಿವಂತಿಕೆಯಿಂದ, ನೋಡಿ ವಿವೇಚಿಸಿ, ಅಧರ ಉತ್ತಮಗುಣಗಳನ್ನು ತೆಗೆದುಕೊಂಡರೆ ಅದು ದೇಶಕ್ಕೆ ಒಳ್ಳೆಯದು." (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ–ಪು. ೯) ಎಂದಿದ್ದಾರೆ.

ಕಾವ್ಯದ ವಿಭಿನ್ನ ಆಯಾಮಗಳು ಸೃಷ್ಟಿಗೊಂಡಿದ್ದು ಕವಿ ವಲಯದಲ್ಲಿ ಹುಟ್ಟಿಕೊಂಡ ಸ್ಪರ್ಧೆ. ಇಂಗ್ಲಿಷ್ ಸಾಹಿತ್ಯವು ಹೊಸ ಮಾದರಿಯ ರಚನೆಯನ್ನು ಕಟ್ಟಿಕೊಟ್ಟಿತು. ಅಲ್ಲದೆ ಆರಂಭದ ಅನುವಾದಕರು ಒಂದು ಕವಿತೆಯನ್ನು ವಿವಿಧ ರೂಪದಲ್ಲಿ ರಚನೆ ಮಾಡಿದ್ದು ಮುಂದಿನವರಿಗೆ ಪ್ರೇರಣೆಯಾದವು. ಎಂ.ಎ. ರಾಮಾನುಜಯ್ಯಂಗಾರ್ಯರು "ಎಲ್ಲರೂ ನಡೆದ ಮಾರ್ಗದಲ್ಲಿ ತಾನೂ ನಡೆದರೆ ತನಗೂ ಅವರಿಗೂ ಇರುವ ವ್ಯತ್ಯಾಸವು ತಿಳಿದುಬರುವುದು. ತನ್ನ ನಡತೆಯ ಕೊರತೆಯೂ ಗೊತ್ತಾಗುವುದು. ಹೀಗಿರುವುದರಿಂದ ತಾರತಮ್ಯ ಜ್ಞಾನವುಂಟಾಗಿ ಕವಿಗಳಲ್ಲಿ ತಾನು ಮೀರಿಸಬೇಕು.

ತಾನು ಮೀರಿಸಬೇಕೆಂಬ ಸ್ಪರ್ಧೆಯು ಹುಟ್ಟುವುದಕ್ಕೆ ಪ್ರಾಚೀನ ಕವಿಸಂಕೇತವನ್ನು ಅನುಮೋದಿಸುತ್ತ ಬರಬೇಕು. ಹಾಗೆಯೇ ಉತ್ಕರ್ಷವನ್ನು ಪಡೆವುದಕ್ಕೆ ಯತ್ನಿಸಲು ಕಾರಣವೆಂಬುದು ಎಲ್ಲೆಯಲ್ಲಿಯೂ ಪಡುವುದರಿಂದ ಕವಿಗಳಲ್ಲಿಯೂ ಈ ವಿಧವಾದ ಸ್ಪರ್ಧೆಯು ಕಾವ್ಯಭಿವೃದ್ಧಿಗೆ ಕಾರಣವು"(ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೯-೧೦) ಎಂದು ಹೇಳಿದ್ದಾರೆ.

೧೯ನೇ ಶತಮಾನದ ಕಾವ್ಯಗಳಲ್ಲಿ ಇಂತಹ ಗೊಂದಲದ ಸ್ಥಿತಿಯು ಇತ್ತು. ಅವರು ಹೊಸತನ್ನು ಬರೆಯ ಹೊರಟರು ಪೂರ್ವದ ಲಕ್ಷಣಗಳನ್ನು ಬಿಟ್ಟುಕೊಡದ ಸ್ಥಿತಿಯಲ್ಲಿದ್ದರು. ಸೋಸಲೆ ಅಯ್ಯಶಾಸ್ತ್ರಿಗಳು, ೧೯೦೧ರಲ್ಲಿ ಬರೆದ ತಮ್ಮ ಶೇಷರಾಮಾಯಣದಲ್ಲಿ "ಈ ಗ್ರಂಥವು ಸ್ತ್ರೀಯರಿಗೂ ಪಠಣಯೋಗ್ಯವಾಗಿರಬೇಕೆಂಬ ಉದ್ದೇಶದಿಂದ ಕಾವ್ಯಲಕ್ಷಣಾನುಸಾರವಾಗಿ ಉತ್ತಮವಾಗಿರುವ ಅಷ್ಟಾದಶವರ್ಣನೆಗಳೂ ಶೃಂಗಾರಾದಿ ನವರಸಗಳೂ ಸಂಗತವಾಗಿಯೂ ಗಂಭೀರವಾಗಿಯೂ ಇರುವುವು" ಎಂದಿದ್ದಾರೆ.

ಇನ್ನೂ ಅನೇಕ ಕವಿಗಳು ಹಿಂದಿನ ಕವಿಗಳೆಲ್ಲಾ ಅನುಸರಿಸಿದ್ದು ಮಾರ್ಗ ಸಾಹಿತ್ಯವನ್ನೇ. ಪರಂಪರೆಯನ್ನು ಸಾರಾಸಗಟಾಗಿ ನಿರಾಕರಿಸುವ ಧೈರ್ಯ, ಆಲೋಚನೆಗಳು ಮಾಡಿಯೇ ಇರಲಿಲ್ಲ. "ಒಬ್ಬ ಕವಿಯ ಸಾಹಿತ್ಯವನ್ನು ಮತ್ತೊಬ್ಬನು ಅನುಮೋದಿಸದೆ ಬೇರೆಯೇ ಪ್ರದರ್ಶಿಸಿದರೆ ಪಾಠಕರಿಗೆ ಅವರವರ ಆಶಯವನ್ನು ತಿಳಿಯುವುದೇ ಕಷ್ಟ" ಎಂದು ಭಾವಿಸಿ ಹಳೆಯ ವಸ್ತು, ಶೈಲಿ, ಛಂದಸ್ಸು ಇವುಗಳನ್ನೇ ಬಳಸಿಕೊಂಡರು.

ವಸ್ತುವಿನಲ್ಲೂ ಹೂಸತನವನ್ನು ಸ್ವೀಕರಿಸಿತು. ಇಂತಹ ಬದಲಾವಣೆಗೆ ಮುಖ್ಯಕಾರಣವೆಂದರೆ ಪೂರ್ವದ ಕಾವ್ಯಗಳು ಕೇವಲ ಏಕ ಮಾದರಿಯ ವಸ್ತು, ಪೌರಾಣಿಕ, ಆಧ್ಯಾತ್ಮಿಕ ವಿಚಾರಗಳು, ಕ್ಲಿಷ್ಟವಾದ ಛಂದೋ ಬಂಧ, ಕಠಿಣ ಶಬ್ದ ಪ್ರಯೋಗ ಮುಂತಾದ ವಿಚಾರಗಳು ಸಾಹಿತ್ಯದ ಬಗ್ಗೆ ನೀರಸ ಭಾವನೆಯನ್ನು ಉಂಟುಮಾಡಿತ್ತು. ಆದರೆ ಇಂಗ್ಲಿಷ್ ಕಾವ್ಯದ ಹೊಸ ವಿಚಾರಗಳು ಜನರನ್ನು ಆಕರ್ಷಿಸಿತು. ಟಿ. ಎಸ್. ಎಲಿಯಟ್ ಹೇಳುವಂತೆ

"ಅತ್ಯಂತ ಒಳ್ಳೆಯದಾದ ಸಂಪ್ರದಾಯದಲ್ಲಿಯೂ ಒಳ್ಳೆಯದು ಕೆಟ್ಟದು, ಎರಡೂ ಇದ್ದೇ ಇರುತ್ತದೆ. ವಿಮರ್ಶೆ ವಿವೇಚನೆಗೆ ಯೋಗ್ಯವಾದುದೂ ಇರುತ್ತದೆ. ಹಳೆಯದೆಂದೊಡನೆಯೇ ಭಕ್ತಿಯಿಂದ ಅದನ್ನು ಅನುಕರಿಸಬೇಕಾಗಿಲ್ಲ, ಅನುಸರಿಸಬೇಕಾಗಿಲ್ಲ. ನಾಲ್ಕಾರು ನಿಯಮಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅವುಗಳನ್ನೇ ಅನುಸರಿಸುತ್ತೇವೆ ಎನ್ನುವುದು ಜೀವಂತಿಕೆಯ ಲಕ್ಷಣವಲ್ಲ. ಏಕೆಂದರೆ ಒಂದು ಕಾಲದಲ್ಲಿ ಬಹಳ ಮುಖ್ಯವಾದ ನಂಬಿಕೆಗಳು, ಒಳ್ಳೆಯ ರೂಢಿಗಳು, ಮತ್ತೊಂದು ಕಾಲದಲ್ಲಿ ಕೆಟ್ಟದಾಗಿರುವುದು ಸಾಧ್ಯವೆಂಬುದನ್ನು ನೆನೆಯಬೇಕು. ಸಂಪ್ರದಾಯವನ್ನು ಬುದ್ಧಿವಂತಿಕೆಯಿಂದ, ನೋಡಿ ವಿವೇಚಿಸಿ, ಅದರ ಉತ್ತಮಗುಣಗಳನ್ನು ತೆಗೆದುಕೊಂಡರೆ ಅದು ದೇಶಕ್ಕೆ ಒಳ್ಳೆಯದು." (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ-ಪು. ೧೩) ಎಂದಿದ್ದಾರೆ

ಬಿ.ಎಂ.ಶ್ರೀಯವರ ಇಂಗ್ಲೀಷ್ ಗೀತೆಗಳು ರಚನೆಯ ವೇಳೆಗಾಗಲೇ ಕನ್ನಡದಲ್ಲಿ ಅನೇಕ ಸ್ವತಂತ್ರ ಕವಿತೆಗಳು ವಿಶಿಷ್ಟವಾದ ವಸ್ತು ಹಾಗೂ ಶೈಲಿಯೊಂದಿಗೆ ರಚನೆಯಾಗಿದ್ದವು. ಕನ್ನಡದ ಎರಡನೆಯ ಪಠ್ಯ ಪುಸ್ತಕದಲ್ಲಿ ಮಕ್ಕಳಿಗಾಗಿ ರಚಿಸಿದ ಕವಿತೆಗಳು ಭಿನ್ನವಾಗಿವೆ. ಪ್ರಾಸದಿಂದ ಕೂಡಿದ್ದರೂ ಭಾಷೆ ಹಾಗೂ ವಸ್ತು ಹೊಸತನಕ್ಕೆ ಹತ್ತಿರವಾಗಿವೆ. ಕೆಲವು ಪದ್ಯಗಳ ಉದಾಹರಣೆ ಇಂತಿವೆ–

**ಮದ್ಯಪಾನ ನಿಷೇಧ**

ಇಂದೆ ಸುರಾಪಾನವನ್ನು ಬಿಡುಗೆಳೆಯಾ ।ಪ।
ಗಾಂಧಿಗಳ ವೇದವಾಕ್ಯವ ಕೇಳು ಪ್ರೀಯಾ ।ಅ.ಪ।
ಮದ್ಯಪಾನವ ಮಾಡಲಾಗದೆಂದೊರೆಯುವರು।
ಬುದ್ಧಿಶಾಲಿಗಳಾದ ಗಾಂಧಿಯವರದರಿಂ॥
ಮದ್ಯ ಸೇವನೆಯ ಬಿಡು ದೇಶಸೇವೆಯ ಮಾಡು।
ಮದ್ಯವರ್ಜನದಿಂದ ಲೇಸಹುದು ನೋಡು.
(ಉದಯರಾಗ–ಕವಿಶಿಷ್ಯ)

ಕನ್ನಡ ಎರಡನೆಯ ಪಠ್ಯಪುಸ್ತಕ

**ಸಂಜೆಯ ಹಾಡು**

ಹಗಲೆಲ್ಲಾ ಕಳೆಯಿತು ಸೂರ್ಯನು ಮುಳುಗೆ।
ಖಗ ಹಾರಿತು ಗೂಡಿನ ಒಳಗೆ॥
ಜಗವೆಲ್ಲಾ ಬೆಳಗಿತು ದೀಪವು ಬೆಳಗೆ।
ಗಗನಾಂಗಣದಲಿ ಉಡು ತೊಳಗೆ॥
ಮೃಗವೆಲ್ಲಾ ಅಲೆದವು ಬೆಟ್ಟದ ಕೆಳಗೆ।
ಹೊಗತಿರುವುದು ಕತ್ತಲೆ ಇಳೆಗೆ ॥ಜ!
ಮಗುವೇ। ನೀ ಸಂಜೆಯ ಗಳಿಗೆ–ಯಲಿ
ನಗುತಲಿ ಬಾ ನನ್ನಯ ಬಳಿಗೆ – ಕೈ
ಮುಗಿಯುತ ಹಿರಿಯರ ಪದಗಳಿಗೆ, – ಈ
ಹಗಲಲಿ ನಿನ್ನನು ಕಾಯ್ದಾ ದೇವರಿಗೆ
ಮಿಗೆ ವಂದಿಸು ಸಂತಸದಿಂದಾ (ಕವಿಶಿಷ್ಯ)

ಅಂದಿನ ಪತ್ರಿಕೆಗಳಲ್ಲೂ ಹೊಸ ವಸ್ತು ಹಾಗು ಹೊಸ ಮಾದರಿಯ ಕವಿತೆಗಳು ರಚನೆಯಾಗಿವೆ. ೧೯೦೦ರ ಮಾರ್ಚ್ ತಿಂಗಳ ವಿದ್ಯಾದಾಯಿನಿ ಪತ್ರಿಕೆಯಲ್ಲಿ ಬಿ.ವೆಂಕಟಾಚಾರ್ಯರು ಬರೆದಿರುವ 'ಗೆರಸೊಪ್ಪ ಜೋಗು' ಕವಿತೆ ವಸ್ತುವಿನ ದೃಷ್ಟಿಯಿಂದ ವಿಶಿಷ್ಟವಾದದ್ದು ಹಾಗೂ ಪ್ರಾಸ ರಹಿತವಾಗಿದೆ.

ಕೃಷ್ಣ ಮಹೀಶಕೃಪಾವಿತ ಜಗದೊಳಗದ್ಭುತಮಾಗಿಹು ಜೋಗು॥ ॥೧॥
ಜೋಗಿನ ಸೊಗಸನು ನೋಡಲದು। ಯೋಗಿಗಳಿಗು ಮನಸಾಗುವುದು।
ಯೋಗಿಗಳರಸ ಕೃಪಾಕರ ಶುಭಕರ ಶಂಕರನೊಲಿವಂತಿರುತಿಹುದು॥ ॥೨॥
ರಾಜಿಪ ಮೈಸೂರು ದೇಶದಲಿ। ರಾಜಿಸುತಿರುವುದು
ಜಗದಿಂ ತೀರ್ಥಳ್ಳಿ ಸಮೀಪದಿ ರಾಜಿಸುತಿಹುದಂಬುತೀರ್ಥಮದು॥

೧೯ನೇ ಶತಮಾನದಲ್ಲಿ ಮಧ್ಯಭಾಗದಲ್ಲಿ ಕನ್ನಡದಲ್ಲಿ ಸ್ಥಳೀಯರಿಂದಲೇ ಭಾವಗೀತೆಯ ಮಾದರಿಯಲ್ಲಿ ಕವಿತೆಗಳು ರಚನೆಯಾಗಿರುವುದು ಗಮನಾರ್ಹ. ಶಿಶುನಾಳ ಷರೀಫರು ಭಾವಗೀತೆಯ ಮಾದರಿಯ ತತ್ವ ಪದಗಳನ್ನು ರಚಿಸಿದ್ದರು. ಹೊಸಗನ್ನಡ ಸಾಹಿತ್ಯದ ಲಕ್ಷಣಗಳು ಇವರ ಕವಿತೆಗಳಲ್ಲಿವೆ. ತನ್ನ ಹೆಂಡತಿಯ ಬಗೆಗೆ ಇದ್ದ ಪ್ರೀತಿಯನ್ನು ವ್ಯಕ್ತ ಪಡಿಸುವುದು ಈ ಕವಿತೆಯ ವಸ್ತು.

ನನ್ನ ಹೇಣ್ತೀ – ನೀ
ನನ್ನ ಹೇಣ್ತೀ
ನಿನ್ನ ಹೆಸರೇನ್ಹೇಳಲೆ ಗುಣವಂತೀ
ಮೊದಲಿಗೆ ತಾಯಾದಿ ನನ್ನ ಮತ್ತೆ
ಸದನಕ್ಕೆ ಸೊಸಿಯಾದೆ ನನ್ನ ಹೇಣ್ತೀ ಮತ್ತ
ಮುದದಿಂದ ಮೋಹಿಸಿ ಮದುವ್ಯಾದವನಿಗೆ
ಮಗಳೆಂದೆನಿಸಿದ ನನ್ನ ಹೆಣ್ತೀ ತುತ್ತು ನೀಡಿ
ಎನ್ನೆತ್ತಿ ಆಡಿಸಿದ ಹೆತ್ತವ್ವ ನೆನಿಸಿದಿ ನನ್ನ ಹೇಣ್ತೀ
ಚಿಕ್ಕಮ್ಮನ ಸರಿ ನೀ ನನ್ನ ಹೆಣ್ತೀ ನನಗ
ತಕ್ಕವಳೆನಿಸಿದಿ ನನ್ನ ಹೇಣ್ತೀ

ಇಂಥ ಹೆಂಡತಿ –ತಾಯಿಯೂ ಆದ ಫಾತಿಮಾಬಿ ತೀರಿಕೊಂಡ ನಂತರ ಕುಂದಗೋಳಕ್ಕೆ ಹೋಗಿದ್ದ ಶರೀಫರಿಗೆ ತಮ್ಮ ಬೀಗನಿಂದ ಅಪಮಾನವಾಯಿತು. ಅಂದೇ ಅವರು ನಿಶ್ಚಯಿಸಿದರು:

ಮೋಹದ ಹೆಂಡತಿ ಸತ್ತ ಬಳಿಕ ಇನ್ನು
ಮಾವನ ಮನೆಯ ಹಂಗೇತಕೆ? ॥ ಪ ॥

ನೋವು ಸಾವಿಗೆ ತರುವ ಬೀಗನ ಮಾತಿಗೆ
ದೇಹದ ಸುಖದಾಶೆ ಇನ್ನೇತಕೆ? ॥ ೧॥
ಮಂಡಲನಾಡಿಗೆ ಪಿಂಡದ ಗೂಡಿಗೆ
ಭಂಡುತನದಿ ಬಯಕೆ ಇನ್ನೇತಕೆ? ॥ ೨ ॥
ಕಂಡ ನದಿಯೊಳು ನೂಕಿ ತನ್ನ ಮನದೊಳು ತಾಕಿ
ಬಂದೆದ್ದು ಹೋದರೆ ಭಯವೇಕೆ? ॥ ೩ ॥
ಸುಂದರ ಗುರುಗೋವಿಂದನ ಸೇವಕ
ಕುಂದಗೋಳಕೆ ಬಂದು ನಿಂತನೇಕೆ? ॥ ೪ ॥

ಇಂತಹ ಸರಳವಾದ ಗೀತೆಗಳು ಸ್ಥಳೀಯವಾಗಿ ರಚನೆಯಾದದ್ದು ತತ್ವಪದಕಾರರಲ್ಲಿ ಮಾತ್ರ. ಆದರೆ ಇಡೀ ನಾಡಿನ ಜನರಿಗೆ ತಲುಪಿದ್ದು ಬಹಳ ತಡವಾಗಿ. ಆದರೆ ಪಾಶ್ಚಾತ್ಯ ಸಾಹಿತ್ಯದ ಅನುವಾದಿತ ಕೃತಿಗಳ ಮಾದರಿಗಳು ಎಲ್ಲಾ ವಿದ್ಯಾವಂತ ಪೀಳಿಗೆಗೆ ಲಭ್ಯವಾಗಿತ್ತು. ಆಗಾಗಿಯೇ ಕಾವ್ಯದ ಶೈಲಿ, ವಸ್ತು ಎಲ್ಲವೂ ಬದಲಾಗಬೇಕು ಎಂಬ ಧೋರಣೆಗಳು ಮುಕ್ತವಾಗಿ ಚರ್ಚಿಸಲು ಆರಂಭವಾಯಿತು.

ಕೆ.ಜಿ.ಅಂಕಲಗಿಯವರು ಕಾವ್ಯದ ವಸ್ತು ಹಾಗೂ ಶೈಲಿ ಕುರಿತಂತೆ "ಪ್ರತಿಭಾಸಂಪನ್ನರಾದ ಕನ್ನಡ ಕವಿಗಳು ಕಾವ್ಯರಚನೆಗೆ ಕೈಯೆತ್ತುವಾಗ ಹಲವು ಮಾತುಗಳನ್ನು ಯೋಚಿಸಬೇಕಾಗಿದೆ. ಕಾವ್ಯಕ್ಕೆ ತಕ್ಕುದಾದ ವಸ್ತುವನ್ನು ಆಯ್ದುಕೊಳ್ಳುವುದು; ಓದುಗರ ಯೋಗ್ಯತೆಗೆ ತಕ್ಕಂತಹ ಶೈಲಿಯನ್ನು ನಿರ್ಣಯಿಸುವದು; ಮುಂದೆ ಆ ಕಾವ್ಯದ ಪ್ರಕಟನೆಗೆ ತಕ್ಕ ಸಾಧನ ಸಂಪತ್ತಿಯನ್ನು ಕಲ್ಪಿಸಿಕೊಳ್ಳುವದು..... ಪ್ರಸ್ತುತ ಕಾವ್ಯದ ಕರ್ತೃವಾದ ಶ್ರೀನರಹರಿರಾಯರು ಕಾವ್ಯದ ವಸ್ತುವನ್ನು ಶೋಧಿಸಲು ಹೆಚ್ಚು ಪರಿಶ್ರಮ ಪಡಲಿಲ್ಲವೆಂದು ಹೇಳಬೇಕಾಗುವುದು. ಯಾಕೆಂದರೆ ಇವರು ಬರೆದ ಋತುಸಂಹಾರ, ಪಾರ್ವತೀಪರಿಣಯ, ಭಗವದ್ಗೀತೆ, ಶಿವಗೀತೆ, ರುಕ್ಮಿಣೀಹರಣ, ಮಾನವೀ ಮೀಮಾಂಸೆ ಮುಂತಾದವೆಲ್ಲ ಭಾಷಾಂತರಿತ ಗ್ರಂಥಗಳಾಗಿವೆ. ಕಾಲಕ್ಕೆ ತಕ್ಕಂತೆ ಕಾವ್ಯದ ಶೈಲಿಯು ಮಾರ್ಪಡುವದು ಸಹಜವಾದುದರಿಂದ ಶ್ರೀನರಹರಿರಾಯರು ಹಳೆಯ ಬಿಗುವಿನ ಅಕ್ಷರವೃತ್ತಗಳ ಶೈಲಿಯನ್ನು ಬಿಟ್ಟು ಹೊಸದೂ, ಸುಗಮವೂ ಆದ ಷಟ್ಪದಿಯ ಮಾರ್ಗವನ್ನು ಆರಿಸಿಕೊಂಡುದರಲ್ಲಿ ಆಶ್ಚರ್ಯವೇನಿದೆ?" (ಹೊಸಗನ್ನಡದ ಅರುಣೋದಯ-ಪು. ೩೪೬). ಅಂದರೆ ಕಾಲಕ್ಕೆ ತಕ್ಕಂತೆ ಬದಲಾವಣೆಗೆ ಒಳಗಾಗುವ ಕ್ರಿಯೆ ಸಹಜವಾದುದು. ಸಾಹಿತ್ಯವೂ ಜೀವಂತವಾಗಿರಬೇಕಾದರೆ ಇಂತಹ ಬದಲಾವಣೆಯ ಅಗತ್ಯತೆ ಇದೆ. ಅಲ್ಲದೆ ಸಾಹಿತ್ಯದ ಸ್ವರೂಪವು ಬದಲಾದಂತೆ ಸಾಮಾನ್ಯರೂ ಸಾಹಿತ್ಯಕ್ಕೆ ಹತ್ತಿರವಾಗುತ್ತಾರೆ. ಕುಮಾರವ್ಯಾಸನ ಕಾವ್ಯ ರಚನೆಯ ಧೋರಣೆಯನ್ನು ಇಲ್ಲಿ ನೆನೆಯಬೇಕು.

ಹೀಗೆ ಭಾರತೀಯ ಎಲ್ಲಾ ಭಾಷೆಗಳಂತೆ ಕನ್ನಡಕ್ಕೂ ಈ ಬದಲಾವಣೆಯ ಹೊಸ ಚಿಂತನೆ ಅಗತ್ಯವಾಗಿತ್ತು. ಏಕ ಮಾದರಿಯ ಕಾವ್ಯ ಶೈಲಿಯು ಜನರಿಗೆ ಅದರ ಬಗ್ಗೆ ಅನಾದರವನ್ನು

ಮೂಡಿಸಿತ್ತು. ಅಲ್ಲದೆ ೧೯ನೇ ಶತಮಾನದ ಆರಂಭದ ಕೆಲವು ದಶಕಗಳವರೆಗೂ ಸಾಹಿತ್ಯದ ಕೃಷಿ ತೀರ ನೀರಸವಾಗಿತ್ತು. ಇದು ಕೇವಲ ಕನ್ನಡ ಸಾಹಿತ್ಯ ಪರಿಸರಕ್ಕೆ ಮಾತ್ರ ಸೀಮಿತವಾಗಿರದೆ ಇಡೀ ಭಾರತೀಯ ಪರಿಸರದಲ್ಲಿ ಕಾಣಬಹುದು. ಇಂತಹ ಸಂದರ್ಭದಲ್ಲಿ ಕ್ರೈಸ್ತ ಮಿಷನರಿಗಳ ಧರ್ಮ ಪ್ರಚಾರ ಕಾರ್ಯ ಹಾಗೂ ಬ್ರಿಟಿಷರ ಆಡಳಿತ ವ್ಯವಸ್ಥೆಯಿಂದ ದೊರೆತ ಇಂಗ್ಲಿಷ್ ಶಿಕ್ಷಣ ಹಾಗೂ ಪಾಶ್ಚಾತ್ಯ ಸಾಹಿತ್ಯ ಪರಿಚಯದ ಜೊತೆಗೆ ಅನುವಾದಿತ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೊಸ ಪ್ರೇರಣೆಯನ್ನು ಹಾಗು ಹೊಸ ಮಾದರಿಗಳನ್ನು ನೀಡಿತು. ಇದರಿಂದ ಕನ್ನಡ ಸಾಹಿತ್ಯದ ಸ್ವರೂಪವು ಬದಲಾಯಿತು. ಸಾಹಿತ್ಯದ ವಸ್ತು, ಪ್ರಕಾರ, ಶೈಲಿ, ತಂತ್ರ, ಛಂದಸ್ಸು ಎಲ್ಲದರಲ್ಲೂ ಹೊಸ ಪ್ರಯೋಗಗಳು ಹಂತಹಂತವಾಗಿ ಬದಲಾವಣೆಗಳಾದವು. ಹೀಗೆ ೧೯ನೇ ಶತಮಾನದಲ್ಲಾದ ಈ ಬದಲಾವಣೆ ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲುಗಲ್ಲಾಗಿದೆ.

* * * * *

೬. ಅಧ್ಯಾಯ

# ರಂಗ ಪ್ರಯೋಗದ ಹಿನ್ನೆಲೆಯಾಗಿ ನಾಟಕ

ಭಾರತದಲ್ಲಿ ನಾಟಕವು ರಂಗಪ್ರಯೋಗದ ಹಿನ್ನೆಲೆಯಲ್ಲಿ ರೂಪಿತಗೊಂಡಂತೆ ಕಂಡು ಬಂದರೂ ಅದೊಂದು ಸಾಹಿತ್ಯ ಪ್ರಕಾರವೇ ಆಗಿದೆ. ಇದಕ್ಕೆ ಭಾರತೀಯ ಪರಿಸರದಲ್ಲಿ ತನ್ನದೇ ಆದ ಮಹತ್ವವಿದೆ. ಜನಪದ ರಂಗಭೂಮಿ, ವೃತ್ತಿರಂಗಭೂಮಿ, ಹಾಗೂ ಹವ್ಯಾಸಿ ರಂಗಭೂಮಿಯೆಂಬ ಮೂರು ನೆಲೆಯಲ್ಲಿ ನಾಟಕವನ್ನು ಮತ್ತು ಅದರ ಪರಂಪರೆಯನ್ನು ಗಮನಿಸಬಹುದು. ಯಕ್ಷಗಾನ, ಬಯಲಾಟದಂತಹ ನಾಟಕ ಪ್ರಕಾರಗಳು ಪ್ರಮುಖವಾದವು. ವೃತ್ತಿರಂಗಭೂಮಿಯ ಪ್ರವೇಶವು ಪಾಶ್ಚಾತ್ಯ ಸಾಹಿತ್ಯ ಹಾಗೂ ಪಾರ್ಸಿ ನಾಟಕ ಕಂಪನಿಗಳಂತಹವುಗಳ ಮೂಲಕ ಪ್ರವೇಶವನ್ನು ಪಡೆದುದು ಗಮನಾರ್ಹ. ಇವು ಭಾರತವನ್ನು ಪ್ರವೇಶಿದ ಸಂದರ್ಭ ಮತ್ತು ಇಲ್ಲಿಯ ಸಾಹಿತ್ಯ ಹಾಗು ರಂಗಭೂಮಿಯ ಮೇಲೆ ಉಂಟುಮಾಡಿದ ಪ್ರಭಾವಗಳನ್ನು ಕುರಿತ ಅಧ್ಯಯನ ಮುಖ್ಯವಾದುದು.

ಒಂದು ಹೊಸ ಚಿಂತನೆಯು ಸ್ಥಳೀಯವಾದ ಆಂತರಿಕ ವ್ಯವಸ್ಥೆಯ ಒಳಗೆ ರೂಪು ತಳೆದರೆ ಕೆಲವೊಮ್ಮೆ ಹೊರಗಿನ ಗಾಳಿಯಿಂದಾಗಿ ಮೈತಳೆಯಬಹುದು. ಇದಕ್ಕೆ ಕನ್ನಡ ನಾಟಕಗಳು ಹೊರತಾಗಿಲ್ಲ. ಭಾರತೀಯ ಭಾಷಾ ಸಾಹಿತ್ಯದಿಂದ ನಾಟಕವು ಪ್ರೇರಣೆ, ಪ್ರಭಾವಕ್ಕೆ ಒಳಗಾಗಿದ್ದಲ್ಲದೆ, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ಸಾಹಿತ್ಯ. ವೃತ್ತಿ ರಂಗಭೂಮಿಯ ಪ್ರಭಾವಗಳಿಂದ ತನ್ನ ಸ್ವರೂಪದಲ್ಲಿ ಹೊಸತನವನ್ನು ಮೈಗೂಡಿಸಿಕೊಂಡು ಅನೇಕ ಗೊಂದಲಗಳ ನಡುವೆಯೇ ನಾಟಕ ಪ್ರಕಾರವು ಆವಿರ್ಭವಿಸಿತು. ನಾಟಕವು ತನ್ನ ಅಸ್ಮಿತೆಯನ್ನು ಸ್ಪಷ್ಟೀಕರಿಸಿ ಹೊಸಗನ್ನಡ ಸಾಹಿತ್ಯದ ಧೋರಣೆಗಳನ್ನು ತನ್ನೊಳಗೆ ಬರಮಾಡಿಕೊಂಡು ಸ್ಪಷ್ಟ ರೂಪವನ್ನು ಪಡೆದು ಕೊಂಡಿದ್ದು ೨೦ನೇ ಶತಮಾನದ ಆರಂಭದಲ್ಲಿ.

ನಾಟಕವೆಂಬುದೊಂದು ಕಲೆ, ಜಗತ್ತಿನ ಪರಂಪರೆಯಲ್ಲಿ ನಾಟಕಕ್ಕೆ ತನ್ನದೇ ಆದ ಮಹತ್ವವಿದೆ. ಇಡಿ ಜಗತ್ತಿನ ನಾಟಕಗಳ ಸೃಷ್ಟಿಯ ಹಿನ್ನೆಲೆ ಧಾರ್ಮಿಕ ಚೌಕಟ್ಟಿಗೆ ಒಳಪಟ್ಟಿರುವುದು ಗಮನಾರ್ಹ. ದೇವತೆಗಳ ಪ್ರೀತ್ಯರ್ಥವಾಗಿ ಹಾಗೂ ಭೂತಬೇತಾಳಗಳನ್ನು ತೃಪ್ತಿಪಡಿಸುವುದಕ್ಕಾಗಿ ನಾಟಕ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದರು ಎನ್ನಲಾಗಿದೆ.

ನಾಟಕದ ಬೆಳವಣಿಗೆಯ ಬಗ್ಗೆ "ನಾಟಕಗಳು ಪ್ರಾಚೀನ ಸಾಹಿತ್ಯ ವೃಕ್ಷದ ಕೊನೆಯ ಫಲಗಳು. ಈಗಾಗಲೇ ಸ್ಪಷ್ಟರೂಪು ತಾಳಿ ಸದೃಢವಾಗಿದ್ದ ನೃತ್ಯ, ಸಂಗೀತ, ಪುರಾಣ, ಮಹಾಕಾವ್ಯ ಎಲ್ಲವನ್ನು ಬಳಸಿಕೊಂಡು ನಾಟಕ ಸಂಕೀರ್ಣವಾದ ಕಲೆಯಾಗಿ ಬೆಳೆಯಿತು. ಒಟ್ಟಾರೆ ಹೇಳುವುದಾದರೆ

ಯಾವುದೇ ದೇಶದ ರಂಗಭೂಮಿ ಅಲ್ಲಿನ ಧಾರ್ಮಿಕ ಪರಂಪರೆಯ ಅಂಗವಾದಿ ಹುಟ್ಟಿ, ಸಾಮಾಜಿಕವಾಗಿ ಬೆಳೆದಿವೆಯೆಂಬುದು ಸ್ಪಷ್ಟ ವಿಚಾರ. ನೃತ್ಯ, ಸಂಗೀತ, ಶಿಲ್ಪ ಮುಂತಾದ ಸಾಹಿತ್ಯೇತರ ಕಲೆಗಳೂ ನಾಟಕದ ಪ್ರಮುಖವಾದ ಅಂಗಗಳು." (ಆಧುನಿಕ ಕನ್ನಡ ನಾಟಕ–ಪು. ೪) ಇದಕ್ಕೆ ಪೂರಕವಾಗಿ ನೋಡುವುದಾದರೆ ಗ್ರೀಕ್ ಸಂಸ್ಕೃತಿಯಲ್ಲಿ ಕಾಣುವ ರುದ್ರ ನಾಟಕಗಳು ಹುಟ್ಟಿದ್ದು, ಅಲ್ಲಿನ ಧಾರ್ಮಿಕ ಆಚರಣೆಗಳು, ಕೃಷಿಯ ಉತ್ಸವ, ನಾಡಿನ ಒಳಿತಿಗಾಗಿ ಮಡಿದ ವೀರರ ಸಮಾಧಿ ಪೂಜೆಗಳಲ್ಲಿ ಗ್ರೀಕ್ ನಾಟಕದ ಮೂಲವಿರುವುದು ಗಮನಾರ್ಹ.

ಇನ್ನು ಇಂಗ್ಲಿಷ್‌ನ ಆರಂಭದ (೧೪೫೦ರ ವರೆಗಿನ) ನಾಟಕಗಳ ರಚನೆಯ ಹಿನ್ನೆಲೆ ಕ್ರೈಸ್ತ ಧರ್ಮ ಪ್ರಚಾರ, ಕ್ರೈಸ್ತ ಮತೀಯ ಆಚರಣೆಗಳು ಮತ್ತು ಚರ್ಚ್‌ನ ಪ್ರಭಾವ, ಇದರ ಜೊತೆಗೆ ಬೈಬಲ್ಲಿನ ಕಥೆಗಳನ್ನು ನಾಟಕ ರೂಪದಲ್ಲಿ ಜನರಿಗೆ ತಲುಪಿಸುವುದಾಗಿತ್ತು. ಅಂತೆಯೇ ಫ್ರೆಂಚ್, ಚೀನಾ, ಜಪಾನಿ ಮುಂತಾದ ರಾಷ್ಟ್ರಗಳ ನಾಟಕ ರಚನೆಯ ಹಿನ್ನೆಲೆಯೂ ಇವೆ ಆಗಿದೆ.

ಭಾರತೀಯ ಸಾಹಿತ್ಯ ಪ್ರಕಾರಗಳಲ್ಲಿ ನಾಟಕವೂ ಒಂದು. ಸಂಸ್ಕೃತದಲ್ಲಿ ಸಾಕಷ್ಟು ನಾಟಕಗಳು ರಚನೆಯಾಗಿದ್ದವು. ಸಂಸ್ಕೃತ ನಾಟಕಗಳು ಇದಕ್ಕೆ ಹೊರತಾಗಿಲ್ಲ. ಋಗ್ವೇದದ ಸಂವಾದ ಸೂಕ್ತಗಳೇ ಸಂಸ್ಕೃತ ನಾಟಕಗಳ ಮೂಲ ಪ್ರೇರಣೇ. ಇದಲ್ಲದೆ ಪುರಾಣದ ಕೃತಿಗಳೂ ಇದಕ್ಕೆ ಕಾರಣವಾಗಿವೆ. ಈ ಲಕ್ಷಣಗಳೂ ಕನ್ನಡದ ಆರಂಭದ ನಾಟಕದ ಮಾದರಿಗಳಲ್ಲಿ ಕಾಣಬಹುದಾಗಿದೆ. ನಾಟಕ ಸೃಷ್ಟಿಯ ಹಿನ್ನೆಲೆ ಕುರಿತು "ಮನುಷ್ಯನು ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಅನಾದಿ ಕಾಲದಿಂದಲೂ ಬಳಸಿ ಕೊಂಡಿರುವ ಸಾಧನಗಳಲ್ಲಿ ಕುಣಿತ ಮತ್ತು ಹಾಡು ನಾಟಕದ ಉಗಮಕ್ಕೆ ಪ್ರೇರಣೆಕೊಟ್ಟ ಅಂಶಗಳು, ಕುಣಿತವು ಕೇವಲ ಮೂಕಾಭಿನಯದಿಂದ ವಾದ್ಯಕ್ಕನುಸಾರವಾಗಿರಬಹುದು; ಹಾಡುಗಳನ್ನು ಒಳಗೊಂಡಿರಬಹುದು; ಕುಣಿತ, ಹಾಡುಗಳ ನಡು ನಡುವೆ ಗದ್ಯ ಸಂಭಾಷಣೆಯೂ ಇರಬಹುದು. ನಾಟಕದ ಅನಿವಾರ್ಯ ಅಂಶಗಳಾದ ವೇಷ, ಭೂಷಣ, ಸಂಗೀತ, ನೃತ್ಯ, ಸಂಭಾಷಣೆ, ವಸ್ತು, ಪಾತ್ರಗಳು ಹಿಮ್ಮೇಳ ಮುಂತಾದವನ್ನು ಸ್ಥೂಲವಾಗಿಯಾದರೂ ಒಳಗೊಂಡಿರುವ ಹಲವು ಜನಪದ ಕಲೆಗಳು ನಮ್ಮ ನಾಡಿನಲ್ಲಿ ಉಳಿದುಬಂದಿದೆ". (ಆಧುನಿಕ ಕನ್ನಡ ನಾಟಕ–ಪು. ೭) ಇವು ಮುಂದೆ ನಾಟಕವು ಒಂದು ರೂಪವನ್ನು ಪಡೆಯಲು ಪ್ರೇರಣೆಯಾಗಿರಬಹುದು. ಕನ್ನಡನಾಡಿನ ಪರಿಸರದಲ್ಲಿ ಬಯಲಾಟಗಳು, ಪೌರಾಣಿಕ ನಾಟಕ ಪ್ರದರ್ಶನ, ಯಕ್ಷಗಾನ, ಸಣ್ಣಾಟ, ದೊಡ್ಡಾಟಗಳು ಮೌಖಿಕ ಪರಂಪರೆಯ ಹಿನ್ನೆಲೆಯಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ನಾಟಕವು ಒಂದು ಶಿಷ್ಟ ಸಾಹಿತ್ಯ ಪರಂಪರೆಗೆ ಒಳಗೊಂಡಿದ್ದು ಗಮನಾರ್ಹ ಸಂಗತಿ. ವಿದ್ವಾಂಸರು ರನ್ನನ ಗದಾಯುದ್ಧ ಮಹಾಕಾವ್ಯದ ರಚನಾ ಶೈಲಿಯಿಂದಲೇ ಕನ್ನಡ ನಾಟಕಗಳ ರಚನೆಯನ್ನು ಗುರುತಿಸುವ ಪ್ರಯತ್ನ ನಡೆಸಿದ್ದಾರೆ, ಆದರೆ ನಾಟಕದ ಲಕ್ಷಣವು ನಿರ್ದಿಷ್ಟವಾಗಿ ಕಾಣಿಸಿಕೊಳ್ಳುವುದು 'ಮಿತ್ರಾವಿಂದ ಗೋವಿಂದ' ನಾಟಕದಿಂದ. ಇದರ ಕಾಲ ೧೭ನೆಯ ಶತಮಾನ ಸಂಸ್ಕೃತದ 'ರತ್ನಾವಳಿ' ನಾಟಕವನ್ನು ಅನುವಾದಿಸಿದ ಕೃತಿ ಇದಾಗಿದೆ. ಇದರ ಬಗ್ಗೆ ಎಲ್ಲೂ ನಾಟಕಕಾರ ಉಲ್ಲೇಖಿಸಿಲ್ಲವಾದರೂ, ಜೊತೆಗೆ ಅಲ್ಲಲ್ಲಿ ರೂಪಾಂತರದ ಮಾದರಿಯನ್ನು ಬಳಸಿದನಾದರೂ; ಇದರ ಕಥಾಹಂದರ ರತ್ನಾವಳಿ ನಾಟಕವೇ ಆಗಿವೆ ಎಂಬುದು ವಿದ್ವಾಂಸರ ನಿಲುವು.

ಇದಾದ ಸುಮಾರು ೧೫೦ ವರ್ಷಗಳ ನಂತರವೇ ಕನ್ನಡದ ಎರಡನೆಯ ನಾಟಕ ರಚನೆಯಾದದ್ದು(ಇದುವರೆಗೆ ದೊರೆತಿರುವ ಆಧಾರಗಳಿಂದ). ೧೮೬೯ರಲ್ಲಿ ಉತ್ತರ ಕರ್ನಾಟಕದ ಚುರಮುರಿ ಶೇಷಗಿರಿರಾಯರಿಂದ ರಚಿತವಾದ 'ಶಾಕುಂತಲ' ನಾಟಕ ಮತ್ತು ಅದೇ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಬಸಪ್ಪಶಾಸ್ತ್ರಿಗಳಿಂದ ರಚನೆಯಾದ 'ಶಾಕುಂತಲ' ನಾಟಕ. ಈ ನಾಟಕಗಳು ಕೂಡ ಸಂಸ್ಕೃತ ನಾಟಕದ ಅನುವಾದ ರೂಪಗಳೇ ಆಗಿವೆ.

## ಪ್ರಕಾರ

ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ನಾಟಕ ಪ್ರಕಾರವೂ ಒಂದು ಚಿಂತನೆಯ ಭಾಗವಾಗಿದೆ. ಹೊಸ ಚಿಂತನೆಗಳು ಪ್ರಕಟಗೊಳ್ಳಲು ಸಿಕ್ಕಂತಹ ಅನೇಕ ಮಾರ್ಗಗಳಲ್ಲಿ ನಾಟಕವು ಒಂದು. ಕನ್ನಡದ ಶಿಷ್ಟ ಸಾಹಿತ್ಯ ಸಂದರ್ಭದಲ್ಲಿ ನಾಟಕ ಪ್ರಕಾರಕ್ಕೆ ಅಷ್ಟಾಗಿ ಪ್ರಚಾರ ದೊರೆಯಲಿಲ್ಲ. ಸಂಸ್ಕೃತದಲ್ಲಿ ನಾಟಕಗಳು ಇದ್ದರೂ ಅನುವಾದಗೊಂಡಿರಲಿಲ್ಲ. ಪಾಶ್ಚಾತ್ಯ ಪ್ರೇರಣೆಯ ಮೂಲಕ ಈ ಪ್ರಕಾರವು ಹೊಸ ಹೊಸ ಪ್ರಯೋಗಗಳಿಗೆ ಸಾಕ್ಷಿಯಾಯಿತು. ಪಾಶ್ಚಾತ್ಯ ವಿಚಾರಗಳ ಜೊತೆಗೆ ಸ್ಥಳೀಯವಾಗಿ ಇದ್ದಂತಹ ವ್ಯವಸ್ಥೆಗಳು ಅನುಸಂಧಾನಗೊಳ್ಳಲು ನಾಟಕ ಪ್ರಕಾರವು ಒಂದು ಉತ್ತಮ ವೇದಿಕೆಯಾಯಿತು.

ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ನಾಟಕ ರಚನೆಯಾದದ್ದು ವೃತ್ತಿಪರ ರಂಗಭೂಮಿಗಳು ಕನ್ನಡ ನಾಡಿನ ಪರಿಸರದ ಮೇಲೆ ಉಂಟು ಮಾಡಿದ ಪ್ರಭಾವದಿಂದಾಗಿ. ಪಾರ್ಸಿ ಹಾಗು ಮರಾಠಿ ವೃತ್ತಿಪರ ರಂಗಭೂಮಿಗಳು ಇಲ್ಲಿನ ಜನರ ಚಿತ್ತಾಕರ್ಷಣೆಯನ್ನು ಮಾಡಿದ್ದವು. ಭಾರತದಲ್ಲಿ ಮೊದಲು ರಂಗಭೂಮಿ ಬೆಳಕಿಗೆ ಬಂದದ್ದು ಬಂಗಾಳದಲ್ಲಿ. ಇದಾದ ನಂತರದಲ್ಲಿ ಮರಾಠಿ, ಹಿಂದಿ, ತಮಿಳು, ತೆಲುಗು ನಂತರಲ್ಲಿ ಬಹಳ ತಡವಾಗಿ ಕನ್ನಡವನ್ನು ಪ್ರವೇಶಿಸಿತು. ಇಲ್ಲಿನ ಬಯಲಾಟದಂತಹ ಸ್ಥಳೀಯ ದೇಸಿ ಕಲೆಗಳಿದ್ದರೂ ಹೊಸ ಮಾದರಿಯ ನಾಟಕಗಳಿಗೆ ಕನ್ನಡಿಗರು ಹೆಚ್ಚಾಗಿ ಆಕರ್ಷಿತರಾಗಿದ್ದರು. ಮರಾಠಿ ಹಾಗೂ ಪಾರ್ಸಿ ನಾಟಕಗಳ ಪ್ರಭಾವ ಹೇಗಿತ್ತೆಂದರೆ ಉತ್ತರ ಕರ್ನಾಟಕದಲ್ಲಿ ಪಾರ್ಸಿ ಹಾಗೂ ಮರಾಠಿ ವೃತ್ತಿಪರ ನಾಟಕಗಳ ಪ್ರಭಾವವನ್ನು ಕುರಿತು "ಎಲ್ಲಿ ನೋಡಲು ಮರಾಠಿಯರ ನಾಟಕಮಯಂ ತಾನಾಯ್ತು ಕರ್ನಾಟಕಂ" ಎಂದು ಶಾಂತ ಕವಿಗಳು ತಮ್ಮ ದುಃಖ ತೋಡಿಕೊಂಡರು. ಇದಲ್ಲದೆ ಅನೇಕ ಕನ್ನಡಿಗರು 'ಇಂದ್ರ ಸಭಾ', 'ಗುಲೇಬಕಾವಲಿ'ಯಂಥ ಜನಪ್ರಿಯ ನಾಟಕಗಳನ್ನು ಹಿಂದೂಸ್ಥಾನಿ ಭಾಷೆಯಲ್ಲಿಯೇ ಅಭಿನಯಿಸಲು ಆರಂಭಿಸಿದ್ದು ಕನ್ನಡಾಭಿಮಾನಿಗಳಿಗೆ ಆಘಾತವನ್ನುಂಟು ಮಾಡಿತು. ಇದರ ಉತ್ಕರ್ಷತೆಯನ್ನು ಕುರಿತು "ಸಾಂಗ್ಲಿ ನಾಟಕ ಮಂಡಳಿ ಮತ್ತು ಪಾರ್ಸಿ ನಾಟಕ ಮಂಡಳಿಗಳ ಮೋಹಕ ಪ್ರದರ್ಶನಗಳನ್ನು ವೀಕ್ಷಿಸಿ ನಮ್ಮ ಜನತೆ ಬಹು ಬೇಗನೆ ಮಾರುಹೋದರು. ಕನ್ನಡಿಗರ ಸಿರಿ ಸಂಪತ್ತು ಸೂರೆ ಹೋಗುತ್ತಿತ್ತು. ಅವರ ಮನದಲ್ಲಿ, ನಾಲಿಗೆಯಲ್ಲಿ ಮರಾಠಿ, ಹಿಂದೀ ಭಾಷೆಗಳ ಹಾಡುಗಳೂ, ಮಟ್ಟುಗಳೂ ನಿರಾತಂಕವಾಗಿ ನಲಿಯತೊಡಗಿದವು. ನಿತ್ಯ ಜೀವನದ ವಸ್ತ್ರ ಭೂಷಣಗಳೂ

ಮಾರ್ಪಟ್ಟವು. ಎಲ್ಲಕ್ಕೂ ಮಿಗಿಲಾಗಿ ಕನ್ನಡ ಸೀಮೆಯ ಮೇಲೆ ಸಾಂಸ್ಕೃತಿಕ ದಾಳಿಯೊಂದನ್ನು ನಡೆಸಲು ಅವಕಾಶ ಮಾಡಿಕೊಟ್ಟಿತು" ಎಂದಿದ್ದಾರೆ. ಕನ್ನಡದ ಮೇಲೆ ಮರಾಠಿ ನಾಟಕಗಳು ಹೇಗೆ ದಬ್ಬಾಳಿಕೆಯನ್ನು ಮಾಡುತ್ತಿತ್ತು ಎಂಬುದನ್ನು ಶಾಂತಕವಿಗಳು ೧೯೧೦ರಲ್ಲಿ ಬರೆದ ಪದ್ಯದಲ್ಲಿ ವಿವರಿಸಿದ್ದನ್ನು ಬೇಂದ್ರೆಯವರು 'ವಾಗ್ಭೂಷಣ'ದಲ್ಲಿ ಉಲ್ಲೇಖಿಸಿದ್ದಾರೆ.

"ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೀರ್ತಿ;

ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕದರ್ಥಿ;

ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ನಟರ ಮೂರ್ತಿಗಳ ಸಂಚಾರವು॥

ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕದಾಟ;

ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕಕೂಟ;

ಎಲ್ಲಿ ನೋಡಲು ಮಹಾರಾಷ್ಟ್ರ ಭಾಷಾಮಯಂ ತಾನಾಯ್ತು ಕರ್ನಾಟಕಂ॥

ಹೀಗೆ ಸರ್ವವೂ ಮಹಾರಾಷ್ಟ್ರಮಯವಾಗಿರಲು ಕನ್ನಡದ ಹಸಿರು ಕಟ್ಟುವುದು ಸಹಜವೇ.

'ಎಲ್ಲಿ ನೋಡಲು ಕನ್ನಡದ ಭಾಷೆಯಟ್ಟಿಯದ।

ರಲ್ಲಿಲ್ಲ ಮೃದು ಶಬ್ದವಿಲ್ಲ, ಭಾಷಾ ಸರಣಿ।

ಯಿಲ್ಲವೈ, ಸ್ವಾರಸ್ಯವಿಲ್ಲ, ನಾಟಕವಿಲ್ಲ, ನಟನಟಿಗಳಿಲ್ಲವಿನ್ನು;।

ಇಲ್ಲವವು ಮುಂದಾಗುವಾಶೆ ಕೂಡಾ ಇಲ್ಲ॥"(ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ –ಪು. ೬೮)

ಎಂದು ಶಾಂತ ಕವಿಗಳಿಗೆ ಅನ್ನಿಸಿದ ಬಳಿಕ ಸಾಮಾನ್ಯರಿಗೂ ಆ ರೀತಿ ಅನ್ನಿಸಿದರೆ ಆಶ್ಚರ್ಯವೇನಿಲ್ಲ. ಅಂದರೆ ಮಹಾರಾಷ್ಟ್ರದಲ್ಲಿ ಇಂಗ್ಲಿಷ್ ಶಿಕ್ಷಣ ಹೊಸ ಆಲೋಚನೆಗಳನ್ನು ಪಸರಿಸತೊಡಗಿತ್ತು. ಅಲ್ಲದೆ ಕರ್ನಾಟಕ ಪ್ರಾಂತ್ಯಗಳಲ್ಲೂ ಕನ್ನಡ ಭಾಷೆಗೆ ಬದಲಾಗಿ ಮರಾಠಿ ಭಾಷೆಯ ಪ್ರಾಬಲ್ಯ ಹಾಗೂ ಶಿಕ್ಷಣ ನೀತಿಗಳು ಕನ್ನಡ ಸಾಹಿತ್ಯ ಸೊರಗಲು ಕಾರಣವಾಗಿತ್ತು. ಇದರ ಜೊತೆಗೆ ಆಗಲೇ ತಿಳಿಸಿದಂತೆ ಪಾರ್ಸಿ ಹಾಗೂ ಮರಾಠಿ ನಾಟಕಗಳ ಪ್ರಭಾವ ಹೆಚ್ಚಾಗಿತ್ತು. ಸಂಸ್ಕೃತದ ಪ್ರಭಾವ ಮಾತ್ರ ಇದ್ದುದರಿಂದ ಕನ್ನಡ ಸಾಹಿತ್ಯದ ಬಗೆಗೆ ಆಂತರಿಕವಾಗಿ ಇದ್ದಂತಹ ಅಸಮಾಧಾನವು ಇದು ಅವಸಾನದ ಹಾದಿಯಲ್ಲಿ ಸಾಗತೊಡಗಿತ್ತು. ಇಂತಹ ಸಂದರ್ಭದಲ್ಲಿ ಚುರುಮುರಿ ಶೇಷಗಿರಿರಾಯರಿಗೆ ಕನ್ನಡ ಭಾಷೆಯು ತನ್ನ ಸ್ವಾಸ್ಥ್ಯವನ್ನು ಕಳೆದುಗೊಳ್ಳಲಾರಂಭಿಸಿದೆ ಎಂದೆನಿಸಿತು. ಹಾಗಾಗಿ ಭಾಷೆಯ ಪುನರುಜ್ಜೀವನಕ್ಕೆ ತೊಡಗಿಸಿಕೊಂಡರು. ಅಲ್ಲದೆ ಕನ್ನಡ ಭಾಷೆಯಲ್ಲಿ ನಾಟಕಗಳನ್ನು ರಚಿಸಿದರೆ ಅದರ ಪುನರುಜ್ಜೀವನ ಸಾಧ್ಯವೆಂದು ಆಲೋಚಿಸಿ ಮರಾಠಿ ನಾಟಕಗಳಿಂದ ಪ್ರಭಾವಿತರಾದವರಲ್ಲಿ ಇವರೇ ಮೊದಲಿಗರು.

ಇಂತಹ ವೃತ್ತಿಪರ ನಾಟಕಗಳ ಪ್ರಭಾವ ಮೈಸೂರು ಪ್ರಾಂತ್ಯಗಳಲ್ಲೂ ಬೀರ ತೊಡಗಿದವು. ಇದರಿಂದ ಪ್ರೇರಿತರಾದ ಆಗಿನ ಒಡೆಯರ್‌ರವರು ತಮ್ಮಲ್ಲಿದ್ದ ವಿದ್ವಾಂಸರಿಗೆ ನಾಟಕ ರಚನೆಯ ಕಾರ್ಯಕ್ಕೆ ಪ್ರೋತ್ಸಾಹ ನೀಡಿದರು. ಅಲ್ಲದೆ ನಾಟಕ ಮಂಡಳಿಯನ್ನು ಸ್ಥಾಪಿಸಿದರು. ಇಂತಹ ಸಂದರ್ಭದಲ್ಲಿ ಮೊದಲಿಗೆ ಆಸ್ಥಾನ ಪಂಡಿತರಾಗಿದ್ದ ಬಸಪ್ಪಶಾಸ್ತ್ರಿಗಳು 'ಶಾಕುಂತಲ" ನಾಟಕವನ್ನು ಅನುವಾದಿಸಲು ಆರಂಭಿಸಿದರು. ಚುರಮುರಿ ಶೇಷಗಿರಿರಾಯರು ಹಾಗೂ ಬಸವಪ್ಪಶಾಸ್ತ್ರಿಗಳ ನಾಟಕ ರಚನೆಯ ಕಾಲ ಸುಮಾರು ೧೨ ವರ್ಷಗಳ ಅಂತವಿದ್ದರೂ ಇವರ ಆಯ್ಕೆಯ ಕೃತಿ ಕಾಳಿದಾಸನ ಶಾಕುಂತಲ ನಾಟಕವೇ ಆಗಿದೆ. ಇದರ ನಂತರದಲ್ಲಿ ಬಸವಪ್ಪ ಶಾಸ್ತ್ರಿಗಳ ಉತ್ತರ ರಾಮಚರಿತ, ವಿಕ್ರಮೋರ್ವಶೀಯ, ಕರ್ಣಾಟಕ ರತ್ನಾವಳಿ ನಾಟಕಗಳನ್ನು ಅನುವಾದಿಸಿದರು. ಹೀಗೆ ಪೌರಾಣಿಕ ನಾಟಕಗಳ ಅನುವಾದದ ಮೂಲಕ ನಾಟಕ ಪ್ರಕಾರವು ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು.

ಆದರೆ ಅನ್ಯ ಭಾಷೆಗಳ ನಾಟಕಗಳು ಸಂಸ್ಕೃತ ನಾಟಕಗಳಿಗಿಂತ ಭಿನ್ನವಾಗಿದ್ದು, ಅದರಿಂದ ಆಕರ್ಷಿತರಾದ ಜನರಲ್ಲಿ ಕನ್ನಡದ ಬಗೆಗಿನ ಆಸಕ್ತಿಯನ್ನು ಹಾಗೇ ನೆಲೆಯೂರುವಂತೆ ಮಾಡಲು ಹೊಸ ಮಾದರಿಯ ನಾಟಕಗಳ ರಚನೆ ಅಗತ್ಯವಾಗಿತ್ತು. ಆ ಸಂದರ್ಭದಲ್ಲಿ ಇಂಗ್ಲಿಷ್ ನಾಟಕಗಳ ಅನುವಾದ ಪ್ರಕ್ರಿಯೆ ಆರಂಭವಾಯಿತು. ಇವು ಹೆಚ್ಚಿನವು ರೂಪಾಂತರವೇ ಆಗಿವೆ. ಇದಕ್ಕೆ ಕಾರಣ ಭಿನ್ನವಾದ ಸಂಸ್ಕೃತಿ. ಇಂಗ್ಲಿಷ್ ನಾಟಕಗಳ ಅನುವಾದದ ವಿಧಾನವನ್ನು ಕನ್ನಡದ ನಾಟಕಕಾರರು ಅನುಸರಿಸಿದ ವಿಧಾನವನ್ನು ಡಿ.ವಿ.ಗುಂಡಪ್ಪನವರು "ಇಂಗ್ಲಿಷ್ ಹೆಸರುಗಳಿಗೆ ಪ್ರತಿಯಾಗಿ ಸಂಸ್ಕೃತದ ಅಥವಾ ಕನ್ನಡದ ಹೆಸರುಗಳನ್ನಿಡುವುದು. ಕಥಾ ಸನ್ನಿವೇಶಗಳನ್ನು ಕೊಂಚ ಕೊಂಚ ಮಾರ್ಪಡಿಸಿ ಅದು ನಮ್ಮ ದೇಶದ ವಸ್ತುವೆಂಬಂತೆ ತೋರಿಸುವುದು. ಸಂಭಾಷಣೆಯಲ್ಲಿ ವಚನವನ್ನೂ, ನಡು ನಡುವೆ ಪದ್ಯಗಳನ್ನೂ, ಹಾಡುಗಳನ್ನೂ ಸೇರಿಸುವುದು. ಒಟ್ಟಿನಲ್ಲಿ ನಾಟಕವನ್ನು ನಮ್ಮ ಜನ ತಮ್ಮದೇ ಎಂದು ಭಾವಿಸಿಕೊಳ್ಳುವಂತೆ ವೇಷ ಭಾಷೆಗಳನ್ನು ಅಳವಡಿಸುವುದು" ಎಂದಿದ್ದಾರೆ.

ಪುರಾಣಗಳ ಅಲೌಕಿಕ ವಿಚಾರಗಳಿಗಿದ್ದ ಮಹತ್ವ ವಾಸ್ತವ ವಿಚಾರಗಳಿಗೆ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಇಂಗ್ಲಿಷ್ ಬಲ್ಲವರಾಗಿದ್ದ ಗುಂಡೋ ಕೃಷ್ಣರವರು ಇಂಗ್ಲಿಷ್ ನಾಟಕಗಳನ್ನು ಕನ್ನಡೀಕರಿಸುವ ಕರ್ಮ ಕೈಗೊಂಡಿದ್ದು ಗಮನಾರ್ಹ. ಈ ಅನುವಾದವು ಮುಂದಿನ ಅನುವಾದ ಕೃತಿಗಳಿಗೆ ಪ್ರೇರಣೆಯಾದಂತೆ ಕಾಣಿಸುತ್ತದೆ.

ಶಾಂತಕವಿಗಳು ಸಾಮಾನ್ಯ ಜನತೆಗಾಗಿಯೇ ತನ್ನ ಕಾವ್ಯ ಹಾಗೂ ನಾಟಕಗಳ ರಚನೆಯಾಗಬೇಕೆಂದು ಬಯಸಿದವರು. ಅಂದಿನ ಹಾಗು ಇಂದಿನ ಪಂಡಿತರಿಂದ ಮತ್ತು ಇಂಗ್ಲಿಷ್ ಶಿಕ್ಷಣ ಪಡೆದ ವಿದ್ಯಾವಂತರಿಂದ ಕನ್ನಡ ಸೇವೆಯಾಗುತ್ತಿಲ್ಲವೆಂಬುದರ ಬಗ್ಗೆ ಅವರಿಗೆ ಅಸಮಾಧಾನವಿತ್ತು. "ಎಲ್ಲಿರುವುದಭಿಮಾನ, ಕನ್ನಡಿಗರೇ ಪೇಳಿ ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ ಗುರು ಪರಿಶ್ರಮದಿನಾಂಗ್ಲೇಯ ಭಾಷೆಯ ಕಲಿತು ಧರಿಸಿ ಪದವಿಗಳನುಪಜೀವಿಸುವಿರೆ ಹೊರತು ತದ್ಭಾಷೆಯುದ್ಗ್ರಂಥಗಳ ಕನ್ನಡದಿ ಪರಿವರ್ತನಂಗೊಳಿಸಲಿಲ್ಲವಲ್ಲಾ" ಎಂದು ಟೀಕಿಸಿದ್ದಾರೆ.

(ಹೊಸಗನ್ನಡದ ಅರುಣೋದಯ–ಪು. ೩೧೬) ಏಕೆಂದರೆ ಇಂಗ್ಲಿಷ್ ಶಿಕ್ಷಣ ಪಡೆದವರಿಗೆ ಸಾಹಿತ್ಯದ ಹೊಸ ಮಾದರಿಗಳು, ಅನ್ಯ ದೇಶಗಳ ಆಲೋಚನೆಗಳು ಲಭ್ಯವಾಗಿದ್ದವು. ಇಂತಹ ವಿದ್ಯಾವಂತರ ಪ್ರಯತ್ನದಿಂದ ಮಾತ್ರ ಸಾಹಿತ್ಯ ಹಾಗು ಜನರಲ್ಲಿ ಹೊಸ ಆಲೋಚನೆಗಳನ್ನು ಮೂಡಿಸಲು ಸಾಧ್ಯ.

ಇದಲ್ಲದೆ ನಾಟಕ ರಚನೆಯ ಉದ್ದೇಶ ಇತರರೂ ಕನ್ನಡ ಸಾಹಿತ್ಯದ ರಚನೆಗೆ ತೊಡಗಲು ಮಾದರಿಯಾಗಬೇಕೆಂಬುದು ಶಾಂತಕವಿಗಳ ಧೋರಣೆಯಾಗಿತ್ತು. ಅವರ 'ಸೀತಾರಣ್ಯ ಪ್ರವೇಶ' ನಾಟಕದ ಪ್ರಸ್ತಾವನೆಯಲ್ಲಿ "......ಎಷ್ಟು ಮಾಡಿದರೂ ಅವರು ಪಂಡಿತರೆ ಪಂಡಿತರು. ಅವರಂತೆ ನಮ್ಮಿಂದ ಹ್ಯಾಗೆ ಆದೀತು? ಅವರ ಮುಗುಳು ನಗೆಯ ಒಂದೆರಡು ಶಬ್ದಗಳಿಂದ ಆದಷ್ಟು ಕಾರ್ಯವು ನಮ್ಮಂಥವರ ಇಡೀ ಜೀವಿತದಿಂದಲೂ ಆಗಲಿಕ್ಕಿಲ್ಲ. ಆದರೆ ಅಂಥ ಅರಸು ಪಂಡಿತರಿಗೆ ಅಣಕಿಸಿ ಅವರಲ್ಲಿ ಗ್ರಂಥ ರಚನೆಯ ಈರ್ಷ್ಯೆಯನ್ನು ಉತ್ಪನ್ನ ಮಾಡುವ ವಿಚಾರದಿಂದ, ಕನ್ನಡ ಭಾಷೆಯನ್ನು ಊರ್ಜಿತಗೊಳಿಸುವ ಅಭಿಲಾಷೆಯವರಾದ ನಾವು ಕನ್ನಡ ಭಾಷೆಯಲ್ಲಿ ೬೩ ಗ್ರಂಥಗಳನ್ನು ರಚಿಸಿದ್ದೇವೆ"(ಹೊಸಗನ್ನಡದ ಅರುಣೋದಯ–ಪು. ೩೧೬) ಎಂದಿದ್ದಾರೆ.

ಶಾಂತಕವಿಗಳು ಕಟ್ಟ ಕನ್ನಡಾಭಿಮಾನಿಗಳು. ಇತರೆ ಭಾಷೆಗಳಿಗೆ ಹೋಲಿಸಿದರೆ ಭಾಷೆ, ಸಾಹಿತ್ಯದ ದೃಷ್ಟಿಯಿಂದ ಕನ್ನಡವು ಶ್ರೀಮಂತವಾಗಿಲ್ಲ ಎಂಬ ಚಿಂತೆ ಅವರನ್ನು ಕಾಡಿದ್ದಿದೆ. ಇಂಗ್ಲಿಷ್ ಶಿಕ್ಷಣದಿಂದ ಕನ್ನಡಿಗರು ವಿದ್ಯಾವಂತರಾಗುತ್ತಿದ್ದಾರೆ; ಆದರೆ ಅವರ ಆಲೋಚನೆಯು ಸ್ವಾರ್ಥದಿಂದ ಕೂಡಿದೆ. ಭಾಷೆಯ ಅಭಿವೃದ್ಧಿ ಇಂತಹ ವಿದ್ಯಾವಂತರಿಂದ ಮಾತ್ರ ಸಾಧ್ಯವೆನ್ನುವುದು ಅವರ ಅಭಿಮತ. ಮೇಲಿನ ಹೇಳಿಕೆಯಲ್ಲಿ ಬೇರೆ ಭಾಷೆಯಲ್ಲಿನ ಉದ್ಗ್ರಂಥಗಳನ್ನು ಕನ್ನಡಕ್ಕೆ ತರುವ ಆಶಯ ಇದರಲ್ಲಿದೆ.

ಇವರಂತೆ ಆನಂದರಾಯರಿಗೆ ಕೂಡ ಇಂಗ್ಲಿಷ್ ಕೃತಿಗಳ ಬಗ್ಗೆ ಆದರವಿದ್ದಂತೆ ಕಾಣುತ್ತದೆ. ಭಾರತೀಯ ಪರಿಸರದಲ್ಲಿ ಇಲ್ಲದ ವಿಶಿಷ್ಟತೆಯು ಇಂಗ್ಲಿಷ್ ಸಾಹಿತ್ಯದಲ್ಲಿದೆ ಎಂಬುದು, ಅಲ್ಲದೆ ಶೇಕ್ಸ್‌ಪಿಯರ್‌ನ ಮೂಲಕ ಅಲ್ಲಿನ ಕೃತಿಗಳನ್ನು ಪರಿಚಯಿಸುವ ಕಾರ್ಯ ಅವರ ಉದ್ದೇಶವಿದ್ದಂತೆ ತೋರುತ್ತದೆ.

"ನನ್ನ ಕೆಲಸವು ಅಸಮರ್ಪಕವಾಗಿದ್ದರೂ ಚಿಂತೆಯಿಲ್ಲ; ಇಂಗ್ಲೀಶ್ ಬಾರದ ಸ್ವಬಾಂಧವರಿಗೆ ಕಿಂಚಿತ್ತಾದರೂ ಶೆಕ್ಸ್‌ಪಿಯರನ ಪ್ರತಿಭೆಯ ಪರಿಚಯ ಮಾಡಿಕೊಡಬೇಕು ಎಂಬುದು." (ಹೊಸಗನ್ನಡದ ಅರುಣೋದಯ–ಪು.೪೧೫) ಅಲ್ಲದೆ "... The Book is intended not only for the general public and scholars, but also for representation on the stage." ಅಂದರೆ ಇಂಗ್ಲಿಷ್ ನಾಟಕಗಳನ್ನು ಅನುವಾದ ಮಾಡುವುದು ಸುಲಭದ ಕೆಲಸವಲ್ಲ. ಭಾಷೆ ಹಾಗೂ ಸಂಸ್ಕೃತಿಯ ವಿಚಾರಗಳು ಬಹಳ ತೊಡಕಾಗುವಂತಹುದು. ಆದರೂ ಅದರ ಪರಿಚಯ ಜನರಿಗೆ ನೀಡಬೇಕೆಂಬ ಒಲವು ಅವರ ಮಾತುಗಳಲ್ಲಿ ವ್ಯಕ್ತವಾಗಿದೆ.

ಇಂತಹ ವಿಚಾರಗಳು ನಾಟಕದ ಪ್ರಕಾರವು ಇಂಗ್ಲಿಷ್‌ನಿಂದ ಅನುವಾದಗೊಳಿಸಿಕೊಳ್ಳುವ ಸಂದರ್ಭದಲ್ಲಿ ಎದುರಾದವು. ಸಂಸ್ಕೃತದ ನಾಟಕಗಳಂತೆ ಯಥಾವತ್ತಾಗಿ ಭಾಷಾಂತರಿಸಿಕೊಳ್ಳದೆ

ರೂಪಾಂತರದ ಮಾರ್ಗವನ್ನು ಅನುಸರಿಸಿದ್ದಾರೆ. ರೋಮಿಯೋ-ಜೂಲಿಯಟ್ ನಾಟಕವು ಕನ್ನಡದಲ್ಲಿ ರಾಮವರ್ಮ- ಲೀಲಾವತಿ, ರಮೇಶ-ಲಲಿತಾ, ಕಮಲಾಕ್ಷ ಪದ್ಮಗಂಧಿಯರ ಕಥೆ; ಮ್ಯಾಕ್‌ಬೆತ್ ನಾಟಕವನ್ನು ಪ್ರತಾಪರುದ್ರದೇವ, ಪ್ರತಾಪಸಿಂಹ ಚರಿತ್ರ ನಾಟಕ; ಎ ಮಿಡ್‌ಸಮ್ಮರ್ ನೈಟ್ ಡ್ರೀಮ್ಸ್ ನಾಟಕವನ್ನು ಪ್ರಮಿಳಾರ್ಜುನೀಯಂ, ಯವನಯಾಮಿನಿ ಕಥೆಗಳು, ಯವನಯಾಮಿನಿ ವಿನೋದ, ವಸಂತಯಾಮಿನೀ ಸ್ವಪ್ನ ಚಮತ್ಕಾರ ನಾಟಕ ಹೀಗೆ ಅನೇಕ ನಾಟಕಗಳು ರೂಪಾಂತರವಾಗಿದೆ. ಹೀಗೆ ಅನೇಕ ಬದಲಾವಣೆ ಹಾಗೂ ಉದ್ದೇಶಗಳನ್ನು ಹೊಂದಿ ನಾಟಕ ಪ್ರಕಾರವು ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು.

## ವಸ್ತು

ಆಧುನಿಕ ಕನ್ನಡ ನಾಟಕಗಳ ವಸ್ತುವನ್ನು ಗಮನಿಸಿದರೆ ಆರಂಭದಲ್ಲಿ ಸಂಸ್ಕೃತದ ಪೌರಾಣಿಕ ವಿಚಾರಗಳನ್ನೇ ಆಯ್ದುಕೊಂಡಿದ್ದಾರೆ. ೧೯ನೇ ಶತಮಾನದಲ್ಲಿ ಕನ್ನಡ ನಾಡನ್ನು ಪ್ರವೇಶಿಸಿದ ಪಾರ್ಸಿಯಂತಹ ಅನೇಕ ನಾಟಕ ಮಂಡಳಿಗಳ ಪ್ರಭಾವದಿಂದ ಪ್ರೇರಿತರಾಗಿ ಕನ್ನಡದಲ್ಲಿಯೇ ನಾಟಕಗಳನ್ನು ರಚಿಸತೊಡಗಿದರು. ರಂಗ ಪ್ರದರ್ಶನದ ಹಿನ್ನೆಲೆ ಇದರ ಉದ್ದೇಶವಾಗಿತ್ತಾದರೂ ಹೊಸ ಮಾದರಿಯ ನಾಟಕಗಳ ರಚನೆ ಮುಖ್ಯವಾಗಿತ್ತು. ಹೀಗೆ ರಚನೆಯಾದ ಕನ್ನಡ ನಾಟಕಗಳನ್ನು ಪ್ರಮುಖವಾಗಿ ಹೀಗೆ ವಿಭಾಗಿಸಬಹುದು

೧. ಯಕ್ಷಗಾನ ಮತ್ತು ಬಯಲಾಟ

೨. ಪೌರಾಣಿಕ ನಾಟಕಗಳು

೩. ಐತಿಹಾಸಿಕ ನಾಟಕಗಳು

೪. ಸಾಮಾಜಿಕ ನಾಟಕಗಳು

### ೧. ಯಕ್ಷಗಾನ ಮತ್ತು ಬಯಲಾಟ

ಇವನ್ನು ಜನಪದ ರಂಗಭೂಮಿ ಎಂದು ಕರೆಯಲಾಗಿದೆ. ಇವು ಪ್ರಾಚೀನ ಕಲೆ. ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ಇವುಗಳನ್ನು ಪ್ರದರ್ಶಿಸುತ್ತಿದ್ದರು. ಈಗಲೂ ಕರಾವಳಿ ಪ್ರದೇಶಗಳಲ್ಲಿ ಈ ಹಿನ್ನೆಲೆಯಲ್ಲಿಯೇ ಯಕ್ಷಗಾನ ಪ್ರಸಂಗಗಳನ್ನು ಏರ್ಪಡಿಸುತ್ತಾರೆ. ಮಹಾಭಾರತ, ರಾಮಾಯಣ, ದೇವಿ ಮಹಾತ್ಮೆ, ವಿಷ್ಣು ಪುರಾಣದಂತಹ ವಿಚಾರಗಳಂತಹ ಅನೇಕ ಪ್ರಸಂಗಗಳನ್ನು ಅಭಿನಯಿಸುತ್ತಿದ್ದರು. ನಾಟಕಗಳಂತೆ ವಿಶಿಷ್ಟವಾದ ವೇಶಭೂಷಣ, ಅಲಂಕಾರವು ಬಹಳ ವಿಶಿಷ್ಟವಾದವು. ತಾಳ ಮದ್ದಳೆಯಂತಹ ವಾದ್ಯಗಳನ್ನು ಬಳಸಲಾಗುತ್ತವೆ.

ಯಕ್ಷಗಾನದಷ್ಟೇ ಪ್ರಸಿದ್ಧವಾದದ್ದು ಬಯಲಾಟ. ಇದರಲ್ಲಿ ಸಣ್ಣಾಟ ಮತ್ತು ದೊಡ್ಡಾಟಗಳು ಪ್ರಮುಖವಾದವು. ಉತ್ತರ ಕರ್ನಾಟಕದಲ್ಲಿ ಬಹಳ ಪ್ರಸಿದ್ಧವಾದ ಪ್ರಕಾರ. ಪುರಾಣ ಹಾಗೂ ಭಕ್ತಿ

ಪಂಥ ವಿಚಾರಗಳು ಇದರ ವಸ್ತು. ಮನರಂಜನೆಯ ಭಾಗವಾಗಿ ಈ ಬಯಲಾಟಗಳು ನಡೆಯುತ್ತಿದ್ದವು. ಪೌರಾಣಿಕ ನಾಟಕಗಳಂತೆಯೇ ಹಾಡು, ಕುಣಿತವನ್ನು ಇದರಲ್ಲಿ ಕಾಣಬಹುದು. ಸಣ್ಣಾಟಗಳಲ್ಲಿ ಶ್ರೀಕೃಷ್ಣ ಪಾರಿಜಾತ, ರಾಧಾನಾಟ ದಾಸರ ಕುರಿತ ಸಣ್ಣಾಟಗಳು, ತಿರುನೀಲಕಂಠ, ಅಲ್ಲಮಪ್ರಭುಗಳಂತ ವಚನಕಾರರು ಹೀಗೆ ಇದರ ವಸ್ತುವಿತ್ತು. ಸತ್ಯಶೀಲ, ರೂಪಸಿಂಗನ ಆಟ, ಸಂಗ್ಯಾ ಬಾಳ್ಯಾದಂತಹ ಸಾಮಾಜಿಕ ವಿಚಾರಗಳು ಸಣ್ಣಾಟದಲ್ಲಿ ಕಾಣಬಹುದಾಗಿದೆ. ಸಣ್ಣಾಟಕಿಂತ ದೊಡ್ಡಾಟದ ವೈಶಿಷ್ಟ್ಯವೆಂದರೆ ರೌದ್ರತೆ ಉಚಿತವಾಗಿ ಬರಲೇಬೇಕು. ಹೊರತಾಗಿ ಸಣ್ಣಾಟ ಹಾಗೂ ದೊಡ್ಡಾಟದ ಲಕ್ಷಣ ಹಾಗೂ ಸ್ವರೂಪ ಒಂದೇ ಆಗಿದೆ. ಇದರ ಮುಂದುವರೆದ ರೂಪವಾಗಿ ಪೌರಾಣಿಕ ನಾಟಕಗಳನ್ನು ಕಾಣಬಹುದಾಗಿದೆ.

### ೨. ಪೌರಾಣಿಕ ನಾಟಕಗಳು

ಭಾರತೀಯ ಸಂಸ್ಕೃತ ಸಾಹಿತ್ಯ ಪರಂಪರೆಯನ್ನು ಗಮನಿಸಿದರೆ ನಾಟಕ ಅತ್ಯಂತ ಪ್ರಾಚೀನ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಕಾಳಿದಾಸ, ಭಾಸರಂತಹ ಮಹಾನ್ ನಾಟಕಕಾರರನ್ನು ಗುರುತಿಸಬಹುದು. ಆದರೆ ರಂಗಭೂಮಿ ನಾಟಕ ಪರಂಪರೆಯ ಬಗ್ಗೆ ನೋಡಿದಾಗ ಅದು ಬಹಳ ಇತ್ತೀಚಿನ ಬೆಳವಣಿಗೆಯಾಗಿ ಕಾಣಿಸುತ್ತದೆ. ಕನ್ನಡದಲ್ಲಿ ರನ್ನ, ರಾಘವಾಂಕರ ಕಾವ್ಯಗಳಲ್ಲಿ ನಾಟಕೀಯ ಅಂಶಗಳನ್ನು ಗುರುತಿಸಬಹುದಾದರೂ ಅದು ಪೂರ್ಣವಲ್ಲ.

೧೭ನೇ ಶತಮಾನದ ಸಿಂಗಾರಾರ್ಯನ ಮಿತ್ರಾವಿಂದ ಗೋವಿಂದ ನಾಟಕವು ಕನ್ನಡದಲ್ಲಿ ಸಂಸ್ಕೃತ ಮೂಲದಿಂದ ಯಾವುದೇ ನಾಟಕಗಳು ಅನುವಾದವಾಗಿರುವುದಕ್ಕೆ ಸಾಕ್ಷಿಗಳಿಲ್ಲ. ಸುಮಾರು ೧೫೦ ವರ್ಷಗಳ ನಂತರದಲ್ಲಿ ಕನ್ನಡಕ್ಕೆ ಅನುವಾದ ನಾಟಕಗಳು ಪ್ರವೇಶವನ್ನು ಪಡೆದವು. ಸಂಸ್ಕೃತದ ಮುದ್ರಾರಾಕ್ಷಸ ನಾಟಕವು ೧೯ನೇ ಶತಮಾನದಲ್ಲಿ ಕನ್ನಡಕ್ಕೆ ಅನುವಾದಗೊಂಡರೂ ಅದು ಕಾದಂಬರಿಯಾಗಿ ರೂಪಾಂತರವಾಯಿತು. ನಂತದಲ್ಲಿ ಕಾಳಿದಾಸನ ಸಂಸ್ಕೃತದ "ಶಾಕುಂತಲ" ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡಿದವರಲ್ಲಿ ಚುರಮುರಿ ಶೇಷಗಿರಿರಾಯರವರೇ ಮೊದಲಿಗರು. "ಮಿತ್ರಾವಿಂದ ಗೋವಿಂದ" ನಾಟಕದ ನಂತರದ ಸ್ಥಾನ ಇದಕ್ಕೆ ಲಭಿಸುತ್ತವೆ. ಇವರಿಗೆ ಉತ್ತರ ಕರ್ನಾಟಕದಲ್ಲಿನ ವೃತ್ತಿಪರ ರಂಗಭೂಮಿಗಳಲ್ಲದೆ ಸ್ಥಳೀಯವಾದ ಜಾನಪದ ನಾಟಕಗಳು ಹಾಗೂ ಬಯಲಾಟಗಳ ಪ್ರಭಾವವಿದ್ದುದರಿಂದ, ಜೊತೆಗೆ ಸ್ವತಃ ಸಂಗೀತವನ್ನು ಬಲ್ಲವರಾಗಿದ್ದರಿಂದ ನಾಟಕದಲ್ಲಿ ಸಂಗೀತದ ಬಳಕೆಯನ್ನು ಮನರಂಜನೆಯ ಭಾಗವಾಗಿ ಬಳಸಿಕೊಂಡು ನಾಟಕವನ್ನು ರಚಿಸಿದರೆನ್ನಬಹುದು.

ಈ ಮಾದರಿಯಲ್ಲಿ ಕನ್ನಡಕ್ಕೆ ನಾಟಕಗಳು ಅನುವಾದಗೊಳ್ಳಲು ಕಾರಣಗಳು ಮೊದಲನೆಯದಾಗಿ ಸ್ಥಳೀಯವಾಗಿ ಇದ್ದಂತಹ ದೊಡ್ಡಾಟದಂತಹ ದೀರ್ಘಾವಧಿಯ ಜನಪದ ಕಲೆಗಳು; ಎರಡನೆಯದಾಗಿ ಮರಾಠಿ ಹಾಗೂ ಪಾರ್ಸಿ ನಾಟಕ ಕಂಪನಿಗಳ ಹೊಸ ಮಾದರಿಯ ಪ್ರಭಾವ; ಮೂರನೆಯದಾಗಿ ಇಂಗ್ಲಿಷ್ ಶಿಕ್ಷಣ ಮತ್ತು ಇಂಗ್ಲಿಷ್ ನಾಟಕಗಳ ಪರಿಚಯವು ಭಾರತೀಯ ನಾಟಕಗಳ ಸಿದ್ಧಾಂತವನ್ನು ಬದಲಾಯಿಸಿತು.

ಕನ್ನಡದಲ್ಲಿ ಎರಡು ಮಾದರಿಯಲ್ಲಿ ಪೌರಾಣಿಕ ನಾಟಕಗಳು ಅನುವಾದಗೊಂಡವು. ಮೊದಲನೆಯದು ರೂಪಾಂತರ, ಎರಡನೆಯದು ಭಾಷಾಂತರ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಮಿತ್ರಾವಿಂದ ಗೋವಿಂದ ನಾಟಕವು ರಚನೆಯಾಗುವವರೆಗೆ ಸಂಸ್ಕೃತದಿಂದ ಯಾವುದೇ ನಾಟಕಗಳು ಅನುವಾದವಾಗದೇ ಇರುವುದು ಗಮನಾರ್ಹ. ಈ ನಾಟಕದ ನಂತರವೂ ಅಂದರೆ ಸುಮಾರು ೨೦೦ ವರ್ಷಗಳ ನಂತರದಲ್ಲಿ ಅನುವಾದ ನಡೆದಿರುವುದು ವಿಶೇಷ ಮತ್ತು ಇವು ಅನುವಾದಗೊಂಡ ಬಗೆಯೂ ಅಷ್ಟೇ ವಿಭಿನ್ನ. ಮಿತ್ರಾವಿಂದ ಗೋವಿಂದ ನಾಟಕವು ಸಂಸ್ಕೃತದ ರತ್ನಾವಳಿ ನಾಟಕದ ಪ್ರಭಾವವಿದ್ದರೂ ಸ್ವತಂತ್ರ ಕೃತಿಯಂತೆ ಗೋಚರಿಸುತ್ತದೆ. ನಂತರದಲ್ಲಿ ಚುರಮುರಿಯವರು ಅನುವಾದಿಸಿದ ಅಭಿಜ್ಞಾನ ಶಾಕುಂತಲ ನಾಟಕವೂ ಯಥಾವತ್ತಾದ ಅನುವಾದವಾಗಿರದೆ ರೂಪಾಂತರವನ್ನು ಪಡೆದಿದೆ. ಉದಾಹರಣೆಗೆ ಕಾಳಿದಾಸನ ಗದ್ಯ ಭಾಗವು ಇವರಲ್ಲಿ ಪದ್ಯದ ರೂಪ ಪಡೆದಿದೆ. ಭಾಷೆ ಸ್ಥಳಿಯವಾದ ಶೈಲಿಯನ್ನು ಹೊಂದಿದೆ. ಇದಲ್ಲದೆ ಇವರ ಅನುವಾದಿತ ಮೃಚ್ಛಕಟಿಕ ನಾಟಕವೂ ಸಂಪೂರ್ಣ ಗದ್ಯರೂಪದಲ್ಲಿದೆ. ಪೌರಾಣಿಕ ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ಅನುವಾದಗೊಂಡಿಲ್ಲ. ಧೋಂಡೋ ನರಸಿಂಹರು ಮೃಚ್ಛಕಟಿಕ, ಮಾಲವಿಕಾಗ್ನಿಮಿತ್ರ, ವೇಣಿಸಂಹಾರಗಳನ್ನು ಕನ್ನಡೀಕರಿಸಿದ್ದಾರಾದರೂ ಇವು ಗದ್ಯ ರೂಪಕ್ಕೆ ರೂಪಾಂತರವಾದವು.

ಇವರ ನಂತರದಲ್ಲಿ ರಚಿಸಿದ ನಾಟಕಕಾರರು ರಂಗಪ್ರಯೋಗಕ್ಕಾಗಿಯೇ ನಾಟಕಗಳನ್ನು ರಚಿಸುವ ಪ್ರಯತ್ನ ನಡೆಸಿದರು. ಇದು ಅಂದಿನ ವೃತ್ತಿಪರ ರಂಗಭೂಮಿಯ ನಾಟಕಗಳ ಪ್ರಭಾವವಾಗಿದೆ. ರಚನಾಕರರು ನಾಟಕ ಪ್ರದರ್ಶನಗೊಳ್ಳುವ ಸಮಯ ಹಾಗು ಓದುಗರಿಗೂ, ನಾಟಕದವರಿಗೂ ಅನುಕೂಲವಾಗಬೇಕೆಂಬ ಮನೋಧರ್ಮದ ಹಿನ್ನೆಲೆ ನಾಟಕಗಳ ರಚನೆಯ ಪ್ರಮುಖ ಅಂಶವಾಯಿತು. ಅದರಲ್ಲಿ ಸೋಸಲೆ ಅಯ್ಯಾಶಾಸ್ತ್ರಿಗಳು ೧೮೯೧ರಲ್ಲಿ ಅನುವಾದಿಸಿದ ಕಾಳಿದಾಸನ 'ವಿಕ್ರಮೋರ್ವಶೀಯ'ದ ಅನುವಾದ ಕೃತಿಯಲ್ಲಿ ಹೇಳುವಂತೆ "ಈ ನಾಟಕವನ್ನು ಮೂರು ಘಂಟೆಯ ಕಾಲದಲ್ಲಿ ಆಡುವುದಕ್ಕೆ ಅನುಕೂಲವಾಗಿಯೂ, ನಾಟಕ ಸಂವಿಧಾನ ಕೆಡದಂತೆಯೂ ಕೆಲವು ವರ್ಣನಾದಿ ಭಾಗಗಳನ್ನು ಬಿಟ್ಟು ಗಾನ ಯೋಗ್ಯವಾದ ಕೆಲವು ಪದಗಳಿಂದ ಕೂಡಿ... ಕರ್ನಾಟಕ ಭಾಷೆಯಲ್ಲಿ... ಓದುಗರಿಗೂ ನಾಟಕದವರಿಗೂ ಅನುಕೂಲವಾಗಿರುವಂತೆ ರಚಿಸಿರುತ್ತೇನೆ"(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ – ೮೮) ಎಂದಿದ್ದಾರೆ. ನಮ್ಮಲ್ಲಿ ದೊಡ್ಡಾಟ, ಸಣ್ಣಾಟ, ಯಕ್ಷಗಾನದಂತಹ ಪ್ರಕಾರಗಳು ಅಭಿನಯಕ್ಕೆ ಹೆಚ್ಚು ಸಮಯವನ್ನು ತೆಗೆದುಕೊಳ್ಳುತ್ತಿತ್ತು. ಆದರೆ ಪಾರ್ಸಿ ನಾಟಕ ಕಂಪನಿಯ ನಾಟಕಗಳ ಅವಧಿ ಕಡಿಮೆ ಹಾಗೂ ಮನೋರಂಜಕವಾಗಿದ್ದವು. ಆದ್ದರಿಂದಲೇ ಸೋಸಲೆಯವರು ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಾಟಕ ರಚಿಸಿದ್ದಾರೆ. ಇವರ ನಂತರದಲ್ಲಿ ಧೋಂಡೋ ನರಸಿಂಹ ಮುಳಬಾಗಲ ಅವರು ಸಂಸ್ಕೃತದಿಂದ ನಾಲ್ಕು ಪ್ರಮುಖ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಅವರ ಮೂಲ ಉದ್ದೇಶವು ೧೮೮೫ರಲ್ಲಿ ಅವರು ಅನುವಾದಿಸಿದ 'ವೇಣೀ ಸಂಹಾರ'ದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ "ಕನ್ನಡ ಭಾಷೆಯ ಈಗಿನ ಸ್ಥಿತಿಯನ್ನು ನೋಡಿದರೆ, ಈ ಭಾಷೆಯ ಎಲ್ಲಾ ವಿಷಯಗಳ ಗದ್ಯಾತ್ಮಕ ಗ್ರಂಥಗಳು

ತೀರಾ ಕಡಿಮೆಯಾಗಿದೆ. ಸಾಧಾರಣ ಜನರ ಮನೋರಂಜನಾರ್ಥವಾಗಿ ಏನಾದರೂ ಓದುಬೇಕೆಂದರೆ, ಯೋಗ್ಯವಾದ ಪುಸ್ತಕಗಳು ಇರುವುದಿಲ್ಲ. ಇದೊಂದು ಈ ಭಾಷೆಯ ಜನರ ತಿರಸ್ಕಾರಕ್ಕೊಳಗಾಗುವುದಕ್ಕೆ ಕಾರಣವಿರುತ್ತದೆ." ಕೇವಲ ರಂಗಪ್ರಯೋಗದ ಸಲುವಾಗಿ ನಾಟಕಗಳು ರಚನೆಯಾಗುತ್ತಿದ್ದ ಸಂದರ್ಭದಲ್ಲಿ ಓದುಗರ ದೃಷ್ಟಿಯಲ್ಲಿ ನಾಟಕಗಳನ್ನು ಇವರು ಬರೆದರು. ವೇಣಿ ಸಂಹಾರವು ನಾಟಕವಾಗಿದ್ದರೂ ಇದರ ಸ್ವರೂಪವನ್ನು ಗದ್ಯ ಮಾದರಿಯೆಂದು ಹೇಳಿದ್ದರೂ, ಇದರಲ್ಲಿ ಅನೇಕ ಪದ್ಯಗಳೂ ಇವೆ. ಆದರೆ ಪದ್ಯದ ಭಾಷೆ ಸರಳವಾಗಿರುವುದು ಗಮನಾರ್ಹ. ಇದರ ಬಗ್ಗೆ ಭಾಷೆಯ ಭಾಗದಲ್ಲಿ ಚರ್ಚಿಸಲಾಗಿದೆ. ಈ ನಾಟಕಗಳು ಕನ್ನಡಕ್ಕೆ ಅನುವಾದವಾಗುವುದರ ಮೂಲಕ ನಾಟಕ ಪ್ರಕಾರವೊಂದು ರೂಪುಗೊಳ್ಳಲು ಹೊಸ ಮಾರ್ಗವನ್ನು ರೂಪಿಸಿತು.

ಈ ಸಂದರ್ಭದಲ್ಲಿ ಉತ್ತರ ಕರ್ನಾಟಕದಲ್ಲಿ ಶಾಂತ ಕವಿಗಳಿಂದ ಸ್ವತಂತ್ರವೆನ್ನಬಹುದಾದ ಪೌರಾಣಿಕ ಕಥಾಹಂದರವುಳ್ಳ 'ಸುಂದೋಪಸುಂದ ವಧೆ' ಎಂಬ ನಾಟಕವು ರಚನೆಯಾಗಿದೆ. ರಚನೆಯಾದ ವರ್ಷ ಖಚಿತವಾಗಿ ತಿಳಿದಿಲ್ಲ. ಇದು ಹೆಚ್ಚಾಗಿ ಗದ್ಯಪ್ರಧಾನವಾದ ನಾಟಕವೇ ಆಗಿದೆ. ಇದರ ಶೈಲಿ ಕುರಿತು "ಇಲ್ಲಿಯ ಪದ್ಯಕ್ಕೆ ಏಕಮುಖವಿದೆ; ಏರಿಳಿತಗಳಿಲ್ಲ ಗದ್ಯ, ದಿನದ ಮಾತನ್ನು ಒಳಗೊಂಡಿರುವುದರಿಂದಲೂ, ಗ್ರಾಂಥಿಕ ಮತ್ತು ದೇಸಿಗಳ ಸರಿಯಾದ ಹೊಂದಿಕೆ ಎಷ್ಟೋ ಸಲ ಇರದ ಮೂಲಕವೂ, ಏಕವಾಗಿ ಕಾಣುವುದಿಲ್ಲ. ಹಲಕೆಲವು ಸಲವಂತೂ ಅಶ್ಲೀಲ–ಅಪಹಾಸ್ಯಕರ ಎನ್ನುವ ಮಟ್ಟಿಗೂ ಇಲ್ಲಿಯ ಗದ್ಯಶೈಲಿ ಕಂಡುಬರುತ್ತದೆ. ಒಟ್ಟಾರೆ, ಪದ್ಯರಚನೆಯಲ್ಲಿ ಶಾಂತ ಕವಿಗಳು ಪಡೆದ ಸಿದ್ಧಿಯನ್ನು ಅವರು ಗದ್ಯದಲ್ಲಿ ಸಾಧಿಸಲಿಲ್ಲವೆಂದೇ ಹೇಳಬೇಕಾಗುತ್ತದೆ." ಎಂದಿದ್ದಾರೆ.(ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೩೩೦)

ಉದಾಹರಣೆಗೆ– ಸುಂದೋಪಸುಂದರಿಂದ ಅವಮಾನಿತಳಾದ ರಂಭೆ, ದೇವೇಂದ್ರನಿಗೆ ಹೇಳುವ ಈ ಮಾತನ್ನು ನೋಡಬಹುದು:

ರಂಭೆ (ಅಳುತ್ತ) : ದೇವೇಂದ್ರ ! ಏನು ಹೇಳಲಿ ಸುಂದ ಮತ್ತು ಉಪಸುಂದರೆಂಬ ಇಬ್ಬರು ದೈತ್ಯರು ಈವತ್ತಿನ ದಿವಸ ಸ್ವರ್ಗಲೋಕಕ್ಕೆ ದಾಳೀ ಮಾಡಿ, ಸಕಲ ಕಿನ್ನರ ಸ್ತ್ರೀಯರನ್ನು ಅವಮಾನ ಮಾಡಿದರು. ಗಂಧರ್ವಾಂಗನೆಯರನ್ನು ಹಿಂಸೆ ಪಡಿಸಿದರು ! ಮತ್ತು ಸುರಸ್ತ್ರೀಯರನ್ನು ಮಂಚಕ್ಕೆ 'ಬಾ' ಎಂದು ಜಗ್ಗಿದರು ! ದೇವಾ ! ಸ್ತ್ರೀಯರ ಗೋಳವನ್ನು ಕೇಳುವವರೇ ಇಲ್ಲ !.........

ಇಂದ್ರ : ಹಾಹಾ ! ರಂಭೇ, ಸೈರಿಸು, ಸೈರಿಸು ! ದುಃಖವನ್ನು ಶಾಂತಮಾಡು, ಶಾಂತಮಾಡು

ರಂಭೆ (ಅಳುತ್ತಾ) :ಮಹಾನ್ ಹ್ಯಾಗೆ ಸಹನೆ ಮಾಡಲಿ? ಹ್ಯಾಗೆ ದಮ್ಮು ಹಿಡಿಯಲಿ? ದೇವರೂ, ಯಾವ ರಂಭೆಯ ಮೇಲೆ ಕೈಯಿಟ್ಟರೆ ಲೌಡಿಯು ಮಾಸ್ಯಾಳು ಎಂಬ ಅಂತಃ ಕಾರಣದಿಂದ ತಮ್ಮಂಥವರು ಸುದ್ದಾ ಹೆದರುತ್ತಿದ್ದರೋ, ಅಂಥಾ ದಾಸ ಈ ಪಾಪಿಯನ್ನು ಆ ದುಷ್ಟ, ಭ್ರಷ್ಟ, ಕ್ರೂರಾ, ಕಠೋರ ಹೃದಯರಾದ ದೈತ್ಯರು ದುಷ್ಟ ವಚನದಿಂದ ಬಾಯಿಗೆ ಬಂದಂತೆ ಬೊಗಳಿ,

ಕೈಗೆ ಬಂದಂತೆ ಬಡಿದರು ! ಅವರ ಮಾತಿಗೆ ನಾನು 'ವಲ್ಲೆ' ಎಂದು ಹೇಳಿದ ಕೂಡ್ಲೇ (ಅತ್ತು) ದೇವೇಂದ್ರಾ ನನಗೆ ಪಾದಪ್ರಹಾರ ಮಾಡಿದರು.

### ೩. ಐತಿಹಾಸಿಕ ನಾಟಕಗಳು

ಒಂದೆಡೆ ಸಂಸ್ಕೃತದಿಂದ ನಾಟಕಗಳು ಅನುವಾದವಾಗುತ್ತಿದ್ದರೆ; ಮತ್ತೊಂದೆಡೆ ಇತರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದ ನಡೆಯುತ್ತಿತ್ತು. ಸಂಸ್ಕೃತ ನಾಟಕಗಳ ವಸ್ತು ಹೆಚ್ಚಾಗಿ ಪೌರಾಣಿಕವಾಗಿದ್ದವು. ಪಾರ್ಸಿ ಮತ್ತು ಮರಾಠಿ ನಾಟಕ ಕಂಪನಿಗಳ ವಸ್ತು ಐತಿಹಾಸಿಕ ವಿಚಾರಗಳಾಗಿದ್ದವು. ಆದ್ದರಿಂದ ಅಂತಹ ನಾಟಕಗಳ ರಚನೆಗೆ ಕೆಲವರು ಮುಂದಾದರು. ಇಂಗ್ಲಿಷಿನ ನಾಟಕಗಳು ೧೯ನೇ ಶತಮಾನದ ೭೦-೮೦ರ ದಶಕದಲ್ಲಿ ಕನ್ನಡಕ್ಕೆ ಅನುವಾದಗೊಳ್ಳಲಾರಂಭಿಸಿದವು. ೧೮೮೦ರಲ್ಲಿ ಚೆನ್ನಬಸಪ್ಪನವರು ಅನುವಾದಿಸಿದ 'ಮ್ಯಾಕ್‌ಬೆತ್' ನಾಟಕವು ಮೊದಲನೆಯದ್ದೆಂದು ಗುರುತಿಸಲಾಗಿದೆ. ಇವರ ನಂತರದಲ್ಲಿ ಗುಂಡೋಕೃಷ್ಣ ಚುರಮುರಿಯವರ 'ರಾಘವೇಂದ್ರರಾವ್ ನಾಟಕ'ವು 'ಒಥೆಲ್ಲೋ' ನಾಟಕದ ಅನುವಾದವಾಗಿದೆ. ಇದೇ ನಾಟಕವನ್ನು ಬಸವಪ್ಪಶಾಸ್ತ್ರಿಗಳು ೧೮೯೫ರಲ್ಲಿ 'ಶೂರಸೇನ ಚರಿತ್ರೆ' ಎಂದು ಅನುವಾದಿಸಿದರು. ೧೮೮೫ರಲ್ಲಿ ಎಂ.ಎಸ್.ಪುಟ್ಟಣ್ಣನವರು 'ಕಿಂಗ್‌ಲಿಯರ್'ಅನ್ನು 'ಹೇಮಚಂದ್ರ ವಿಲಾಸ' ಎಂದು ಅನುವಾದಿಸಿದರು.

ಉತ್ತರ ಕರ್ನಾಟಕದಲ್ಲಿ ಇಂಗ್ಲಿಷ್‌ನ ನಾಟಕವನ್ನು ಅನುವಾದಿಸಲು ಮುಂದಾದವರಲ್ಲಿ ಎ.ಆನಂದರಾಯರು, ಗುಂಡೊಕೃಷ್ಣ ಚುರಮುರಿಯವರು ಮೊದಲಿಗರು. ಗುಂಡೋ ಕೃಷ್ಣರವರು ಒಥೆಲೋ ನಾಟಕವನ್ನು 'ರಾಘವೇಂದ್ರ ರಾವ್ ನಾಟಕ' ಎಂಬ ಹೆಸರಿನಲ್ಲಿ ಕನ್ನಡಿಸಿದ್ದಾರೆ. ಇದು ರೂಪಾಂತರವಾಗಿದೆ. ಈ ನಾಟಕ ಅನುವಾದಗೊಳಿಸುತ್ತಿರುವ ಹಿನ್ನೆಲೆಯನ್ನು ಕುರಿತಂತೆ ಈ ರೀತಿ ಹೇಳಿದ್ದಾರೆ "ನಮ್ಮ ಸ್ವಭಾಷೆಯು ಕ್ಷಯರೋಗಿಯಂತೆ ಅತಿ ಸೂಕ್ಷ್ಮ ಅವಸ್ಥೆಯನ್ನು ತಾಳಿರುವುದು ನಾವೆಲ್ಲರೂ ದಿನ ಒಂದಕ್ಕೆ ನೋಡುತಲಿದ್ದೇವೆ. ಹೀಗಿದ್ದೂ ದೊಡ್ಡ ದೊಡ್ಡ ಕರ್ನಾಟಕ ದೇಶಸ್ಥ ವಿದ್ವಾಂಸರೆಂಬ ವೈದ್ಯರೆಲ್ಲರೂ ಕರುಣವಿಲ್ಲದೆ, ಅದನ್ನು ಸಾಯಗೊಡುತ್ತಲಿರುವುದನ್ನು ಕಂಡು ಜೀವವು ನಿಲ್ಲದೆ, ಒಟ್ಟಿಗೆ ಮೂರೆ ಔಷಧಗಳನ್ನು ಬಲ್ಲ ದಡ್ಡ ವೈದ್ಯನಾದ ನಾನು ಅದನ್ನು ಬದುಕಿಸುವುದಕ್ಕೆ ಬೇಕಾಗಿರುವ ಸಾಧನಗಳಲ್ಲಿ ಮನೋರಂಜಕ ಕಥೆಗಳ ಪುಸ್ತಕಗಳನ್ನು ಬರೆಯುವುದು ಮೊದಲಿನ ಉಪಾಯವೆಂದು ನನ್ನ ಬುದ್ಧಿಗೆ ತೋರುತ್ತದೆ. ಇದೇ ಗ್ರಹಿಕೆಯಿಂದ ಈ ಕಥೆಯನ್ನು ಬರೆದಿದ್ದೇನೆ. ಈ ಕಥೆಯು ನಾನು ಕಲ್ಪಿಸಿದ್ದಲ್ಲ. ಇಂಗ್ಲಿಷ್ ಭಾಷೆಯಲ್ಲಿ ಇರುವ ಶೇಕ್ಸ್‌ಪಿಯರನೆಂಬ ಒಬ್ಬ ಮಹಾಕವಿಯಿಂದ ರಚಿತವಾದ ಅಥೆಲ್ಲೊ ಎಂಬ ಶೋಕರಸ ಪ್ರಧಾನವಾದ ಒಂದು ನಾಟಕದ ಆಧಾರದಿಂದ ಬರೆದಿರುತ್ತದೆ..... ಚೋರ ಕವಿಯು, ಇಂಗ್ಲಿಷ್ ಭಾಷೆಯನ್ನರಿಯದವನು, ಯೋಗ್ಯತೆಯಿಲ್ಲದೆ ಕೀರ್ತಿಯನ್ನು ಅಪೇಕ್ಷಿಸುವಾತನು – ಎಂಬ ಮತ್ಸರಿಗಳ ಟೀಕೆಗೆ ಹೆದರದೆ ಭಾಷಾಭಿಮಾನಕ್ಕಾಗಿ ಏನೊ ಒಂದು ಪ್ರಕಾರದ ಈ ಪುಸ್ತಕವನ್ನು ಓದುವುದಕ್ಕಾಗಿ ಉಂಟುಮಾಡಿದ್ದೇನೆ." (ಹೊಸಗನ್ನಡದ ಅರುಣೋದಯ –ಪು. ೩೧೭)

ಇಂತಹ ಮಾದರಿಗಳು ಮುಂದೆ ಅನೇಕ ಅನುವಾದ ಹಾಗೂ ಸ್ವತಂತ್ರ ನಾಟಕಗಳ ರಚನೆಗೆ ಪ್ರೇರಣೆಯಾಯಿತು. ಇಂಗ್ಲಿಷ್‌ನ ಶೇಕ್ಸ್‌ಪಿಯರ್‌ನ ನಾಟಕಗಳೇ ಹೆಚ್ಚು ಅನುವಾದಗೊಂಡವು. ಅಲ್ಲದೆ ಮರಾಠಿ ಹಾಗೂ ಪಾರ್ಸಿ ನಾಟಕಗಳ ಪ್ರೇರಣೆಯೂ ಹೆಚ್ಚಾಗಿತ್ತು. ಇದೇ ವೇಳೆಗೆ ಸಂಸ್ಕೃತ ನಾಟಕಗಳು ರಂಗಪ್ರಯೋಗವನ್ನು ಕಂಡದ್ದರಿಂದ; ಅದೇ ಮಾದರಿಯಲ್ಲಿ ಮೈಸೂರು ಪ್ರಾಂತ್ಯದ ಆನಂದರಾಯರು ಶೇಕ್ಸ್‌ಪಿಯರ್‌ನ 'ರೋಮಿಯೋ ಅಂಡ್ ಜೂಲಿಯಟ್' ನಾಟಕವನ್ನು 'ರಾಮವರ್ಮ ಲೀಲಾವತಿ' ಎಂಬ ಹೆಸರಿನಿಂದ ರೂಪಾಂತರಗೊಳಿಸಿದರು. ಇಲ್ಲಿ ಪ್ರಮುಖವಾದ ವಿಷಯವೆಂದರೆ ಡಿ.ವಿ.ಗುಂಡಪ್ಪನವರು ಮ್ಯಾಕ್‌ಬೆತ್ ನಾಟಕವನ್ನು ಯಥಾವತ್ತಾಗಿ ಭಾಷಾಂತಗೊಳಿಸುವವರೆಗೆ ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಗೊಂಡ ನಾಟಕಗಳಲ್ಲಿ ಹೆಚ್ಚಿನವು ರೂಪಾಂತರಗಳೆ. ಇದಕ್ಕೆ ಕಾರಣ ನಮ್ಮಲ್ಲಿದ್ದ ಸಂಸ್ಕೃತಿ ಭಿನ್ನತೆ.

ಇದಲ್ಲದೆ 'ಭಾರತೀಕರಣ ಇಲ್ಲವೇ ಕನ್ನಡೀಕರಣ ಮಾಡಿಕೊಳ್ಳುವಾಗ ಇಂಗ್ಲಿಷರಿಗೆ ಮಾತ್ರ ಅರ್ಥವಾಗುವ ಭಾಗಗಳನ್ನು ಮಾತ್ರ ರೂಢಿಯಾಗಿರುವ ದೃಷ್ಟಾಂತಗಳಿಗೆ ಬದಲಾಗಿ ನಮ್ಮ ಜನಗಳಲ್ಲಿ ರೂಢಿಯಾಗಿದ್ದನ್ನು ತೆಗೆದುಕೊಂಡು.... ನಮ್ಮ ಜನಗಳು ಒಪ್ಪುವ ರೀತಿಯಲ್ಲಿ, ಭಾಷಾಂತರವನ್ನು ಮಾಡುವ ಧೋರಣೆಗಳು' ಎಂಬುದು ಅಂದಿನ ಎಲ್ಲಾ ರೂಪಾಂತರಕಾರರ ಆಲೋಚನೆ.

ಗುಂಡೋಕೃಷ್ಣ ಚುರಮುರಿಯವರ 'ರಾಘವೇಂದ್ರರಾವ್ ನಾಟಕ'ವು ಮುಂದಿನ ನಾಟಕಗಳಿಗೆ ಪ್ರೇರಣೆಯಂತಿದೆ. ಮೊದಲನೆಯದಾಗಿ ಇವರೇ ನಾಟಕದ ಮತ್ತು ಪಾತ್ರಗಳ ಹೆಸರನ್ನು ಬದಲಾಯಿಸಿಕೊಂಡದ್ದು ವಿಶೇಷ. ಮುಂದಿನ ನಾಟಕಗಳಲ್ಲಿ ಇದೇ ಅಂಶವನ್ನು ಕಾಣಬಹುದು. ಚುರಮುರಿಯವರು ಒಥೆಲ್ಲೋನ ಪಾತ್ರಕ್ಕೆ ರಾಘವೇಂದ್ರ ರಾವ್ ಎಂದು ಹೆಸರಿಸಿಟ್ಟರು. ಇಯಾಗೋ–ನರಸಿಂಗರಾಯ, ಕ್ಯಾಸಿಯೋ–ಸುಬ್ಬರಾಯ ಮುಂತಾಗಿ ಹೆಸರನ್ನು ಬದಲಾಯಿಸಿ ಕೊಂಡಿದ್ದಾರೆ. ಗುಂಡೋ ಕೃಷ್ಣ ಚುರಮುರಿ – ಇವರು ಸರಿಸುಮಾರು ೧೮೮೫ರ ವೇಳೆಯಲ್ಲಿ ಇಂಗ್ಲಿಷ್ ನಾಟಕಗಳನ್ನು ಅನುವಾದಿಸಿದರು. ಗುಂಡೋಕೃಷ್ಣರವರ ಈ ಮಾದರಿಯನ್ನೇ ಅನೇಕರು ಅನುಸರಿಸಿದರು.

ಇದೇ ರೀತಿ ಎ.ಆನಂದರಾಯರು ಜೂಲಿಯೆಟ್–ಲೀಲಾವತಿ, ರೋಮಿಯೋನನ್ನು–ರಾಮವರ್ಮ ಎಂದು, ಬೆಲ್ತಜ಼ಾರ್‌ನನ್ನು–ಬಾಲಚಂದ್ರನಾಗಿ, ಪ್ಯಾರಿಸ್‌ನು–ಪೇಶಲಾಂಗನನ್ನಾಗಿ, ಅಬ್ರಹಂನನ್ನು–ಏಕಪಿಂಗನನ್ನಾಗಿ ಪರಿವರ್ತಿಸಿದ್ದಾರೆ. ಸ್ಥಳದ ಹೆಸರು ಸಹ ವರೋನ ಎಂಬುದು ವಾರಣಾಸಿಯಾಗಿ ಬದಲಾಗಿದೆ. ಮುಂದೆ ಇದೇ ನಾಟಕವನ್ನು ಕಥಾರೂಪದಲ್ಲಿ ಕೆರೂರ ವಾಸುದೇವಾಚಾರ್ಯರು 'ರಮೇಶ–ಲಲಿತಾ' ಎಂಬುದಾಗಿ ಮತ್ತು ಭಂಡೀವಾಡರವರು 'ಕಮಲಾಕ್ಷ–ಪದ್ಮಗಂಧಿ' ಎಂಬುದಾಗಿ ಬರೆದರು.

ರಾಘವೇಂದ್ರರಾವ್‌ರವರ ನಾಟಕದ ಶೈಲಿಯು ಗದ್ಯರೂಪದಲ್ಲಿದೆ ಎಂದು ಹಾವನೂರರು ಹೇಳಿದ್ದಾರೆ. ಅಲ್ಲದೆ ಇದು ಆಧುನಿಕ ನಾಟಕ ಶೈಲಿಯಲ್ಲಿಯೇ ರಚನೆಯಾಗಿದೆ. ಇದರಲ್ಲಿ ಹಾಡುಗಳು

ಕಡಿಮೆ ಎನಿಸಿದ್ದರ ಪರಿಣಾಮ ಹಾವನೂರರು ಹೀಗೆ ಹೇಳಿರಬಹುದು. ಇದರಲ್ಲಿ ಕೇವಲ ಎರಡೇ ಪದ್ಯಗಳಿವೆ. ನಾಟಕದ ಭಾಗವೊಂದನ್ನು ಇಲ್ಲಿ ನೀಡಲಾಗಿದೆ.

"ನರಸಿಂಗರಾಯನು (ಇಯಾಗೊ) ಸುಬ್ಬರಾಯನೊಂದಿಗೆ (ಕ್ಯಾಸಿಯೊ) ಅವನ ಬೇರೊಂದು ಪ್ರೇಮ ವ್ಯವಹಾರದ ವಿಷಯ ಮಾತನಾಡುತ್ತಿದ್ದಾನೆ. ಮರೆಯಲ್ಲಿ ನಿಂತು ಕೇಳುತ್ತಿರುವ ರಾಘವೇಂದ್ರರಾಯನಿಗೆ (ಒಥೆಲೊ) ತನ್ನ ಡೆಸ್ಡಿಮೋನಾಳ ವಿಷಯವನ್ನೇ ಸುಬ್ಬರಾಯ ಹೇಳುತ್ತಿದ್ದಾನೆಂಬ ಭ್ರಮೆ ಹುಟ್ಟುವಂತೆ ನರಸಿಂಗರಾಯ ಮಾತನ್ನು ಬೆಳೆಸುತ್ತಿದ್ದಾನೆ:

ನರ : ನೀವು ಅವಳನ್ನು (ತಾರಾ) ಮದುವೆಯಾಗುವಿರೆಂದು ಜನರೊಳಗಂತೂ ಬಹಳ ಬೊಬ್ಬಾಟವಾಗಿದೆ.

ಸುಬ್ಬ: ......... ಇದೇ ಅವಳು ಬಂದಿದ್ದಳು. ನಾನು ಹೋದಹೋದಲ್ಲೆಲ್ಲ ಬರುತ್ತಾಳರೀ! ಮೊನ್ನೆ ನಾನು ಸಮುದ್ರ ದಡದ ಮೇಲೆ ಕೃತಪುರದ ಒಬ್ಬ ಗೃಹಸ್ಥನೊಡನೆ ಮಾತಾಡುತ್ತ ನಿಂತಿದ್ದೆ. ಅಲ್ಲಿಗೇ ಬಂತಲ್ಲಾ ಸವಾರಿ. ಬಂದು ಸುಮ್ಮನಾದರೂ ನಿಂತಳೇನು? ಇಲ್ಲ; ಬಂದವಳೇ ಕೊರಳಿಗೆ [ಅಭಿನಯಿಸುತ್ತಾ] ಹೀಗೆ ಅಟ್ಟಿಮಿಟ್ಟಿಯನ್ನೇ ಹಾಕಿದಳು.

ರಾಘ : (ಅಡಗಿದಲ್ಲೇ) "ಬಾರೊ, ನನ್ನ ಸುಬ್ಬರಾಯಾ' ಎಂದು ಕೊರಳಲ್ಲಿ ಹಾಗೆ ಕೈ ಹಾಕಿದ್ದಾಳು. ಅವನ ಹಾವಭಾವಗಳಿಂದ ಅದೇ ಅರ್ಥ ಹೊರಡುತ್ತದೆ.

ಸುಬ್ಬ : ನನ್ನ ಕೊರಳಿಗೆ ಜಗ್ಗಿಬಿದ್ದು ಹೊರಳಾಡಿದಳು, ಅತ್ತಳು, ಚಿವಟಿದಳು, ಹೊಡೆದಳು; ಆ ಗೃಹಸ್ಥನಯೆದುರಿಗೆ ಯದ್ವಾ, ತದ್ವಾ ಮಾಡಿಬಿಟ್ಟಳು. ಏನು ಹಣೆ ಬಡಿದುಕೊಳ್ಳಬೇಕೆ ಹೇಳಿರಿ! ಹಃ ಹಃ ಹ!

ರಾಘ : (ಅಡಗಿದ್ದಲ್ಲೇ) ಈಗ, ಅವಳು ತಂನ ಹಾಸಿಗೆಗೆ ಹ್ಯಾಗೆ ಎಳೆದೊಯ್ದಳೆಂಬುದನ್ನು ಹೇಳುತ್ತಲಿದ್ದಾನೆ.

ಸುಬ್ಬ : ಅವಳ ಸಲುಗೆ ಥರವಲ್ಲ. ಇನ್ನು ಅವಳ ಸಂಗತಿಯನ್ನೇ ಬಿಟ್ಟುಬಿಡುತ್ತೇನೆ.

ನರ : ನನ್ನ ಎದುರಿಗೇ ಬಿಡುತ್ತೀರಿ ಕಾಣುತ್ತದೆ. ಅಕ್ಕೋ ಬಂದಳು ನೋಡಿರಿ. (ತಾರಾ ಬರುತ್ತಾಳೆ).

ಸುಬ್ಬ: ಮತ್ತೆ ಬಂತಪ್ಪಾ ಖೋಡಿ. ಏನೇ ಆಗಲಿ, ಚಲುವೆ ಖರೇ, ಯಾಕರೀ? ...... ಯಾಕೆ ನನ್ನ ಬೆನ್ಹತ್ತಿ ತಿರುಗುವಿಯೇ?

ತಾರಾ : ನಾನ್ಯಾಕೆ ನಿಮ್ಮ ಬೆನ್ನು ಹತ್ತಲಿ ಸುಡಲಿಕ್ಕೆ. ವಿಧಿ ಹತ್ತಲಿ ಬೆನ್ನು....... ಅನುಕೂಲವಿದ್ದರೆ ಇಂದು ರಾತ್ರಿ ಅಲ್ಲಿಗೆ ಫಲಾಹಾರಕ್ಕೆ ಬನ್ನಿರಿ. ಅಂದರೆ ಹೇಳುತ್ತೇನೆ. ಇಲ್ಲದಿದ್ದರೆ ಮರ್ಜಿ. (ಹೊರಟು ಹೋಗುತ್ತಾಳೆ)

ನರ : ಹೋಗರೀ, ಹೋಗರೀ, ಅವಳ ಕೂಡ ಹೋಗಿರಿ.

ಸುಬ್ಬ : ಏನು ಮಾಡಲಪ್ಪ, ಹೋಗಲಿಕ್ಕೇ ಬೇಕು. ಇಲ್ಲದಿದ್ದರೆ ಓಣೀ ಹಿಡಿದು ಒದರಿಕೊಳ್ಳುತ್ತಲೇ ನಡೆಯುವಳು. (ಹೊಸಗನ್ನಡದ ಅರುಣೋದಯ–ಪು, ೪೧೯ ).

ಉತ್ತರ ಕರ್ನಾಟಕದ ಭಾಷಾ ಶೈಲಿಯನ್ನು ಬಳಸಿಕೊಂಡಿದ್ದಾರೆ. ತೀರಾ ಆಡು ಭಾಷೆಗೆ ಹತ್ತಿರವಾಗಿದೆ. ಇದರಲ್ಲಿರುವ ಎರಡು ಪದ್ಯಗಳು ಇಂತಿವೆ. ರಾಘವೇಂದ್ರರಾಯನ ಸೈನಿಕರು ಕೋಟೆಯನ್ನು ವಶಪಡಿಸಿಕೊಂಡಾದ ಮೇಲೆ, ಮದ್ಯಪಾನ ಸಮಾರಂಭದಲ್ಲಿ ನಡೆದ ಸಂವಾದ.

ನರಸಿಂಗರಾಯ : ಯಾರೊ ಅಲ್ಲಿ, ಹೂಂ, ಇನ್ನೊಂದು ಬಾಟ್ಲಿ ಬರಲಿ.

"ಪಿಡಿಯೊಳಡಗುವ ನಡುವನಾ ಸತಿಯೊಡನೆ ಸರಸಗಳಾಡುತಾ
ಜಡಜಮುಖಿ ಬಾಯೆನುತ ಗಲ್ಲವ ಪಿಡಿದು ಚುಂಬನ ನೀಡುತಾ
ಎಡದೊಡೆಯ ಮೇಲಿರಿಸಿ ಮದನಾತುರದಿ ಮುಖವನು ನೋಡುತಾ
ಬಿಡದೆ ರಮಿಸುತಲಿಹನೆ ಗುಣಗಣ ಮಂಡಿತಂ ಘನ ಪಂಡಿತಂ ॥"

ಸುಬ್ಬರಾವ : ಪದವು ಬಹಳ ಸೊಗಸಾಗಿರುವದು.

ನರ : ನಾನು ಇದನ್ನು ಮುಂಬಾಪುರದಲ್ಲಿ ಕಲಿತೆನು. ಮುಂಬಾಪುರಸ್ಥರು ಕುಡಿಯುವುದರಲ್ಲಿ ಹೆಸರಾದವರು....

ಸುಬ್ಬ : ಹೂಂ, ಮುಂಬೈಯವರು ಇಷ್ಟು ಕುಡಿಯುತ್ತಾರೋ ?

ನರ : ಪುಣೆಯವರು ಎಷ್ಟು ಕುಡಿದರೆ ಸತ್ತಂತೆ ಬೀಳುವರೊ ಅಷ್ಟು ಮುಂಬೈಯವರು ಸಹಜ ಕುಡಿದು ಬಿಡುತ್ತಾರೆ ..... ಏನು ಮುಂಬೈ ಪಟ್ಟಣದ ಐಶ್ವರ್ಯವು!

"ಹರಿಣಲೋಚನೆ ಗುರುಪಯೋಧರೆ ನಾಗವೇಣಿ ಸುಧಾಧರೀ
ಸರಸ ವಚನರವಿಂದ ಮುಖರೂಪದಲಿ ಹಿಮಕರ ಸೋದರೀ
ಪರಮ ವರ್ತುಳ ಕಂಬುಗೊರಳಿನ ತರುಣಿ ಪೂಶರನಾಟಕ
ನಿರುತ ಬಳಿಯಲ್ಲಿರಲು ಸುರವರ ಪುರದ ಸುಖ ನಮಗ್ಯಾತಕೆ॥"

(ಹೊಸಗನ್ನಡದ ಅರುಣೋದಯ –ಪು. ೪೨೦)

ಇಲ್ಲಿ ಗದ್ಯದ ಭಾಗಕ್ಕಿಂತ ಪದ್ಯದ ಭಾಷೆ ಸಂಸ್ಕೃತ ಕಾವ್ಯದ ಲಕ್ಷಣವನ್ನು ಹೊಂದಿದೆ. ಅಲ್ಲದೆ ಖಂಡಪ್ರಾಸವನ್ನು ಅನುಸರಿಸಿದ್ದಾರೆ. ಆದರೂ ಇದರ ವಿಷಯ ಹೊಸತು ಮತ್ತು ಅದನ್ನು ಕನ್ನಡದ ಜಾಯಮಾನಕ್ಕೆ ಅಳವಡಿಸಿಕೊಂಡಿರುವುದು ಗಮನಾರ್ಹ.

ಆನಂದರಾಯರು ರಾಮವರ್ಮಾ-ಲೀಲಾವತಿ ನಾಟಕವನ್ನು ಬರೆಯುವಾಗ ನಮ್ಮ ಜನಗಳು ಒಪ್ಪುವ ರೀತಿಯಲ್ಲಿ' ಎಂದು ಹೇಳುತ್ತಾ ಅನೇಕ ಬದಲಾವಣೆಗಳನ್ನು ಮಾಡಿಕೊಂಡರು. ಅದರಲ್ಲಿ ನಾಟಕದ ಮುಕ್ತಾಯದ ಸಂದರ್ಭ ಬಹಳ ಮುಖ್ಯವಾದದ್ದು. ಅವರೆ ಹೇಳುವಂತೆ "ಟ್ರಾಜೆಡಿ" ಎಂಬ ನಾಟಕವೇ ನಮ್ಮಲಿಲ್ಲವೆಂದು ಹೇಳಬಹುದು. ಆದ್ದರಿಂದಲೇ ನಮ್ಮ ಪದ್ದತಿಗೆ ಅನುಸಾರವಾಗಿ ನಾಟಕ ನಿರ್ವಹಣ ಸಂಧಿಯ ಅಂತ್ಯಭಾಗದಲ್ಲಿ ಒಂದು ಸ್ಥಾನವನ್ನೇ ಹೊಸದಾಗಿ ಸೇರಿಸಿರುತ್ತೇನೆ. ಈ ಸ್ಥಾನದಲ್ಲಿ ಪೂಜ್ಯರಾದ ಯೋಗೀಶ್ವರನ ಪ್ರಾರ್ಥನೆಗೆ ಪ್ರತ್ಯಕ್ಷನಾದ ಶ್ರೀಮಹಾವಿಷ್ಣುವು ರಾಮವರ್ಮನ ಅನುರಾಗಕ್ಕೂ, ಲೀಲಾವತಿಯ ಪಾತಿವ್ರತ್ಯ, ಅಚಂಚಲಾನುರಾಗಗಳಿಗೂ ಸತ್ತಿದ್ದ ಆ ದಂಪತಿಗಳನ್ನು ಬದುಕಿಸಿ ಅದೃಶ್ಯನಾಗುವನೆಂದು ಹೇಳಿರುವುದು" (ಹೊಸಗನ್ನಡದ ಅರುಣೋದಯ-ಪು.೧೨೩) ಎಂದಿದ್ದಾರೆ.

ಇದಷ್ಟೇ ಅಲ್ಲದೆ ಆನಂದರಾಯರಿಗೆ ಕೆಲವೆಡೆ ಪಡೆನುಡಿಗಳನ್ನು ತರುವ ಸಂದರ್ಭಗಳಲ್ಲಿ ಅದನ್ನು ಅನುವಾದಿಸಿಕೊಳ್ಳಲಾಗದೆ ಅವುಗಳನ್ನು ಬಿಟ್ಟು ಇಲ್ಲವೆ ಸರಳವಾಗಿ ಅನುವಾದಿಸಿದ್ದಾರೆ. ಇದರ ಭಾಗವನ್ನು ತೌಲನಿಕವಾಗಿ ಗಮನಿಸಿದರೆ ಗೊತ್ತಾಗುತ್ತದೆ.

Romeo : Give me that mattock and the wrenching iron Hold, take this letter; early in the morning see thou deliver it to my lord and father give the light; upon thy life, I charge there whater's then hear'st or seest, stand all aloof, And do not inturrupt me in my course, why I descend into this bed of death. Is partly to behold my lady's face but chietty to take thence from her dead finger. A precious ring, a ring that I must use in dear Employment, therefore hence, be done; But if thou, jealous, dost return to pry, In what I farther shall intend to do, By heaven, I will tear thee joint by joint. And strew this hungry churchyard with they limbs. The time and my intents one savage-wild. More fierce and more explorable far Than empty tigers or the roaring sea .....

**ಕನ್ನಡಾನುವಾದ:-**

ರಾಮವರ್ಮ : ಆಯುಧಗಳನ್ನು ಕೊಡು, ಈ ಕಾಗದವನ್ನು ತೆಗೆದುಕೋ, ಪ್ರಾತಃ ಕಾಲವಾದ ಒಡನೆಯೇ ಇದನ್ನು ಪೂಜ್ಯನಾದ ನನ್ನ ತಂದೆಗೆ ಕೊಡು, ಬೆಳಕನ್ನು ಕೊಡು, ನೀನು ಏನನ್ನು ಕೇಳಿದರೂ ನೋಡಿದರೂ ನನ್ನ ಕಾರ್ಯಕ್ಕೆ ಭಂಗಪಡಿಸದೇ ಸುಮ್ಮನೆ ದೂರ ಹೋಗಿರು, ನಾನು ನೆಲಮಾಳಿಗೆಯಲ್ಲಿ ನನ್ನ ಪ್ರಿಯಳ ದುಃಖವನ್ನು ನೋಡುವುದಕ್ಕೂ ಆಕೆಯ ಬೆಟ್ಟಿನಲ್ಲಿರುವ ನನಗೆ ಪ್ರಿಯವಾದ ಉಂಗುರವನ್ನು ತೆಗೆದುಕೊಳ್ಳುವುದಕ್ಕೂ ಹೋಗುತ್ತೇನೆ. ಆದ್ದರಿಂದ ನಾನು ಮಾಡುವುದನ್ನು ಹಣಿಕೆ ನೋಡದೆಯೇ ಹೊರಟು ಹೋಗು: ಹಾಗೆ ಮಾಡದೆ, ನಾನು ಏನು ಮಾಡುತ್ತೇನೋ

ಅದನ್ನು ನೋಡಲು ಏನಾದರೂ ಬಂದರೆ, ಕ್ರೂರ ಸ್ವಭಾವದವನಾದ ನಾನು ನಿನ್ನನ್ನು ತುಂಡು ತುಂಡು ಮಾಡಿ ಈ ಸ್ಮಶಾನದ ನೆಲವನ್ನೆಲ್ಲಾ ನಿನ್ನ ದೇಹದಿಂದ ತುಂಬಿಬಿಡುತ್ತೇನೆ...."(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೧೧೨)

ಈ ದೀರ್ಘವಾದ ಹಾಗೂ ಅರ್ಥವತ್ತಾದ ಮೂಲದ ಭಾವವು ಆನಂದರಾಯರ ಅನುವಾದದಲ್ಲಿ ಕಳಾಹೀನವಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯ. ಕೆಲವೊಮ್ಮೆ ಯಥಾವತ್ತಾದ ಅನುವಾದದ ಸಂದರ್ಭದಲ್ಲಿ ಇಂತಹ ತೊಡಕುಗಳು ಸಹಜ. ಅಲ್ಲದೆ ಒಂದು ಭಾಷೆಯ ಮೂಲ ಅಂತಃಸತ್ವವನ್ನು ಹಿಡಿದಿಡಲು ಅನ್ಯ ಭಾಷೆಯ ಅನುವಾದಕರಿಗೆ ಕಷ್ಟದ ಸಂಗತಿ.

ಬಸವಪ್ಪಶಾಸ್ತ್ರಿಗಳು ೧೮೭೫ರಲ್ಲಿ ಇದೇ ಒಥೆಲ್ಲೋ ನಾಟಕವನ್ನು "ಶೂರಸೇನ ಚರಿತ್ರೆ" ಎಂದು ರೂಪಾಂತರಿಸಿದ್ದಾರೆ. ಆನಂದರಾಯರ ಮಾದರಿಯಲ್ಲಿಯೇ ಶೀರ್ಷಿಕೆ ಹಾಗೂ ಪಾತ್ರಗಳ ಹೆಸರನ್ನು ಬದಲಾಯಿಸಿಕೊಂಡಿದ್ದಾರೆ. ಆನಂದರಾಯರಿಗೆ ಷೇಕ್ಸ್‌ಪಿಯರನನ್ನು ಕಂಡರೆ ಬಹಳ ಒಲವಿದ್ದಂತೆ ಕಾಣುತ್ತದೆ. ಆ ಕೃತಿಯ ಆರಂಭದಲ್ಲಿ ಕೃತಿಕಾರನನ್ನು ಹಾಗೂ ಕೃತಿಯ ಕಥೆಯನ್ನು ಕುರಿತು ಹಾಡೊಂದನ್ನು ರಚಿಸಿದ್ದಾರೆ.

ಭುವನಖ್ಯಾತಾಂಗ್ಲೇಯ ಸು
ಕವಿಯೆನಿಸಿದ ಷೇಕ್ಸಪೀಯರಿಂ ವಿರಚಿತಮಾ ।
ದವುಗಳೊಳುತ್ತಮನಾಟಕ
ಮವಿತಥಮಿವೊಥೆಲೊವೆಂದು ನುಡಿದಪರಲ್ತೆ ॥
ವರನಾಟಕಮನಿದಂ ಸು
ಬ್ಬರಾಯನತಿ ಲಲಿತಶೈಲಿಯೊಳೆ ಕನ್ನಡದೊಳ್ ।
ವಿರಚಿಪ ಕೌತುಕದೆ ಕವಿಶೇ
ಖರನಾದಾ ಬಸವಶಾಸ್ತ್ರಿಯಿಂ ಬರೆಯಿಸಿದಂ ॥
ವಿದಿತಮಿದು ಶೂರಸೇನಾ
ಖ್ಯದೆ ಬಸವಕವೀಂದ್ರನಿಂದೆ ರಚಿತಂ ತಾನಾ ।
ದುದು ಸಂಗೀತ ಸುಸಾಹಿ
ತ್ಯದಿಂದಮೊಡಗೂಡಿ ಜನಕೆ ಜನಿಸುತೆ ಮುದಮಂ ॥
ಕೃತಿಯನಿದಂ ಸ್ವೀಕರಿಸೈ
ನುತಗುಣಯುತ ಕೃಷ್ಣನೃಪತಿ ದಯೆಯಿಂ ಭವದಾ ।

ಶ್ರಿತ ರಾಮಚಂದ್ರರಾಯಾ

ರ್ಪಿತಮಂ ವಿದ್ವಜ್ಜನಾಳಿ ಹೃದಯಂಗಮಮಂ ॥

ಒಥೆಲ್ಲೋ ನಾಟಕದ ಪ್ರಭಾವ ಈ ಕೃತಿಯ ಮೇಲೆ ಇದೆ. (ಆದರೆ ಈ ಕೃತಿಯನ್ನು ಶಾಸ್ತ್ರಿಗಳು ಪೂರ್ಣವಾಗಿ ಬರೆದಿಲ್ಲ. ಅವರು ಮರಣ ಹೊಂದಿದ ಹಿನ್ನೆಲೆಯಲ್ಲಿ ಸಿ.ಸುಬ್ಬರಾಯರು ಇದನ್ನು ಪೂರ್ಣಗೊಳಿಸಿದ್ದಾರೆ). ಇದರಲ್ಲಿ ಒಥೆಲ್ಲೋ-ಶೂರಸೇನ, ಅಯಾಗೋ-ದೇವದತ್ತಮ ಡೆಸ್ಡಿಮೋನಾ-ಮೋಹನೆ, ಎಮಿಲಿಯಾ-ವಿನೀತೆ ಎಂದು ಹೆಸರನ್ನು ಬದಲಾಯಿಸಿದ್ದಾರೆ. ಅಲ್ಲದೆ ರಾಯರಂತೆ ಭಾರತೀಯ ಸಂಸ್ಕೃತಿಗೆ ಒಗ್ಗದ ಭಾಗಗಳನ್ನು ಸಂಪೂರ್ಣವಾಗಿ ಬಿಟ್ಟಿದ್ದಾರೆ.

Lago -Or to be naked with her friend with her
friend in bed
An hour or more, not meaning
any harm?
Othello -Naked in bed, lago
And not mean harm?
It is hypocracy againt the devil.

ಇನ್ನು ಕೆಲವೆಡೆಗಳಲ್ಲಿ ಮೂಲಕ್ಕೆ ಬದಲಾಗಿ ತಮ್ಮದೇ ಆದ ಅಭಿಪ್ರಾಯವನ್ನು ಸೇರಿಸಿದ್ದಾರೆ. ವಿದ್ವಾಂಸರು ಹೇಳುವಂತೆ ಬಸವಪ್ಪಶಾಸ್ತ್ರಿಗಳಿಗೆ ಇಂಗ್ಲಿಷ್ ಬರುತ್ತಿರಲಿಲ್ಲ. ಬೇರೆಯವರ ಸಹಾಯ ಪಡೆದು ಇದನ್ನು ಅನುವಾದಿಸಿದರು. ಆನಂದರಾಯರ ಅನುವಾದದಲ್ಲಿ ಇಂತಹ ದೋಷ ತೀರಾ ಕಡಿಮೆ. ಈ ಭಾಗವನ್ನು ಗಮನಿಸಿ.

Dasdemona : Men's natures wrangle with interior things
Though greatones are their object. 'Tis
Over so for let our finger ache, and it
Indues our other healthful members even to
That sence of pain; nay; We must think; men
Are not gods nor of them look for such obser
Vancy as fits the bridal-Beshrew me much

Emilia I was unhandsome warrior as I am

Arranging his unkindness with my soul,

But now I find, I had suborn'd the witness.

And he's indicted falsely. (III/IV – ಐ.೧೪೫)

**ಅನುವಾದ**

ಮೋಹನೆ: ಓಹೋ, ನಿಜವಾಗಿ ಏನೋ ರಾಜಕಾರ್ಯದಿಂದ ನನ್ನ ಪತಿಯ ನಿರ್ಮಲವಾದ ಮನಸ್ಸು ಕ್ಷೋಭೆಯನ್ನು ಹೊಂದಿರುವನು. ಇಂಥಾ ಸಮಯದಲ್ಲಿ ಆತನನ್ನು ನಿರ್ಬಂಧಪಡಿಸಿದ್ದು ನನ್ನ ತಪ್ಪೆ. ಲೋಕದಲ್ಲಿ ಪುರುಷರು ಒಂದೇ ರೀತಿಯಲ್ಲಿರುವುದಕ್ಕೆ ಅವರೇನು ದೇವತೆಗಳಲ್ಲ. ಸಖಿ, ಪುರುಷರಾದವರಿಗೆ ಸ್ತ್ರೀಯರನ್ನು ವರಿಸುವ ಕಾಲದಲ್ಲಿದ್ದ ಅನುರಾಗ ಯಾವಾಗಲೂ ಸ್ಥಿರವಾದ್ದೆಂದು ಎಣಿಸುವುದು ತಪ್ಪೆ.

ಇನ್ನು ಕೆಲವೆಡೆ ಕೆಲವು ಸಂದರ್ಭಗಳನ್ನು ಪದ್ಯದ ಮಾದರಿಗೆ ಒಳಪಡಿಸಿದ್ದಾರೆ ಹಾಗು ಭಾಷೆ ಸಂಸ್ಕೃತದ ದಾಟಿಯಲ್ಲಿದೆ.

Othello :It is the cause, it is the cause, my soul

Lot me not name it to you, you chastle stars,

It is the cause, yet I'll not shed har blood

Nor scar that white skin of hers than snow

And smooth as monumental alabaster

yet she must die..... ......

**ಶೂರಸೇನ :**

ಕಂ॥ಪರಿಹರಿಪುದು ನಿಶ್ಚಯಮಾ

ದುರ ಮಾ ಮೋಹನೆಯ ದೇಹದಿಂ ರಕ್ತವನಾಂ

ಪೊರೆಮಡಿಸಿ, ಚಂದ್ರಕಾಂತಕೆ

ಸರಿಯಹ ಚರ್ಮವನೆ ಮಾತ್ರ ಕೆಡಿಸುವುದಿಲ್ಲಂ

ಆದರೂ ಅವಳು ಸಾಯಲೇ ಬೇಕು (ಶೂರಸೇನ ಚರಿತ್ರೆ– ಪು. ೧೦೮)

ಆದರೆ ಎಂ.ಎಸ್.ಪುಟ್ಟಣ್ಣನವರು ಭಾಷಾಂತರದ ಸಂದರ್ಭದಲ್ಲಿ ನಾಟಕದ ಮೂಲ ಭಾವವನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಸಿದ್ದಾರೆ. ಅವರು ಕಿಂಗ್‌ಲಿಯರ್ ಅನ್ನು 'ಹೇಮಚಂದ್ರ ರಾಜವಿಲಾಸ' ಎಂದು ೧೮೮೯ರಲ್ಲಿ ಅನುವಾದಿಸಿದರು. ಅದರ ಮುನ್ನುಡಿಯಲ್ಲಿ "ಷೇಕ್ಸ್‌ಪೆಯರ್'ನ ಕೃತಿಗಳಲ್ಲಿ 'ಕಿಂಗ್ ಲಿಯರ್' ಸರ್ವೋತ್ಕೃಷ್ಟವಾದುದು ..... ಇವನ್ನು ಕನ್ನಡಿಗರಿಗೆ ತಿಳಿಸುವ ಉದ್ದೇಶದಿಂದ "ಹೇಮಚಂದ್ರ ವಿಲಾಸ" ಎಂಬ ಹೆಸರಿನಿಂದ ಬರೆದಿದ್ದೇನೆ..... ಕನ್ನಡ ಜನರ ಮತ್ತು ಕನ್ನಡ ಭಾಷೆಯ ತಿಳುವಳಿಕೆ ಮತ್ತು ರೀತಿಗೆ ಅನುಗುಣವಾಗುವಂತೆ ಇಂಗ್ಲೀಷ್ ದೇಶದಲ್ಲಿ ಅನುರೂಪವಾಗಿರತಕ್ಕವುಗಳನ್ನು ಬರೆದು ಕಂಡ ಹಾಗೆ ಮಾಡಿರತಕ್ಕ ವ್ಯತ್ಯಾಸ ಒಂದು. ಮೂಲಕ್ಕೆ ನಾನು ಆಚಾತುರ್ಯದಿಂದ ಅಪಾರ್ಥವನ್ನು ಕಲ್ಪಿಸಿಕೊಂಡು ನಾನು ಕಾಣದ ಹಾಗೆ ಮಾಡಿರುವ ವ್ಯತ್ಯಾಸ ಒಂದು....." ಎಂದಿದ್ದಾರೆ. ಈ ನಾಟಕದ ಒಂದು ಭಾಗ ಇಂತಿದೆ:-

"ಎಲ ಈ ಭೂಮಿಯಲ್ಲಿ ಅಡಗಿಕೊಂಡಿರುವ ಹಿತಕರವಾದ ರಹಸ್ಯಗಳಿರಾ, ಯಾರೂ ಅರಿಯದ ವನೌಷಧಿಗಳಿರಾ, ನನ್ನ ಕಂಣೀರು ಉಕ್ಕಿ ಬರುವಂತೆ ನೀವೂ ಉಕ್ಕಿ ಬಂದು ಆ ಸತ್ಪುರುಷನ ಕಷ್ಟವನ್ನು ತೀವ್ರವಾಗಿ ನಿವಾರಿಸುವುದಕ್ಕೆ ನೀವು ಸಹಕಾರಿಗಳಾಗಿರಿ, ಹುಡುಕಿ, ಆತನನ್ನು ಹುಡುಕಿ, ಇಲ್ಲದಿದ್ದರೆ, ಪ್ರಾಣಧಾರೆಗೆ ಮಾರ್ಗವನ್ನು ತೋರಿಸುವ ಆ ಪ್ರಜ್ಞೆಯು ಇಲ್ಲದೆ ಹುಚ್ಚು ವಿಪರೀತವಾಗಿ ಪ್ರಾಣವೆಲ್ಲಾದರೂ ಹೋದೀತು ...." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ - ೧೧೭)

ಇವರ ನಂತರದಲ್ಲಿ ಬಹಳ ಮುಖ್ಯವಾದ ಆರಂಭಿಕ ಅನುವಾದಕವೆಂದರೆ ಎಂ.ಎಲ್.ಶ್ರೀಕಂಠೇಶ ಗೌಡರವರು ೧೮೮೫ರಲ್ಲಿ ಬರೆದ 'ಪ್ರತಾಪರುದ್ರ ದೇವ'. ಇದು ಇವರ ಮೊದಲ ಅನುವಾದಿತ (ಮ್ಯಾಕ್‌ಬೆತ್) ನಾಟಕ. ನಾಟಕದ ಆರಂಭದಲ್ಲಿ ಈ ಕಂದಪದ್ಯವಿದೆ.

ಕಂದ ॥ ವಾಣಿಯೆ ಕರ್ಣಾಟಕದೊಳ್
ರಾಣಿಯು ಸೋಜಿಗವೆ ಪೇಳೆ ಕಬ್ಬವ ಗೌಡಂ
ಜಾಣರರಿದೋರಿ ನೀವ್ ಬಿ
ನ್ನಾಣವ ಕಾಣುವಿರಿದರೊಳು ಮನ್ನಿಸಿ ತಪ್ಪಂ ॥

ಇವರು ಸಹ ನಾಟಕವನ್ನು ಭಾರತೀಯ ಸಂಸ್ಕೃತಿಗೆ ಒಗ್ಗಿಸಿಕೊಳ್ಳುವ ಪ್ರಯತ್ನ ನಡೆಸಿದ್ದಾರೆ. ಆರಂಭದಲ್ಲಿ ದೇವರನ್ನು ಪ್ರಾರ್ಥಿಸುವ ಸಂಪ್ರದಾಯವನ್ನು ಮಾತ್ರ ಬಿಟ್ಟಿಲ್ಲ. ಇವರು ನಾಟಕದಲ್ಲಿ ಮಾಡಿಕೊಂಡಿರುವ ಬದಲಾವಣೆಯನ್ನು ಕುರಿತು "ನಾಟಕದ ಮೂಲದಲ್ಲಿ ಪ್ರಥಮಾಂಕದಲ್ಲಿ ಪಟ್ಟಣದತ್ತ ಬರುತ್ತಿರುವ ರಾಜನನ್ನು ಆತನ ರಾಣಿಯು ಎದುರುಗೊಳ್ಳುತ್ತಾಳೆ. ಅನುವಾದದಲ್ಲಿ ಆ ರೀತಿ ಇಲ್ಲದೆ ವಿಜಯಧ್ವಜವನ್ನು ಮಿತ್ರನಾದ ವೀರಸೇನನೇ ಎದುರುಗೊಳ್ಳುತ್ತಾನೆ. ಮೂಲದಲ್ಲಿದ್ದಂತೆ ಇಲ್ಲಿಯೂ ಮಾಡಿದ್ದರೆ, ನಮ್ಮ ಸಂಪ್ರದಾಯಕ್ಕೆ ವಿರುದ್ಧವಾಗುತ್ತದೆ. ಯಾಕೆಂದರೆ ನಮ್ಮ ಸಂಪ್ರದಾಯ

ಪ್ರಕಾರ ಸಾಮಾನ್ಯವಾಗಿ ಸ್ತ್ರೀಯರು ಅಂತಃಪುರವನ್ನು ಬಿಟ್ಟು ಹೊರಕ್ಕೆ ಬರುವುದಿಲ್ಲ. ಒಂದು ವೇಳೆ ಹಾಗೆ ಬಂದರೆ ರಾಣಿಯು ಗಂಡುಬೀರಿತನದವಳೆಂಬುದಾಗಿ ಆರೋಪಿಸಬಹುದು" ಎಂದು ಹರಿಕೃಷ್ಣ ಭರಣ್ಯರವರು ಗುರುತಿಸಿದ್ದಾರೆ. ಈ ಸಂದರ್ಭಕ್ಕೆ "ಇದಕ್ಕೆ ಸಮಾಧಾನವನ್ನು ಹೇಳಲು ಸ್ಥಳ ಸಂಕೋಚವಾದ್ದರಿಂದ ನಮ್ಮ ಬಾಲಿಕಾ ಪಾಠಶಾಲೆಯ ಸರಸ್ವತಿಯವರಿಗೂ ಅವರ ಬ್ರಹ್ಮರಿಗೂ ಈ ವಿಷಯವನ್ನು ಬಿಟ್ಟಿರುತ್ತೆ" "(ಪ್ರತಾಪರುದ್ರದೇವ–ಪೀಠಿಕೆ–ಪು. ೨೨) ಎಂದು ಹೇಳಿದ್ದಾರೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ ಆರಂಭದ ನಾಟಕಕಾರರಾದ ಆನಂದರಾಯರು, ಬಸಪ್ಪಶಾಸ್ತ್ರಿಗಳು ಹಾಗೂ ಎಂ.ಎಸ್.ಪುಟ್ಟಣನವರು ಈ ಮಾದರಿಯನ್ನು ಕನ್ನಡಿಗರಿಗೆ ನೀಡಿದರು. ಈ ಮಾದರಿಯ ಜೊತೆಗೆ ಭಾರತೀಯ ಸಂಸ್ಕೃತಿಗೆ ಒಗ್ಗದ ಭಾಗಗಳನ್ನು ತಾರದೆ, ಓದುಗರಿಗೆ ಮುಜುಗರವನ್ನು ಉಂಟುಮಾಡದಂತೆ, ಅನುವಾದಿಸಿದ ಶೈಲಿಯು ಶ್ರೀಕಂಠೇಶಗೌಡರ ನಾಟಕದಲ್ಲಿಯೂ ಅಭಿವ್ಯಕ್ತವಾಗಿದೆ.

ಇಂತಹ ಹೊಸ ಬದಲಾವಣೆ ಹಾಗು ಪ್ರಯತ್ನಗಳಿಗೆ ಅಷ್ಟೇ ಪ್ರಮಾಣದಲ್ಲಿ ಟೀಕೆಗಳು ಎದುರಾದವು. ಶ್ರೀಕಂಠೇಶಗೌಡರ ನಾಟಕ ಕುರಿತಂತೆ ಭಾಷಾಭಿಮಾನಿಯೊಬ್ಬನು ತೀವ್ರವಾಗಿ ಟೀಕಿಸಿ ವಾಗ್ಭೂಷಣಕ್ಕೆ ಒಂದು ಪತ್ರವನ್ನು ಬರೆದಿದ್ದನು. ಅದರಲ್ಲಿ ಮೊದಲನೆಯದಾಗಿ ಇವರ ನಾಟಕದಲ್ಲಿ ಬರೆದಿರುವ ಪದ್ಯಗಳನ್ನು ಕುರಿತು "ಗೌಡರು ಇನ್ನೂ ರೂಢಿಯಿಲ್ಲದ ಪದ್ಯ ಕಾವ್ಯ ಸರಣಿಯನ್ನು ಬರೆಯಲೆತ್ನಿಸದೆ.... ವಚನರೂಪವಾಗಿಯೇ ಬರೆದಿದ್ದರೆ ನೆಟ್ಟಗಿತ್ತು" ಎಂದು ಟೀಕಿಸಿದ್ದಾನೆ. ಆದರೆ ಒಂದು ಹೊಸ ಮಾದರಿ ರೂಪುಗೊಳ್ಳುವ ಸಂದರ್ಭದಲ್ಲಿ ಇಂತಹ ಪ್ರಯತ್ನಗಳು ನಡೆಯುತ್ತವೆ. ಅಲ್ಲದೆ ಅವರು ತಮ್ಮ ಮುನ್ನುಡಿಯಲ್ಲಿ "ನಾಟಕಗಳಿಗೆ ಸಂಗೀತ ಸೇರಿದಂತೆ ಕೆಲವು ಸಂದರ್ಭದಲ್ಲಿ ಶೃಂಗಾರಾದಿ ಕೆಲವು ರಸಗಳೊಡನೆ ಅದು ಬೆರೆಸಿಕೊಂಡು ವಿಶೇಷ ಕುಂದಕ ಮಾಡದಿದ್ದರೂ ಭಯಾನಕ ಮುಂತಾದ ಮತ್ತೆ ಕೆಲವು ರಸಭಂಗವಾಗಿ ಕವಿತಾ ಚಮತ್ಕಾರವನ್ನೆಲ್ಲಾ ಕೆಡಿಸಿ ನಾಟಕವನ್ನು ಅಸಾರವಾಗಿ ಮಾಡುವುದು....." ಎಂದಿದ್ದಾರೆ.

ಈ ಮಾತನ್ನು ಹರಿಕೃಷ್ಣ ಭರಣ್ಯರವರು ನಿರಾಕರಿಸುತ್ತಾರೆ. "ಈ ಮಾತನ್ನು ಪೂರ್ತಿಯಾಗಿ ಹಾಗೆಯೇ ಒಪ್ಪಿಕೊಳ್ಳುವುದು ಕಷ್ಟ. ಪ್ರತಿಯೊಂದು ಭಾವಕ್ಕೂ ಅದನ್ನು ಪ್ರತಿಬಿಂಬಿಸಬಲ್ಲ ರಾಗಗಳ ರಚನೆಗಳಿವೆ. ಆಯಾಯ ಭಾವನೆಗಳಿಗೆ ಅದಕ್ಕೆ ಪರ್ಯಾಯವಾದ ರಾಗದ ಪ್ರಕಾರ ಸಂಗೀತ ಸಂಯೋಜನೆಗಳನ್ನು ಮಾಡಿದರೆ ಅಭಾಸವಾಗಬಾರದು" (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೨೧)ಎಂದಿದ್ದಾರೆ.

ಭಾಷಾಭಿಮಾನಿಯು ಮಾಡಿದ ಮತ್ತೊಂದು ಟೀಕೆಯೆಂದರೆ– ಮೂಲ ನಾಟಕದಲ್ಲಿ ವೀರಸೇನನು (ಮ್ಯಾಕ್‌ಬೆತ್) ನಾಯಕ. ಆದರೆ ಶ್ರೀಕಂಠೇಶಗೌಡರು ಪ್ರತಾಪರುದ್ರದೇವನನ್ನು ನಾಯಕನನ್ನಾಗಿ ಚಿತ್ರಿಸಿದ್ದಾರೆ. ನಾಟಕದ ಶೀರ್ಷಿಕೆಯು 'ಪ್ರತಾಪರುದ್ರದೇವ' ಎಂದೇ ಇದೆ. ಇದಕ್ಕಾಗಿ ಅಭಿಮಾನಿಯು ಹೀಗೆ ವ್ಯತ್ಯಾಸ ಮಾಡಿದ್ದಕ್ಕೆ ಇವರು ಷೇಕ್ಸ್‌ಪಿಯರ್‌ನ ಕ್ಷಮಾಪಣೆಯನ್ನು ಕೇಳಬೇಕು' ಎಂದಿದ್ದಾನೆ.

ಆದರೆ ಇಂತಹ ಬದಲಾವಣೆಗಳ ಅಗತ್ಯತೆ ಅಂದಿನ ಕಾಲಕ್ಕೆ ಅನಿವಾರ್ಯವಾಗಿತ್ತು. ಕನ್ನಡ ಭಾಷೆ ಹಾಗೂ ಸಾಹಿತ್ಯದ ಬಗ್ಗೆ ಜನರಲ್ಲಿ ಮೂಡಿದ್ದ ಅನಾಧಾರವನ್ನು ನಿವಾರಣೆ ಮಾಡಲು ಇದ್ದ ಮಾರ್ಗಗಳಲ್ಲಿ ಇದೂ ಒಂದು. ಅಲ್ಲದೆ ಹೊಸ ಪ್ರಯತ್ನಗಳಿಗೆ ಇಂತಹ ಬದಲಾವಣೆ ಅಗತ್ಯವಾಗಿತ್ತು.

ಇದಲ್ಲದೆ ಕೃತಿಯ ಸ್ವಾರಸ್ಯದ ಬಗ್ಗೆ ಶ್ರೀಕಂಠೇಶಗೌಡರು 'ಮೂಲಗ್ರಂಥದ ಯಾವ ಭಾಗದಲ್ಲಿ ಸ್ವಾರಸ್ಯವು ಒಪ್ಪುವುದೋ ಭಾಷಾಂತರಿಸಿದ ಗ್ರಂಥದ ಆ ಭಾಗದಲ್ಲಿ ಇಲ್ಲದಿದ್ದರೂ ಒಟ್ಟು ಗ್ರಂಥದಲ್ಲಿದ್ದರೆ ಎರಡೂ ಗ್ರಂಥಗಳಲ್ಲಿಯೂ ಸ್ವಾರಸ್ಯವೆಂಬುದು ಒಂದೇಯಾಗಿ ತಾನೇ ಇರುವುದು' ಎಂದಿದ್ದರೆ; ಭಾಷಾಭಿಮಾನಿಯು ರಸವೆಂಬುದು ಉಚಿತ ಸ್ಥಾನದಲ್ಲಿ ಬರತಕ್ಕಂಥದ್ದು; ಭಾಷಾಂತರದಲ್ಲಿ ಸಿಕ್ಕಸಿಕ್ಕಲ್ಲಿ ಇಡುವುದಾದರೆ ಹೇಗೆ" (ಹೊಸಗನ್ನಡದ ಅರುಣೋದಯ– ಪು. ೪೨೧) ಎಂದು ಮರುಪ್ರಶ್ನಿಸಿದರು. ಇದಕ್ಕೆ ಪೂರಕವಾಗಿ ಉತ್ತರವಾಗಿ ಕೊಟ್ಟ ಕರಿಬಸವಶಾಸ್ತ್ರಿಗಳ ಮಾತು ಇಲ್ಲಿ ಅನ್ವಯಿಸುತ್ತವೆ.

ಗೌಡರಿಗೆ ಕನ್ನಡತನಕ್ಕೆ ಒಗ್ಗದ ಒಂದು ಕೃತಿಯನ್ನು ಅನುವಾದಿಸುವಾಗ ಅನೇಕ ಸಮಸ್ಯೆಗಳು ಎದುರಾಗಿದೆ. ಆದರೆ ಅವರ ಮುಂದಿನ ನಾಟಕವಾದ 'ಪ್ರಮಿಳಾರ್ಜುನಿಯಂ' ನಾಟಕದಲ್ಲಿ ಅವರ ಪಾಂಡಿತ್ಯವನ್ನು ಕಾಣಬಹುದು. ಇದು ಶೇಕ್ಸ್‌ಪಿಯರ್‌ನ 'A midsummer nights Dream' ನಾಟಕದ ರೂಪಾಂತರವೇ. 'ಪ್ರತಾಪರುದ್ರದೇವ' ನಾಟಕದ ಪ್ರಭಾವವು ಈ ಕೃತಿಯ ಮೇಲಿದೆ. ಅಂದರೆ ಅಲ್ಲಿ ಉಂಟಾದ ತೊಡಕುಗಳು ಇಲ್ಲಿ ಸಾಕಷ್ಟು ಪರಿಹಾರ ಕಂಡುಕೊಂಡಿವೆ. ಶ್ರೀನಿವಾಸ ಹಾವನೂರರು ಗುರುತಿಸುವಂತೆ. ".....ಪ್ರಮೀಳಾರ್ಜುನೀಯದಲ್ಲಿ ಕಟ್ಟುವ ಮಡಿವಾಳ ಮಾಚಯ್ಯ ಸಂಗಡಿಗರು, ಸೀತಾಸ್ವಯಂವರದಲ್ಲಿನ ಭೂ ಭೋಜನದ ಬ್ರಾಹ್ಮಣರು, ಇವು ಅತ್ಯಂತ ಹೃದ್ಯವಾಗಿದ್ದು, ಅವರ ಕಲ್ಪಕಥೆ ತಾನೇ ತಾನಾಗಿ ಅರಳಿವೆ ........ ಎರಡೇ ವರ್ಷದ ಅವಧಿಯಲ್ಲಿ ತಮ್ಮ ಹೆಚ್ಚಿನ ಕೃತಿಗಳನ್ನು ಬರೆದು ಮುಗಿಸಿದ ಶ್ರೀಕಂಠೇಶಗೌಡರ ಪ್ರತಿಭೆ ನಿಸ್ಸಂಶಯವಾಗಿ ಮೇಲ್ಮಟ್ಟದ್ದು" (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ ಪು. ೧೨೧)ಎಂದಿದ್ದಾರೆ.

ಅಂದರೆ ಪ್ರತಾಪರುದ್ರದೇವ ನಾಟಕದ ನಂತರದಲ್ಲಿ ರಚನೆಯಾದ ಈ ಎರಡೂ ನಾಟಕಗಳಲ್ಲಿ ಇಂಗ್ಲಿಷ್‌ನ ಕೃತಿಯಲ್ಲಿ ಇಲ್ಲದ ಎರಡು ಸನ್ನಿವೇಶಗಳನ್ನು ಗೌಡರು ಸೃಷ್ಟಿಸಿದ್ದಾರೆ. ಆದರೆ ಎಲ್ಲೂ ಅದು ಅನುಚಿತವಾಗಿದೆ ಎಂದೆನಿಸುವುದಿಲ್ಲ. ಮುಂದೆ ಇದೇ ರೀತಿಯ ರೂಪಾಂತರ ನಾಟಕಗಳನ್ನು ಬರೆದವರಲ್ಲಿ ಕೆರೂರ ವಾಸುದೇವಾಚಾರ್ಯರು ಪ್ರಮುಖರು. ಇವರಿಗೆ ಶ್ರೀಕಂಠೇಶಗೌಡರ ಕೃತಿಗಳ ಪರಿಚಯ ಸಾಕಷ್ಟಿತ್ತು. ಇವರು ಮೊದಲು ಒಲಿವರ್ ಗೋಲ್ಡ್‌ಸ್ಮಿತ್‌ನ 'ಶಿ ಸ್ಟೂಪ್ಸ್ ಟು ಕಾನ್‌ಕರ್' ಅನ್ನು 'ಪತಿವಶೀಕರಣ' ಎಂಬುದಾಗಿ ಅನುವಾದಿಸಿದರು. ನಂತರ ಶೇಕ್ಸ್‌ಪಿಯರ್‌ನ 'A Mid Summer Night Dream' ನಾಟಕವನ್ನೇ 'ವಸಂತ ಯಾಮಿನೀ ಸ್ವಪ್ನ ಚಮತ್ಕಾರ ನಾಟಕ'ವೆಂದು ರೂಪಾಂತರಿಸಿದ್ದಾರೆ. ಅಲ್ಲದೆ ಶ್ರೀಕಂಠೇಶಗೌಡರ ನಾಟಕಕ್ಕೆ ಭಾಷಾಭಿಮಾನಿಯು ಬರೆದಿದ್ದ ಟೀಕೆಯ ಪರಿಚಯವಿತ್ತು. ಆದ್ದರಿಂದಲೇ ಮುನ್ನೆಚ್ಚರಿಕೆಯಾಗಿ ಈ ಕೃತಿಯಲ್ಲಿ ಅನುವಾದ ಮತ್ತು ರೂಪಾಂತರಗಳ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

೧. ಮೂಲಗ್ರಂಥಗಳಲ್ಲಿ ಕಂಡುಬರುವ ಪಾತ್ರಗಳ ಹೆಸರು ಮೊದಲಾದವುಗಳನ್ನು ಹಾಗೆಯೇ ಇಟ್ಟುಕೊಂಡು ಕಥಾಭಾಗವನ್ನು ಮಾತ್ರ ಕನ್ನಡದಲ್ಲಿ ಬರೆಯುವುದು.

೨. ಎಲ್ಲಾ ಪಾತ್ರ ಪ್ರದೇಶಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟು ಬೇಕಾದರೆ ಅಲ್ಲಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಮಿಕ್ಕೆಲ್ಲಾ ಭಾಗಗಳನ್ನು ಕ್ರಮವಾಗಿ ಭಾಷಾಂತರಿಸುವುದು.

೩. ಮೂಲದ ಆಧಾರದ ಮೇಲೆ ನಮ್ಮ ಜನರ ನಡವಳಿಕೆ ಮತ್ತು ಭಾಷೆಗಳಿಗೆ ತಕ್ಕಂತೆ ನಮಗೆ ಸ್ವಾಭಾವಿಕವಾಗಿ ತೋರುವ ಹಾಗೆ ಪರಕೀಯವಾದ ವಸ್ತುವನ್ನು ಸ್ವತಂತ್ರಕೃತವೆಂಬ ಭ್ರಾಂತಿಯುಂಟಾಗುವಂತೆ ಮಾಡುವುದು. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ ಪು. ೧೨೨)

ಕೆರೂರರು ಗೌಡರಂತೆಯೇ ಪಾತ್ರಗಳ ಹೆಸರನ್ನು ಹೀಗೆ ಬದಲಾಯಿಸಿಕೊಂಡಿದ್ದಾರೆ. ಥೀಸಿಯಸ್– ಸುಬಾಹು, ಲಾಯ್ಸಾಂಡರ್– ಧೃತಿವರ್ಮ, ದೆಮಿಟ್ರಿಯಸ್–ದೃಢವರ್ಮ, ಹರ್ಮಿಯಾ–ಊರ್ಮಿಲಾ, ಹೆಲೀನಾ–ಶಾಮಲಾವಾಗಿದೆ. ಇದು ಕೂಡ ಭಾರತೀಯ ಸಂಸ್ಕೃತಿಯ ಚಿಂತನೆಗಳಿಗೆ ಒಳಗೊಂಡಂತೆ ರಚನೆಯಾಗಿದೆ. ಅಲ್ಲದೆ ಶೈಲಿಯೂ ಗೌಡರ ಕೃತಿಯ ಶೈಲಿಗೆ ಸಾಮ್ಯತೆಯಿವೆ.

ಮುಂದೆ ಇಂತಹ ಪ್ರಯತ್ನಗಳು ಸಾಕಷ್ಟು ನಡೆಯಿತು. ಇಂಗ್ಲೀಷಿನ 'The taming of the shrew' ನಾಟಕವನ್ನು 'ಗಯ್ಯಾಳಿಯನ್ನು ಸಾಧುಮಾಡುವಿಕೆ', 'cymbaline' ನಾಟಕವನ್ನು ಜಯಸಿಂಹರಾಜ ಚರಿತ್ರೆ, 'Machbeth' ಅನ್ನು ಪ್ರತಾಪಸಿಂಹ ಚರಿತ್ರೆ ನಾಟಕ ಹೀಗೆ ಅನೇಕ ನಾಟಕಗಳು ಒಂದಿಲ್ಲೊಂದು ರೀತಿಯಲ್ಲಿ ಅನುವಾದಗೊಂಡವು. ಆದರೆ ಆನಂದರಾಯ, ಎಂ.ಎಸ್.ಪುಟ್ಟಣ್ಣ, ಬಸವಪ್ಪ ಶಾಸ್ತ್ರಿ, ಶ್ರೀಕಂಠೇಶಗೌಡರಂತೆ ರೂಪಾಂತರಗೊಳಿಸುವ ಸಂದರ್ಭದಲ್ಲಿ ಭಾರತೀಯ ಸಂಸ್ಕೃತಿಗೆ ಒಗ್ಗದ ವಿಚಾರಗಳನ್ನು ತಿರಸ್ಕರಿಸಿದಂತೆ; ಇದಕ್ಕೆ ವಿರುದ್ಧವಾದ ರೀತಿಯಲ್ಲಿ ಬಹಳ ಮುಕ್ತವಾಗಿ ಅಂತಹ ಪ್ರಸಂಗಗಳನ್ನು ತಂದರು. ಇಂತಹ ಪ್ರಯತ್ನ ನಡೆಸಿದವರಲ್ಲಿ ಕೆ.ಲಕ್ಷ್ಣರಾಯರು ಒಬ್ಬರು. ೧೯೧೦ರಲ್ಲಿ ಷೇಕ್ಸ್‌ಪಿಯರ್‌ನ 'The taming of the shrew' ನಾಟಕವನ್ನು 'ಚಂಡೀ ಮರ್ದನ ನಾಟಕ' ಎಂದು ರೂಪಾಂತರಿಸಿದರು.

ಮೂಲದಲ್ಲಿರುವ ಲೈಂಗಿಕತೆ ಹಾಗೂ ಅಶ್ಲೀಲತೆಯ ಪ್ರಸಂಗಗಳನ್ನು ಅನುವಾದದಲ್ಲೂ ಯಥಾವತ್ತಾಗಿಯೇ ತಂದಿದ್ದಾರೆ. ಇದರಲ್ಲಿಯೂ ಸ್ತ್ರೀ–ಪುರುಷರು ಆಲಿಂಗಿಸಿ ಚುಂಬಿಸುವ ದೃಶ್ಯವನ್ನು ತಂದಿದ್ದಾರೆ. ಇಂತಹ ಅನೇಕ ಸಂದರ್ಭಗಳು ಈ ನಾಟಕದಲ್ಲಿವೆ. ಇಂಥ ಸನ್ನಿವೇಶಗಳನ್ನು ಮೊದಲಿಗೆ ತಂದವರು ಇವರೆ. ೧೯೦೬ರಲ್ಲಿಯೇ ಇವರು ಬರೆದಿದ್ದ ಸ್ವತಂತ್ರ ಸಾಮಾಜಿಕ ನಾಟಕವಾದ "ಸುವದನಾ ಭಾಸ್ಕರ"ದಲ್ಲಿ ಆಲಿಂಗನದ ವಿಚಾರವಿದೆ. ಇಂತಹ ವಿಚಾರಗಳು ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೇ ಆಗಿದೆ. ಹೀಗೆಯೇ ಅನುವಾದ ಕೃತಿಗಳು ಮುಂದೆ ಬಂದಂತಹ ಸ್ವತಂತ್ರ ನಾಟಕಗಳ ಮೇಲೆ ಪ್ರಭಾವವನ್ನು ಉಂಟುಮಾಡಿದವು.

೧೯೦೧ರ ವೇಳೆಗೆ ಶ್ರೀಕಂಠೇಶಗೌಡರು ಸಂಸ್ಕೃತ ನಾಟಕವೊಂದನ್ನು ಅನುವಾದಿಸಿದರು. ಸಂಸ್ಕೃತ ನಾಟಕವಾದ 'ಜಾನಕೀಪರಿಣಯ'ವನ್ನು 'ಸೀತಾಸ್ವಯಂವರ' ಎಂದು ರೂಪಾಂತರಿಸಿದ್ದಾರೆ. ಇಂಗ್ಲಿಷ್ ನಾಟಕದ ಪ್ರಭಾವ ಈ ನಾಟಕದಲ್ಲಿ ಕಾಣಬಹುದು. ಇದರ ಮುನ್ನುಡಿಯಲ್ಲಿ ಅನುವಾದದ ಭಾಷೆ ಮತ್ತು ಶೈಲಿ ಕುರಿತು ಹೀಗೆ ಹೇಳಿದ್ದಾರೆ "ಈ ನಾಟಕ ವಿಶಿಷ್ಟ ನವೀನವಲ್ಲದಿದ್ದರೂ ಪ್ರಥಮ ಭಾಗದಲ್ಲಿ ಅನುಸರಿಸಿರುವ ಜಾನಕೀಪರಿಣಯವೆಂಬ ಸಂಸ್ಕೃತ ನಾಟಕಕ್ಕೂ ಇದಕ್ಕೂ ಅನೇಕ ವ್ಯತ್ಯಾಸಗಳಿವೆ. ಈ ರೀತಿ ವ್ಯತ್ಯಾಸವನ್ನು ಏತಕ್ಕಾಗಿ ಮಾಡಿದೆ. ಅದರಿಂದ ವಿಶೇಷ ಗುಣವೇನಾದೂ ಇದೆಯೆ ಎಂದು ತಿಳಿಯತಕ್ಕವರು ಈ ರಾಮಕಥೆಯಿಂದ ಫಣಿರಾಯನಿಗೆ ಹೊರೆ ಹೆಚ್ಚಾದಂತೆ ಭಾವಿಸಲಾರರು. ನೋಟಕರಿಗೆ ಮನೋರಂಜಕವಾಗಿರಬೇಕೆನ್ನುವುದನ್ನು ನಾಟಕಕ್ಕೆ ಮುಖ್ಯವಾಗಿ ಅಂಗವಾಗಿ ಇಟ್ಟುಕೊಳ್ಳುವ ಪಕ್ಷದಲ್ಲಿ ಈ ನಾಟಕದಲ್ಲಿ ವಿಶೇಷ ಗುಣ ತೋರಬಹುದು. ಇದನ್ನು ಅನೇಕ ವೇಳೆ ಆಡಿ ಪಂಡಿತಪಾಮರರಿಗೆ ಸಂತೋಷವನ್ನುಂಟು ಮಾಡಿದೆ. ಆದರೆ ಈ ನಾಟಕ ಬರೆಯಬೇಕಾದರೆ ಕಾಲೋಚಿತವಾದ ಕನ್ನಡವನ್ನು ವಿಶೇಷವಾಗಿ ಪ್ರಯೋಗಿಸಬೇಕಾಗುವುದು. ಅದು ಕಾರಣ ನಾಟಕದಲ್ಲಿ ಗದ್ಯಮಾತ್ರದಲ್ಲಿ ಅಲ್ಲದೆ ಪದ್ಯಗಳಲ್ಲೂ ಕೆಲವು ಮಟ್ಟಿಗಾದರೂ ಹೊಸಗನ್ನಡವನ್ನು ಸೇರಿಸದಿದ್ದರೆ ಅವು ನಾಟಕ ಶಾಲೆಗೆ ಉಪಯೋಗವಾಗುವುದಿಲ್ಲ. ಈ ರೀತಿ ಪದ್ಯಗಳನ್ನು ಬರೆಯುವುದು ಶಬ್ದ ಸಂಗ್ರಹಣಕ್ಕೆ ಮಾತ್ರ ಕನ್ನಡ ಅಭ್ಯಾಸ ಮಾಡುತ್ತಿರುವ ಈ ಕಾಲದಲ್ಲಿ ಕೆಲವು ಜನಗಳಿಗೆ ಸಮರ್ಪಕವಾಗಿರಲಾರದು. ಇದಕ್ಕೆ ವಿಷಾದಿಸಬೇಕಲ್ಲದೆ ಅವರು ಹೇಳುವ ರೀತಿ ನೋಟಕರಿಗೆ ಅನುಪಂಯೋಗವಾಗದ ರೀತಿಂಯುಲ್ಲಿ ಪ್ರವರ್ತಿಸುವುದಕ್ಕಾಗುವುದಿಲ್ಲ."(ವಸಾಹತುಶಾಹಿ ಮತ್ತು ಭಾಷಾಂತರ–ಪು. ೯೧) ಇಲ್ಲಿ ನಾಟಕವನ್ನು ರಚಿಸುವ ಉದ್ದೇಶವೂ ಸ್ಪಷ್ಟವಾಗಿದೆ. ಪ್ರೇಕ್ಷಕರ ಮನರಂಜನೆಗೆ ಹಾಗು ನಾಟಕ ಪ್ರದರ್ಶನಕ್ಕೆ ಅನುಕೂಲವಾಗಿ ರಚಿಸುವುದು ಬಹಳ ಮುಖ್ಯ ಎಂಬುದು ಇಲ್ಲಿ ವ್ಯಕ್ತವಾಗಿದೆ. ಪೂರ್ವದಲ್ಲಿ ಸಾಹಿತ್ಯವು ಕೇವಲ ಪಾಂಡಿತ್ಯಕ್ಕಾಗಿ ಎಂಬತೆ ಇದ್ದ ಆಲೋಚನೆ ಇಲ್ಲಿ ಇಲ್ಲವಾದುದು ಹೊಸಗನ್ನಡದ ಚಿಂತನೆಗಳಲ್ಲಿ ಒಂದಾಗಿದೆ.

ಅಲ್ಲದೆ ಸಂಸ್ಕೃತ ನಾಟಕಗಳನ್ನು ರಂಗಪ್ರದರ್ಶನಕ್ಕೆ ಒಳಪಡಿಸಲು ಇರುವ ತೊಂದರೆಗಳನ್ನು ಕುರಿತು ಈ ರೀತಿ ವ್ಯಂಗವನ್ನಾಡಿದ್ದಾರೆ "ನಟಿ– ಆ ಹತ್ತು ತಲೆ ಇಪ್ಪತ್ತು ತೋಳುಗಳುಳ್ಳ ರಾವಣನನ್ನು ನಾವು ನಮ್ಮ ರಂಗ ಸ್ಥಳದಲ್ಲಿ ತೋರಿಸುವುದು ಹೇಗೆ? ಅಂತಹ ಪುರುಷನೆಲ್ಲಿರುವನು? ಅದಕ್ಕಿನ್ನೇನಾದರೂ ಉಪಾಯವನ್ನು ಮಾಡಿದರೆ, ಅಂತಹವನನ್ನು ಕಂಡ ಕೂಡಲೆ ಈ ಕಾಲದ ಶಾಸ್ತ್ರಜ್ಞರು ಲೋಕ ವಿರುದ್ಧವಾದ ಈ ಮೃಗವೆಲ್ಲಿಂದ ಬಂದಿತು. ಇವನ್ನು ವಸ್ತು ಪ್ರದರ್ಶನ ಶಾಲೆಯಲ್ಲಿಡಿರಿ ಎನ್ನುವರು. ಅಥವಾ ಒಂದು ತಲೆಯ ಎರಡು ತೋಳುಗಳುಳ್ಳ ಸಾಮಾನ್ಯ ಪುರುಷನನ್ನು ದಶಾನನನೆಂದು ರಂಗಸ್ಥಳಕ್ಕೆ ಕರೆದುಕೊಂಡು ಬಂದರೆ ರಸಿಕರಾದ ಈ ಸಭಾಜನರೇನೆಂದಾರು?

ಈ ಆಲೋಚನೆಯು ಪಾಶ್ಚಾತ್ಯ ನಾಟಕಗಳ ಮುಖಾಂತರ ಗೌಡರಿಗೆ ಬಂದಿದೆ. ಆದ್ದರಿಂದಲೇ ಆಧುನಿಕ ನಾಟಕ ತಂತ್ರಗಳನ್ನು ಇದರಲ್ಲಿ ಬಳಸಲಾಗಿದೆ. ಅಲ್ಲದೆ ಪೌರಾಣಿಕ ನಾಟಕಗಳು

ವಾಸ್ತವತೆಯನ್ನು ಕಟ್ಟುವಲ್ಲಿ ಸೋತಿರುವುದನ್ನು ಇವರು ಗುರುತಿಸಿದ್ದಾರೆ. ಹೀಗೆ ಅನೇಕ ಬದಲಾವಣೆಗಳು ನಾಟಕ ರಚನೆಯಲ್ಲಿ ಕಾಲಾನುಕ್ರಮದಲ್ಲಿ ಕಾಣಿಸಿಕೊಂಡವು.

ಇಂತಹ ಹೊಸ ಮಾದರಿಗಳಲ್ಲಿ ಪಾಶ್ಚಾತ್ಯ ಸಾಹಿತ್ಯದಿಂದ ದೊರೆತ ಮತ್ತೊಂದು ಮಾದರಿಯೆಂದರೆ ದುರಂತ ನಾಟಕ. ಇದು ಗ್ರೀಕ್ ನಾಟಕದ ಶೈಲಿ. ಇಂಗ್ಲಿಷ್‌ನ ರೋಮಿಯೋ ಜೂಲಿಯಟ್‌ನ ನಾಟಕದ ಅನುವಾದದೊಂದಿಗೆ ಕನ್ನಡಕ್ಕೆ ದುಃಖಾಂತ ನಾಟಕ ಪ್ರವೇಶವಾಯಿತು. ಕನ್ನಡ ಇಲ್ಲವೆ ಭಾರತೀಯ ಮನೋಧರ್ಮದಲ್ಲಿ ಸುಖಾಂತಕ್ಕೇ ಪ್ರಾಶಸ್ತ್ಯ. ಕನ್ನಡದಲ್ಲಿ ದುಃಖಾಂತ ನಾಟಕವನ್ನು ಮೊದಲು ರಚಿಸಿದವರು ಕೆ.ನರಸಿಂಗರಾಯರು. ಇವರ 'ದೇವದತ್ತ' ನಾಟಕವು ೧೯೨೦ರಲ್ಲಿ ರಚನೆಯಾಯಿತು. ಇದರ ಪೀಠಿಕೆಯಲ್ಲಿ "ಈ ಸಂಕ್ಷೇಪವಾದ ವಿಷಾದಾಂತ ನಾಟಕವನ್ನು ವಿರಚಿಸಿ ಪೂರ್ವ ಸಂಪ್ರದಾಯವನ್ನು ಅತಿಕ್ರಮಿಸಿರುವೆನು... ಮೋದಾಂತ ನಾಟಕದಿಂದ ಹೊರಡುವ ನೀತಿಗಿಂತಲೂ ಖೇದಾಂತ ನಾಟಕದ ನೀತಿಯು ಗುರುತರವಾದುದೆಂದು ಈ ಪಥವನ್ನು ತುಳಿದಿರುವೆನು..." ಎಂದಿದ್ದಾರೆ.

ನಂತರದಲ್ಲಿ ಬಿ.ಎಂ.ಶ್ರೀಯವರ 'ಅಶ್ವತ್ಥಾಮನ್' ಕೂಡ ದುರಂತ ನಾಟಕ. ಇದು ಪೂರ್ಣಪ್ರಮಾಣದಲ್ಲಿ ಗ್ರೀಕ್‌ನ ರುದ್ರನಾಟಕದ ತಂತ್ರವನ್ನು ಅನುಸರಿಸಿದೆ. ಆದರೆ ಈ ಮಾದರಿಯು ಭಾರತೀಯ ಮನಸ್ಥಿತಿಗೆ ಹೆಚ್ಚು ಹಿತವಾಗಿಲ್ಲವಾದರೂ ಹೊಸ ಮಾದರಿಯು ಪ್ರವೇಶವನ್ನು ಪಡೆಯಿತು.

ಒಟ್ಟಾರೆಯಾಗಿ ಹೇಳುವುದಾದರೆ ಇಂಗ್ಲಿಷ್‌ನ ಅನುವಾದ ನಾಟಕಗಳು ಕನ್ನಡದ ಐತಿಹಾಸಿಕ ನಾಟಕಗಳಿಗೆ ಹೊಸ ಆಲೋಚನೆಗಳನ್ನು ತಂದುಕೊಟ್ಟಿದೆ. ಈ ನಾಟಕಗಳ ಶೈಲಿ, ಭಾಷೆಯನ್ನು ಗಮನಿಸಿದರೆ ಪೂರ್ವದ ಸಾಹಿತ್ಯದ ಆಶಯಗಳಿಂದ ಹೊರಬಂದು ಹೊಸತನ್ನು ಕಟ್ಟಿಕೊಳ್ಳಬೇಕೆಂಬ ತುಡಿತ ವ್ಯಕ್ತವಾಗುತ್ತವೆ. ಅಲ್ಲದೆ ಮುಂದಿನ ಸಾಹಿತ್ಯಕರಿಗೆ ಹೊಸ ಮಾದರಿಗಳನ್ನು ಹಾಗೂ ಚಿಂತನೆಗಳನ್ನು ನೀಡಿದೆ. ಇಲ್ಲಿಯ ಪರಿಸರ, ಜನರ ಜೀವನ, ಆಲೋಚನೆಗಳು ಕೂಡ ಈ ನಾಟಕಗಳ ಮೂಲಕ ಕನ್ನಡ ಪರಿಸರವನ್ನು ಪ್ರವೇಶಿಸಿದವು ಅನುವಾದದ ವಿಭಿನ್ನ ನೆಲೆಗಳು ಇವರಲ್ಲಿ ಕಾಣಬಹುದಾಗಿದೆ. ಅಲ್ಲದೆ ಒಂದು ನಾಟಕದ ಮೇಲೆ ಇನ್ನೊಂದರ ನೆರಳಿರುವುದು ಕಾಣಬಹುದಾಗಿದೆ.

## ೪. ಸಾಮಾಜಿಕ ನಾಟಕಗಳು

೧೮೮೦-೯೦ರ ವೇಳೆಯಲ್ಲಿ ನಾಟಕಗಳ ರಚನೆಯು ಹೊಸ ಹಾದಿಯನ್ನು ಕಂಡಿತ್ತು. ಸಂಸ್ಕೃತ ಹಾಗೂ ಇಂಗ್ಲಿಷ್ ಭಾಷೆಯ ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳು ಯಥೇಚ್ಛವಾಗಿ ಅನುವಾದಗೊಳ್ಳುತ್ತಿದ್ದ ಕಾಲ. ಸಾಮಾಜಿಕ ನಾಟಕಗಳು ಅನ್ಯ ಭಾಷೆಗಳಿಂದ ಪೂರ್ಣಪ್ರಮಾಣದಲ್ಲಿ ಅನುವಾದಗೊಂಡಿರಲಿಲ್ಲ. ಐತಿಹಾಸಿಕ ನಾಟಕಗಳ ಕೆಲವು ಸಂದರ್ಭದಲ್ಲಿ ಮಾತ್ರ, ಇಂತಹ ಸಂದರ್ಭದಲ್ಲಿ ಎರಡು ವಿಭಿನ್ನವಾದ ಸಾಮಾಜಿಕ ನಾಟಕಗಳು ಏಕಕಾಲಕ್ಕೆ ರಚನೆಯಾದವು.

ಕನ್ನಡದಲ್ಲಿ ಸಾಮಾಜಿಕ ನಾಟಕಗಳು ೧೮೮೭ರಲ್ಲಿ ಸೂರಿ ವೆಂಕಟರಮಣ ಶಾಸ್ತ್ರಿಯವರ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ಮತ್ತು ಶಿವರಾಮ ಧಾರೇಶ್ವರರ 'ಕನ್ಯಾವಿಕ್ರಯ' ಇವು ಹವ್ಯಕ ಸಮಾಜದಲ್ಲಿ ಸ್ತ್ರೀಯರ ಬದುಕನ್ನು ಹಾಗೂ ಅಲ್ಲಿನ ವ್ಯವಸ್ಥೆಯನ್ನು ತಿಳಿಸುವ ನಾಟಕಗಳಾಗಿವೆ. ಶ್ರೀನಿವಾಸ ಹಾವನೂರರು ಹೇಳುವಂತೆ "ಈ ನಾಟಕಕಾರರಿಬ್ಬರೂ ಮುಂಬಯಿಯಲ್ಲಿಯೇ ನೆಲೆಸಿದವರು; ಪರಸ್ಪರ ಪರಿಚಯವುಳ್ಳವರು, ಸಮಾನವಾದ ಕಥಾವಸ್ತುವನ್ನು ಒಂದೇ ಸಮಯಕ್ಕೆ ಇವರು ಕೈಗೆತ್ತಿಕೊಂಡುದು ಸೋಜಿಗವೆನಿಸುತ್ತವೆ". ಎಂದಿದ್ದಾರೆ.

ಆದರೆ ಹಾವನೂರರು ಹೇಳುವಂತೆ ಇವರು ನೆಲೆಸಿದ್ದು ಮುಂಬಯಿಯಲ್ಲಿ ಅಂದರೆ ಮಹಾರಾಷ್ಟ್ರದ ಪರಿಸರ. ೧೮೮೦ರ ವೇಳೆಗಾಗಲೇ ಮಹಾರಾಷ್ಟ್ರದಲ್ಲಿ ಸ್ತ್ರೀಪರವಾದ ಚಿಂತನೆಗಳು ಹೊಸ ಕ್ರಾಂತಿಯನ್ನು ಉಂಟು ಮಾಡಿದ್ದವು. ಅನೇಕ ಚಳುವಳಿಗಳು ನಡೆದಿದ್ದವು. ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಬಾಲ್ಯವಿವಾಹ ಕುರಿತಂತೆ ಸಾಕಷ್ಟು ಚರ್ಚೆಗಳು ನಡೆದು ಅದಕ್ಕೆ ಸಂಬಂಧಿಸಿದಂತೆ ಲೇಖನಗಳು ಪ್ರಕಟಗೊಂಡಿದ್ದವು. 'ಅಬಲೋನ್ನತಿ ಲೇಖಮಾಲಾ' ಮರಾಠಿಯ ಅನುವಾದವೇ ಆಗಿದೆ. ಅಲ್ಲದೇ ಈ ವೇಳೆಗಾಗಲೇ ಸ್ತ್ರೀಪರ ಚಿಂತನೆಯ ಕಾದಂಬರಿಗಳು, ನಾಟಕಗಳು ಮರಾಠಿಯಲ್ಲಿ ರಚನೆಯಾಗಿದ್ದವು. ಇಂತಹ ಪರಿಸರದಲ್ಲಿದ್ದ ಈ ಇಬ್ಬರಿಗೂ ತಮ್ಮ ಸಮಾಜದಲ್ಲಿದ್ದ ಸಮಸ್ಯೆಗಳು ಗೋಚರಿಸಿರಬಹುದು. ಅದನ್ನೇ ಈ ನಾಟಕಗಳ ವಸ್ತುವಾಗಿಸಿಕೊಂಡು ಬರೆದರು. ಇವರಲ್ಲಿ ಸ್ತ್ರೀ ಶೋಷಣೆಯ ವಿರುದ್ಧದ ದನಿ ಇದೆ.

ಈ ನಾಟಕಗಳಲ್ಲಿ ವ್ಯಕ್ತವಾಗಿರುವಂತೆ ಅಂದಿನ ಹವ್ಯಕ ಬ್ರಾಹ್ಮಣ ಸಮಾಜದಲ್ಲಿ ಕನ್ಯಾಶುಲ್ಕ, ವಿಷಮ ವಿವಾಹ ಇದ್ದವು ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಪರಿಹಾರವಾಗಿ ಧಾರೇಶ್ವರರು ತಮ್ಮ ನಾಟಕದಲ್ಲಿ ಕನ್ಯಾಶುಲ್ಕವನ್ನು ತೆಗೆದುಕೊಳ್ಳಬಾರದೆಂಬ ಬಗ್ಗೆ ಮಠಾಧೀಶರು ಆಜ್ಞಾಪತ್ರವನ್ನು ಹೊರಡಿಸಿದಂತೆ ಮಾಡಿದ್ದು ಒಂದು ಹೊಸ ಚಿಂತನೆ. ಏಕೆಂದರೆ ಅಂದಿನ ಸಮಾಜದಲ್ಲಿ ಮಠಾಧಿಪತಿಗಳಿಗೆ ಹೆಚ್ಚಿನ ಅಧಿಕಾರವಿತ್ತು ಮತ್ತು ಅವರ ಪ್ರಭಾವ ಹೆಚ್ಚಾಗಿತ್ತು. ಆದ್ದರಿಂದ ಸಮಾಜದಲ್ಲಿ ಆಗಬೇಕಾದ ಬದಲಾವಣೆಗಳು ಇವರ ಮೂಲಕ ನಡೆದರೆ ಸರಿ ಎಂಬುದು ಲೇಖಕರ ಅಭಿಪ್ರಾಯ. ಇಂತಹ ಚಿಂತನೆಗಳು ಅಂದಿನ ಮರಾಠಿ ಪರಿಸರದ ಕಾದಂಬರಿ ಹಾಗೂ ಲೇಖನಗಳಲ್ಲಿ ಕಂಡು ಬರುತ್ತದೆ.

ಈ ನಾಟಕವು 'ಹವ್ಯಕ ಹಿತೇಚ್ಛು ವಿದ್ವಾಂಸರೊಬ್ಬರು' ಎಂಬ ಹೆಸರಿನಿಂದ ಪ್ರಕಟವಾಯಿತು.

ಕಥೆ– ೬೦ ವರ್ಷದ ಇಗ್ಗಪ್ಪ ಹೆಗಡೆ ತನ್ನ ಹತ್ತಿರ ಬಿಡಿಗಾಸು ಇಲ್ಲದ ಸಂದರ್ಭದಲ್ಲಿ ಸಾಲ ಮಾಡಿ ಕನ್ಯಾಶುಲ್ಕವನ್ನು ಕೊಟ್ಟು ಎಳೆಯ ವಯಸ್ಸಿನ ಹುಡುಗಿಯನ್ನು ಮದುವೆಯಾಗುತ್ತಾನೆ. ನಾಡಿಗರು ಸಾಲ ಕೊಡುವಾಗ ಒಂದಕ್ಕೆ ಎರಡರಷ್ಟು ಬರೆಯಿಸಿಕೊಂಡು ಕೊಡುತ್ತಾನೆ. ಅಲ್ಲದೆ ಮದುವೆಯ ವಿಚಾರದಲ್ಲಿ ಗಣೇಶಭಟ್ಟನು ಸುಳ್ಳು ಜಾತಕವನ್ನು ಹೇಳಿ ವಿವಾಹ ಮಾಡಿಸುತ್ತಾನೆ. ಇಗ್ಗಪ್ಪನ ಅಣ್ಣ ವಾಸಪ್ಪ ಹೆಗಡೆ ಇಗ್ಗಪ್ಪನ ಹೆಂಡತಿ ಸಾವಿತ್ರಿಯನ್ನು ಬಯಸುತ್ತಾನೆ. ಇಗ್ಗಪ್ಪ ಕೆಲವೆ

ತಿಂಗಳಲ್ಲಿ ಮಡಿಯುತ್ತಾನೆ. ಸಾವಿತ್ರಿಗೆ ಒಂದು ಮಗು ಹುಟ್ಟುತ್ತದೆ. ಆದರೆ ಅದನ್ನು ಬಿಸಾಡಲು ಹೋಗಿ ಸಿಕ್ಕಿಕೊಳ್ಳುತ್ತಾಳೆ. ಕೋರ್ಟಿನಲ್ಲಿ ಇದಕ್ಕೆ ಕಾರಣವನ್ನು ಪರಾಮರ್ಶಿಸಿ ಆಕೆಗೆ ಅಲ್ಪ ಶಿಕ್ಷೆಯನ್ನು ಮತ್ತು ವಾಸಪ್ಪ ಹೆಗಡೆ ಹಾಗೂ ಇದಕ್ಕೆ ಸಂಬಂಧಿಸಿದ ಇತರರಿಗೆ ಕಠಿಣ ಶಿಕ್ಷೆಯನ್ನು ವಿಧಿಸುತ್ತಾರೆ.

ಸಾಹುಕಾರ ನಾಡಿಗರ ಪಾತ್ರದ ಮೂಲಕ ಅಂದಿನ ಹವ್ಯರ ಬ್ರಾಹ್ಮಣ ಸಮಾಜದ ವ್ಯವಸ್ಥೆಯನ್ನು ಕುರಿತು ಹೀಗೆ ಹೇಳಿದ್ದಾರೆ: "ಸಾಲದ ಬಡ್ಡಿ, ಹೆಂಣಿನ ತರ, ಲಂಚರುಷವತ್ತು" ಇವುಗಳಿಂದ ಆ ಜನ ಅಧೋಗತಿಗೆ ಇಳಿದಿದ್ದಾರೆ".

ಇದರ ಭಾಷೆಯೂ ವಿಶಿಷ್ಟವಾಗಿದೆ. ಇದರ ಭಾಷೆ ಹವ್ಯಕ ಕನ್ನಡ.

ಗಣೇಶ ಭಟ್ಟ: "ಈಗ ನೀವಂದ ಪ್ರಸ್ತಾವಿಗೂ ಹೋಪುದು ಬ್ಯಾಡಾ, ಹ್ಯಾಗೆ ಮಾಡದವೋ, ಹಾಗೆ ಬಿಟ್ಟೆವೋ, ಯಾರಿಗೂ ತೇಳೀಬಾರಾ. ಆ ಆತೂ, ನೀ ಆತು, ಹೆಗಡೆ ಆಸ್ತೆ ಬಹಳ ಚಲೋದಿದ್ದು, ಅವಂಗೇನೂ ಹಿಂದಿಲ್ಲೇ ಮುಂದಿಲ್ಲೇ, ತುಸಾ ವರ್ಷಾಜೂ ಅನ್ನೋದೊಂದೆ ಸರಿ. ಒಂದು ವೇಳೆ ಮುಂದೆ ಆಗಾನಿಮೇಗಾನಿ ಆದ್ರೂ ನಿಮ್ಮನೇ ಕೂಸೀಗೆ ಕಾಲಮೇಲೆ ಕಾಲ ಹಾಯ್ಕ್ಂಡು ತಿಂದ್ರೂ ಯಥೇಚ್ಛ ಇದ್ದು..... ಆ ಹೇಳ್ತೆ ಹೇಳಿ ಶಿಟ್ಟ ಮಾಡಡಾ : ಹೆಗಡೆ ಮುದುಕಾ, ಒಂದು ವೇಳೆ ನಾಳೇ ಹರಿ ವಾಸುದೇವ ಅಂದ್ರೂ ಆ ಭೂಮಿಗೆಲ್ಲಾ ೪–೫ ಸಾವಿರರೂಪ್ಯಾಗೆ ಕುಟ್ಟಾಕಿ ಮಾರಕಂಡು ಬಂದು ಕೂತುಕೊಂಡ್ರು ಜೀವಿಪ್ಪಲ್ಲೀವರೆಗೇ ಬೇಕಾದ ಹಾಗೆ ಉಂಡ ತಿಂದಕಂಡಿರಲಕ್ಕೂ, ಆನು ಮಂಞಊಣಾಗಳೇ ಜೋಯಿಸರ ಮನೇಲಿ ಜಾತ್ಕಾ ನೋಡ್ಸಿ ಪಸಂದಾಗ್ತೂ ಅಂತಾ ಮಾಡಿಕೊಂಡು ಬಂದದೇ. .... ಈಗೇನೂ ಅಂಬೇ?"

ರಾಯನ ಮಾತು ಕೊಂಕಣಿಯಲ್ಲಿದೆ: "ಕಿತವೋ? ಮಂಜ್ಯಶ್ರೇಣೀ : ದಸ್ತ್ಯವೋಜಾರಿ ಕಾಂಯ್ ಶಬ್ದದವರ ಜಾಕ್ ಯತ್ತನಾ, ಥೈಂ ಯಥಾಯೋಗ್ಯ ಬೊರೈಲಾ.... ಅಪ್ಸಸಾ : ಅತ್ತೆಗೆಲ್ಲೇಕ್ ಪೋಲೊಯ್ ತೆಂಗೆಲ್ ದಸ್ತೈವಜ್ ಕಾಡ್."

ಇನ್ನು ಎರಡನೆಯ ನಾಟಕ ಕನ್ಯಾವಿಕ್ರಯ :– ಈ ನಾಟಕದಲ್ಲಿ ಶಂಭಟ್ಟನ ೯ ವರ್ಷದ ಮಗಳನ್ನು ಕನ್ಯಾಶುಲ್ಕ ಪಡೆದು ಮದುವೆ ಮಾಡಿಕೊಡಲು ಸಿದ್ಧನಾಗಿದ್ದಾನೆ. ಆದರೆ ಇದರಲ್ಲಿ ಇಗ್ಗಪ್ಪನಂತ ಮುದಿಯ ಗಂಡನಿಲ್ಲ. ಅವನ ಸಂಬಂಧಿ ಆದ ದಾಮಭಟ್ಟನ ಮಗನಿಗೆ ತನ್ನ ಮಗಳನ್ನು ಕೊಡಲು ನಿಶ್ಚಯಿಸುತ್ತಾರೆ. ಆದರೆ ರಾಮಭಟ್ಟನು ಆಧುನಿಕತೆಯ ಪ್ರಭಾವಕ್ಕೆ ಒಳಗಾದವನು. ಸುಧಾರಣವಾದಿ, ಕನ್ಯಾಶುಲ್ಕವನ್ನು ಕೊಡಲು ನಿರಾಕರಿಸುತ್ತಾನೆ. ಆ ಮದುವೆಯ ಮಾತು ಮುರಿದ ನಂತರ ನಾರಾಯಣಭಟ್ಟನೆಂಬ ಬಡವನು ತನ್ನ ಮಗನಿಗಾಗಿ ತನ್ನ ಹೊಲ, ಮನೆಯನ್ನು ಒತ್ತೆಯಿಟ್ಟು ಕನ್ಯಾಶುಲ್ಕ ನೀಡಿ ಶಂಭಟ್ಟನ ಮಗಳನ್ನು ಮನೆ ತುಂಬಿಸಿಕೊಳ್ಳುತ್ತಾನೆ. ಆದರೆ ಎರಡೇ ವರ್ಷಕ್ಕೆ ಆಕೆ ವಿಧವೆಯಾಗುತ್ತಾಳೆ. ಶಂಭಟ್ಟನ ಹಣ ಕಳುವಾಗುತ್ತದೆ. ಕೆಲವೇ ವರ್ಷಗಳಲ್ಲಿ ತಪ್ಪು ಹಾದಿಯಿಡಿದು, ಅವಮಾನದಿಂದ ಆಕೆಯು ಸಾಯುತ್ತಾಳೆ.

ಕೊನೆಯಲ್ಲಿ ನಾಟಕದ ಮುಕ್ತಾಯ ಹೀಗಿದೆ.

"ವಿಧವೆಯಾದ ಮಗಳು ಯೌವನವನ್ನು ಸಹಿಸಿಕೊಳ್ಳಲಾರದೆ, ಅವಿಚಾರದ ಕೃತ್ಯವನ್ನು ನಡೆಸಿದ್ದರಿಂದ ಗರ್ಭೋತ್ಪನ್ನವಾಗಲಾಗಿ ಅವಳು ಮನೆಯ ಸಮೀಪ ಭಾವಿಯಲ್ಲಿ ಹಾರಿ ಪ್ರಾಣ ಕಳಕೊಂಡಳು. ಆಕೆಯ ತಾಯಿಯು ಅದೇ ಮಾರ್ಗ ಅನುಸರಿಸಿದಳು ಪಶ್ಚಾತ್ತಾಪದಿಂದ ಶಂಭಟ್ಟನು ದೇಶಾಂತರಕ್ಕೆ ಹೊರಟು ಹೋದನು."

ಈ ಎರಡೂ ನಾಟಕಗಳ ನಂತರ ಸುಮಾರು ೧೮೭೮ರಲ್ಲಿ ಉತ್ತರ ಕರ್ನಾಟಕದಲ್ಲಿ 'ಆರು ಬೆರಳಿನ ಕುರುಹು' ಎಂಬ ನಾಟಕ ರಚನೆಯಾಯಿತು. ಇದರ ಕರ್ತೃ ವೆಂಕಟರಂಗೋಕಟ್ಟಿ. ಇದು ಸಾಮಾಜಿಕ ಹಾಗೂ ಐತಿಹಾಸ ಎರಡೂ ಅಂಶಗಳನ್ನು ಒಳಗೊಂಡ ನಾಟಕ. ಇದರಲ್ಲಿ ವಿಧವಾ ವಿವಾಹದ ಪರ ಚಿಂತನೆಗಳನ್ನು ಎತ್ತಿ ಹಿಡಿದಿದ್ದಾರೆ. ಕಟ್ಟಿಯವರಿಗೆ ಸ್ತ್ರೀಪರ ಕಾಳಜಿ ಹೆಚ್ಚು. ಅವರ 'ವಿಧವೆಗಳ ಮುಂಡನ ಅನಾಚಾರವು' ಲೇಖನವು ೧೮೮೯ರ ವೇಳೆಗಾಗಲೇ ರಚನೆಯಾಗಿತ್ತು. ಅಲ್ಲವೆ ಇಂಗ್ಲಿಷ್ ಸಾಹಿತ್ಯದ ಪರಿಚಯವು ಇಂತಹ ಆಲೋಚನೆಗಳಿಗೆ ಎಡೆಮಾಡಿಕೊಟ್ಟಿತ್ತು. ಇವರ ಈ ನಾಟಕ ಮತ್ತು ಲೇಖನದ ಪ್ರಭಾವವು ಆರಂಭದ ಕಾದಂಬರಿಯ ಮೇಲೆ ಪ್ರಭಾವ ಬೀರಿರಬಹುದಾಗಿದೆ.

ಈ ನಾಟಕಗಳ ನಂತರದಲ್ಲಿ ೧೯೦೬ರಲ್ಲಿ ಮತ್ತೊಂದು ಸಾಮಾಜಿಕ ನಾಟಕ ರಚನೆಯಾಯಿತು. ಇದೇ ಶೇಷದಾಸಾಚಾರ್ಯರಿಂದ ರಚಿಸಲ್ಪಟ್ಟ 'ಸುವದನಾ ಭಾಸ್ಕರ'. ಮೊದಲೆರಡು ನಾಟಕಗಳ ರಚನೆಗೂ ಈ ನಾಟಕಕ್ಕೂ ಸುಮಾರು ಹದಿನೈದು ವರ್ಷಗಳ ಅಂತರವಿದೆ. ಆದರೆ ಈ ಎರಡೂ ನಾಟಕಗಳ ಪ್ರಭಾವ ಸುವದನಾ ಭಾಸ್ಕರ ನಾಟಕದಲ್ಲಿ ಕಂಡುಬರುತ್ತದೆ. ಇದರಲ್ಲಿ ಬಾಲ್ಯವಿವಾಹ, ಅಸಮ್ಮತ ವಿವಾಹಗಳ ವಿರುದ್ಧದ ದನಿಯಿದೆ. ಈ ನಾಟಕದ ಉದ್ದೇಶವನ್ನು ಕುರಿತು "....ಬರಿಯ ಜನ ಮನೋರಂಜನಾರ್ಥವಾಗಿ ನಾಟಕ ಮಾಡಿ ತೋರಿಸುವುದು ನನಗಂತೂ ಸರಿ ಕಾಣಿಸದು. ಬಹು ಜನರು ವೆಚ್ಚಮಾಡಿ ಶ್ರಮಬಟ್ಟರೆ ನಾಟಕ ಸಿದ್ಧವಾಗುವುದಲ್ಲದೆ, ಈಗಿನ ಕಾಲದಲ್ಲಿ ಅಜ್ಞರೇ ಬಹಳವಿದ್ದುದರಿಂದ ನಿಂದೆಗೂ ಒಳಗಾಗಬೇಕಾಗುತ್ತದೆ...." ಎಂದಿದ್ದಾರೆ.

ಇದರಲ್ಲಿ ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನದ ನಾಟಕದಂತೆ ಇಲ್ಲಿ ಕಿರಿಯ ವಯಸ್ಸಿನ ಹೆಣ್ಣುಮಗಳೊಬ್ಬಳು ಮುದುಕನೊಬ್ಬನನ್ನು ವಿವಾಹವಾಗುತ್ತಾಳೆ. ಸ್ವಲ್ಪ ದಿನಗಳ ನಂತರದಲ್ಲಿ ಮುದುಕ ಮರಣ ಹೊಂದುತ್ತಾನೆ. ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ ನಾಟಕದಲ್ಲಿ ಆತ ಸತ್ತ ನಂತರ ಗರ್ಭಿಣಿಯಾಗಿದ್ದ ಹುಡುಗಿ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಆದರೆ ಈ ನಾಟಕದಲ್ಲಿ ಗರ್ಭಿಣಿಯಾದ ಸುವದನಾಳನ್ನು ನಾಯಕನಾದ ಭಾಸ್ಕರ ವಿವಾಹವಾಗುತ್ತಾನೆ. ಈ ತಂತ್ರವನ್ನು ನಾಟಕಕಾರ ಇಂದಿರಾಬಾಯಿಯಂತಹ ಕಾದಂಬರಿಯಿಂದ ಪ್ರೇರೇಪಿತರಾಗಿ ಬಳಸಿರುವ ಸಾಧ್ಯತೆಯಿದೆ. ಏಕೆಂದರೆ ಈ ನಾಟಕ ರಚನೆಯ ಕಾಲಕ್ಕಾಗಲೇ ವಿಧವಾ ವಿವಾಹದ ಕುರಿತ ಚಿಂತನೆಗಳು ಕಾದಂಬರಿಗಳಲ್ಲಿ, ಲೇಖನಗಳಲ್ಲಿ ಕಾಣಿಸಿಕೊಂಡಿದ್ದವು. ಅಲ್ಲದೆ ಪಾಶ್ಚಾತ್ಯ ಅನೇಕ ಕಾದಂಬರಿಗಳಲ್ಲೂ ಈ ಚಿಂತನೆ ವ್ಯಕ್ತವಾಗಿವೆ.

ಈ ನಾಟಕಗಳ ನಂತರದಲ್ಲಿ ಬಂದ ಅನೇಕ ನಾಟಕಗಳು ಇಂತಹ ಸಾಮಾಜಿಕ ಅನಿಷ್ಟಗಳ ವಿರುದ್ಧದ ದನಿಯನ್ನು ಎತ್ತಿವೆ. ವೆಂಕಟರಂಗೋಕಟ್ಟಿಯವರ 'ಆರು ಬೆರಳಿನ ಕುರುಹು' ನಾಟಕವೂ ವಿಧವಾ ವಿವಾಹಕ್ಕೆ ಬೆಂಬಲ ನೀಡಿದೆ. ಅಲ್ಲದೆ ಸಾಮಾಜಿಕ ವ್ಯವಸ್ಥೆಯ ವಿಡಂಬನೆಗಳನ್ನು ಮಾಡುವಂತಹ 'ಲುಲಾಯ ಶಾಸ್ತ್ರಿ', ಸ್ತ್ರೀ ಸಮಸ್ಯೆಗಳನ್ನು ಎತ್ತಿ ಹಿಡಿಯುವ 'ಸ್ತ್ರೀಧರ್ಮ ರಹಸ್ಯ' ಹಾಗೂ 'ಚಂದ್ರವದನಾ'ದಂತಹ ಅನೇಕ ನಾಟಕಗಳು ಯಥೇಚ್ಛವಾಗಿ ರಚನೆಯಾದವು.

ಒಟ್ಟಾರೆ ಪೌರಾಣಿಕ ನಾಟಕಗಳಿಂದ ಆರಂಭವಾದ ಕನ್ನಡ ನಾಟಕ ರಚನೆಯು ಹಂತ ಹಂತವಾಗಿ ಹೊಸ ತಂತ್ರ ಹಾಗೂ ಆಲೋಚನೆಗಳನ್ನು ಒಳಗೊಳ್ಳುತ್ತಲೇ ತನ್ನ ಸ್ವರೂಪವನ್ನು ಸ್ಪಷ್ಟೀಕರಿಸಿಕೊಂಡಿತು. ಇದಕ್ಕೆ ಹೊರಗಿನಿಂದ ಬಂದ ಹೊಸ ಆಲೋಚನೆಗಳು ಪೂರಕವಾದವು.

**ಭಾಷೆ**

ಸಾಹಿತ್ಯವು ತನ್ನ ಆಶಯವನ್ನು ಸಮರ್ಥವಾಗಿ ವಿನಿಮಯಗೊಳಿಸಲು ಭಾಷೆಯ ಬಗ್ಗೆ ಹೆಚ್ಚು ಗಮನ ಹರಿಸುವುದು ಲೇಖಕನಿಗೆ ಮುಖ್ಯವಾಗುತ್ತದೆ. ಇದು ನಾಟಕ ಪ್ರಕಾರಕ್ಕೂ ಅನ್ವಯವಾಗುವಂತಹದ್ದು. ಒಂದು ಕಾಲಕ್ಕೆ ಸಾಹಿತ್ಯ ಜನರಿಂದ ದೂರ ಉಳಿಯಲು ಕಾರಣವೇ ಅದರ ಭಾಷೆ. ೧೯ನೇ ಶತಮಾನದ ಸಾಹಿತಿಗಳು ಈ ವಿಷಯದ ಬಗ್ಗೆ ಗಮನಹರಿಸಿದಂತೆ ಕಾಣುತ್ತದೆ. ನಾಟಕವು ರಂಗ ಪ್ರಯೋಗದ ಹಿನ್ನೆಲೆಯಲ್ಲಿ ರಚಿತವಾಗುವಂತಹದ್ದು. ಆದುದರಿಂದ ಇದರ ಭಾಷೆ ಸಹೃದಯದ ನೆಲೆಯಲ್ಲಿರಬೇಕು.

ಇಂತಹ ಲಕ್ಷಣ ಹೊಸಗನ್ನಡದ ಸಂದರ್ಭದಲ್ಲಿ ರಚಿತವಾದ 'ಶಾಕುಂತಲ' ನಾಟಕದಲ್ಲಿ ಕಾಣಬಹುದು. ಮರಾಠಿ ಹಾಗೂ ಪಾರ್ಸಿ ನಾಟಕಗಳ ಪ್ರಭಾವಕ್ಕೆ ಒಳಗಾಗಿದ್ದ ಕನ್ನಡಿಗರಿಗೆ ಉತ್ತಮವಾದ ನಾಟಕವನ್ನು ಕೊಡಬೇಕೆನ್ನುವ ಹಿನ್ನೆಲೆಯನ್ನು ಚುರಮುರಿ ಶೇಷಗಿರಿಯವರು ಇಟ್ಟುಕೊಂಡೆ ಈ ಕಾದಂಬರಿಯನ್ನು ರಚಿಸಿದ್ದಾರೆ. ಸಂಸ್ಕೃತ ಭಾಷೆಯ ನಾಟಕವನ್ನು ಅನುವಾದಿಸುವಾಗ ಅಲ್ಲಿನ ಭಾಷೆ, ಛಂದಸ್ಸು, ಶೈಲಿಯನ್ನು ಸಡಿಲೀಕರಿಸಿಕೊಂಡಿರುವುದು ಗಮನಾರ್ಹ. ಶಿಷ್ಟ ಭಾಷೆಗೆ ಬದಲಾಗಿ ದೇಸೀ ಭಾಷೆಯಲ್ಲಿ ನಾಟಕವನ್ನು ರಚಿಸಿದರು. ಇದು ಗಾಯನ ಶೈಲಿಯಲ್ಲಿ ಇದೆ. ಇವರ ಮುಖ್ಯ ಗುರಿ ಪ್ರೇಕ್ಷಕ. ಅವರ ಭಾಷೆಯ ಶೈಲಿಯನ್ನು ಕೆಳಗಿನ ಭಾಗದಲ್ಲಿ ಕಾಣಬಹುದು.

'ಏನ್ ನನ್ನ ಕರ್ಮಾಪ್ಪಾ! ಈ ಅರಸಿನ ಬ್ಯಾಟೀ ಕಾಲಾಗ ನಾನನಕಾ ದಣದ ಹೋದ್ನಿ ಕವವ ಚಿಗರಿ! ಕವವ ಕಾಡಂದಿ! ಕವವ ಹುಲಿ! ಅಂತ ವದರಾಡಿಕೊಂಡು ಚೀರಾಡಿಕೊಂಡ ಈ ಅಡವ್ಯಾಗಿಂದಾ ಆ ಅಡವಿ, ಆಅಡವ್ಯಾಗಿಂದೀ ಅಡವಿ ಓಡಿ, ಓಡಿ ಸಾಕಾತ್ಯೋ ನಮ್ಮಪ್ಪಾ! ಬಿಸಿಲಂತಿ ಆಸಾಡಮಾಸ ಕೇಳೋದ್ಯೋ ನಮ್ಮಪ್ಪಾ! ಬಿಸಿಲಂತಿ ಆಸಾಡಮಾಸ ಕೇಳೋದೈದತಿ ರಣರಣ ಕುಟ್ಟೀ ಕುಟ್ಕೆತತಿ; ಮದ್ಯದತಿ ರಣರಣ ಕುಟ್ಟೀ ಕುಟ್ಕೆತತಿ; ಮದ್ಯಾಣದ್ಹೊತ್ತಿದ್ಯಾಣದ್ಹೊತ್ತಿನ್ಯಾಗ ವಂದ ಜರಾ ಗಿಡದ ಬುಡಕ ಕುಂತೇನಂದರ ನೆಂಟರ ಅತೇ? ಅದೂ ಇಲ್ಲ."(ಹೊಸಗನ್ನಡದ ಅರುಣೋದಯ–ಪು. ೪೦೨)

ಚುರಮುರಿ ಶೇಷಗಿರಿರಾಯರ ಈ ಅನುವಾದದ ಭಾಷಾಶೈಲಿಯು ಸ್ಥಳೀಯವಾಗಿದ್ದಂತಹ ದೊಡ್ಡಾಟ, ಸಣ್ಣಾಟಗಳ ಆಡು ಮಾತಿನ ಶೈಲಿಯಲ್ಲಿದೆ. ದೊಡ್ಡಾಟದ ಬಹಳ ಪ್ರಸಿದ್ದವಾದ ಶ್ರೀಕೃಷ್ಣ ಪಾರಿಜಾತದ ಭಾಷಾಶೈಲಿ ಇಂತಿದೆ.

"ಬ್ಯಾಡವೆಂದೆನೇ? ಬ್ಯಾರೆಯೆನ್ನನು ಮಾಡಿ ಕೂಡಲಾಡದೇ ಕುಶಲ ದ್ವೈತವನೇ ಆಡಿ! ...ಭೂಮಿ ನೀನು, ಮಾರ್ಗ ನಾನು.... ಸರಿತವು ನೀನು, ಸಾಗರವು ನಾನು.... ಪೂರಣ ಬ್ರಹ್ಮ ನೀನು, ಕಾರಣವಾದ ಪ್ರಕೃತಿ ನಾನು.... ಜಾಣ ನಿನ್ನುರ ಜಗದೊಳು ವಾಸವನ್ನು ಮಾಡಿಹೆ. ನಾರಿ ಮನಿಗೋದರೇನು ಪ್ರಾಣ ನಾಯಕಾ, ಪದಕದಂತೊಪ್ಪಿಹೆನು"(ಹೊಸಗನ್ನಡದ ಅರುಣೋದಯ-ಪು. ೨೧೭)

ಈ ರೀತಿಯ ಭಾಷೆಯನ್ನು ಸಂಸ್ಕೃತ ಕೃತಿಗಳನ್ನು ಅನುವಾದಿಸಿದ ಆ ಪ್ರದೇಶದ ಇತರೆ ನಾಟಕಕಾರರು ಅನುಸರಿಸಿರುವುದು ಗಮನಾರ್ಹ. ಸಾಹಿತ್ಯದ ಭಾಷೆ ಯಾವಾಗಲೂ ಸ್ಥಳೀಯ ಭಾಷೆಗೆ ಹತ್ತಿರವಾಗಿರಬೇಕು. ಆಗ ಮಾತ್ರ ಸಾಹಿತ್ಯ ರಚನೆಯ ಉದ್ದೇಶ ಯಶಸ್ವಿಯಾಗುವುದು. ಈ ಹಿನ್ನೆಲೆಯಲ್ಲಿ ಗುರುರಾವ್ ಮಮದಾಪುರರ ಹೇಳಿಕೆ ಗಮನಾರ್ಹವಾದದ್ದು. "ಕಲೋಕ್ವಿಯಲ್ ಅಂದರೆ ಮನೆಯಲ್ಲಿ ಸ್ತ್ರೀ ಪುರುಷರೂ, ಹುಡುಗರೂ, ಆಳುಗಳೂ ಮಾತಾಡತಕ್ಕ ಗ್ರಾಮ್ಯ ಶಬ್ದಗಳಿಂದ ಕೂಡಿದ ಭಾಷಣಗಳನ್ನು ಇದರಲ್ಲಿ ಎಲ್ಲ ಕಡೆಗೂ ಉಪಯೋಗಿಸುವ ಅವಶ್ಯ ಕಂಡು ಬಂತು. ಹೀಗೆ ಮಾಡದಿದ್ದರೆ ಈ ನಾಟಕದಲ್ಲಿಯ ಭಾಷಣದ ರಸಮಾಧುರ್ಮವು ವಾಚಕರಿಗೆ ಏನೂ ದೊರೆಯದೆ ಕೇವಲ ನಿಬಂಧಗಳಂತೆ ಕಥಾಭಾಗ ಮಾತ್ರ ತಿಳಿಯುತ್ತಿತ್ತು. ಇದಕ್ಕೊಸ್ಕರ ಉಳಿದ ಭಾಷೆಗಳಲ್ಲಿ ಉಪಯೋಗಿಸಿದಂತೆ 'ಹೋಮ ಲ್ಯಾಂಗವೇಜ' ಅಂದರೆ ಮನಿಯಲ್ಲಿ ಮಾತಾಡುವ ಪ್ರಚಾರದಲ್ಲಿಯ ಭಾಷೆಯನ್ನುಪಯೋಗಿಸಿ ಗ್ರಂಥವನ್ನು ಪೂರ್ಣದಶೆಗೆ ತಂದಿರುವೆನು."(ಹೊಸಗನ್ನಡದ ಅರುಣೋದಯ-ಪು. ೪೧೧)ಎಂದಿದ್ದಾರೆ.

ಶೇಷಗಿರಿರಾಯರ ಹಾಗೂ ಬಸವಪ್ಪಶಾಸ್ತ್ರಿಗಳ ಕೃತಿಯ ವಸ್ತು ಒಂದೇ ಆಗಿದ್ದರೂ ಭಾಷೆಯ ಬಳಕೆಯಲ್ಲಿ ಸಾಕಷ್ಟು ವ್ಯತ್ಯಾಸವಿದೆ. ರಾಜಾಶ್ರಯದಲ್ಲಿ ಶಾಕುಂತಲ ನಾಟಕವನ್ನು ಅನುವಾದಿಸಿದ ಬಸವಪ್ಪಶಾಸ್ತ್ರಿಗಳು ತಮ್ಮ ಪಾಂಡಿತ್ಯದ ಚೌಕಟ್ಟಿನಲ್ಲಿಯೇ ರಚನೆಯನ್ನು ಮಾಡಿದ್ದಾರೆ. ಶೇಷಗಿರಿರಾಯರ ಭಾಷೆಯನ್ನು ಸರಳವಾಗಿದ್ದಂತೆ ಕಾಣದಿದ್ದರೂ ವಾಚಕರಿಗೆ ಅರ್ಥವಾಗುವಂತೆ ರಚನೆಯಾಗಿದೆ. ಮೇಲೆ ನೀಡಿದ ಶೇಷಗಿರಿರಾಯರ ಅನುವಾದ ಭಾಗವು ಬಸವಪ್ಪಶಾಸ್ತ್ರಿಗಳ ಕೃತಿಯಲ್ಲಿ ಹೀಗೆ ಮೂಡಿಬಂದಿದೆ.

"ಅಯ್ಯೋ ದೈವವೇ! ಬೇಟೆಯಲ್ಲೇ ಆಸಕ್ತನಾದ ಈ ರಾಯನ ಸ್ನೇಹದಿಂದ ಕೆಟ್ಟೆನಲ್ಲಾ! ಇದೋ ಹುಲ್ಲೇ! ಇದೋ ಹುಲಿ! ಎನ್ನುತ್ತಾ ಮಧ್ಯಾಹ್ನದಲ್ಲಿಯೂ ಬೇಸಗೆಯಿಂದ ದಟ್ಟವಾಗಿ ಮರದ ನೆರಳಿಲ್ಲದ ಅಡವಿಗಳಲ್ಲಿ ಸುತ್ತಿ ಸಾಕಾಯಿತು. ಉದುರಿದೆಲೆಗಳಿಂದ ಒಗರಾಗಿ ಬೆಚ್ಚಗಿರುವ ಬೆಟ್ಟದ ಜೋಗಿನ ನೀರುಗಳನ್ನೆಲ್ಲಾ ಕುಡಿದುದಾಯಿತು. ಇದು ಹೊರತಾಗಿ ಹೊತ್ತುಗೊತ್ತಿಲ್ಲದೆ

ಸುಟ್ಟ ಮಾಂಸವೇ ಹೆಚ್ಚಾಗಿರುವ ಆಹಾರವು ಭುಂಜಿಸಲ್ಪಟ್ಟಿತು."(ಹೊಸಗನ್ನಡದ ಅರುಣೋದಯ- ಪು. ೪೦೩)

ಇದು ವಿದೂಷಕನ ಮಾತುಗಳಾಗಿವೆ. ಆದರೆ ಮುಖ್ಯ ಪಾತ್ರಗಳ ಸಂದರ್ಭದಲ್ಲಿ ಇವರ ಭಾಷೆಯ ಶೈಲಿ ಈ ರೀತಿ ಇದೆ.

ಶಕುಂತಲೆ:- "....ಆರ್ಯಪುತ್ರನೆ,(ಎಂದು ಅರ್ಧೋಕ್ತಿಯಲ್ಲಿ) ಮದುವೆಯಾಗಿರುವುದರಲ್ಲೇ ಸಂದೇಹವುಂಟಾದ ಮೇಲೆ ಇನ್ನು ಆರ್ಯಪುತ್ರನೆಂದು ಕರೆಯುವುದು ಹೇಗೆ? *ಎಲೈ ಪುರುಕುಲೋತ್ಪನ್ನನೆ, ಮೊದಲು ಆಶ್ರಮದಲ್ಲಿ ಕಪಟವೆನ್ನುವುದನ್ನೇ ಅರಿಯದ ಈ ಮುಗ್ಧೆಯನ್ನು ಹಾಗೆ ಶಪಥ ಪೂರ್ವಕವಾಗಿ ವಂಚಿಸಿ ಈಗ ಇಂಥ ಕಠಿಣೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ?

ರಾಜ:(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂಪಾಪಂ ಶಾಂತಂಪಾಪಂ!

ಕುಲದ ನೆಗಳ್ತೆಯುಮಂ ನೀಂ
ಕಲುಷಿತಮಂ ಮಾಡಲೆನ್ನುಮಂ ಕೆಡಪಲ್ಕೇ
ಕೆಳಸುವೆ ಕೂಲಂಕಷಶೈ
ವಲಿನಿಯವೋಲ್ ತಿಳಿದ ಜಲಮುಮಂ ತಟಜಮುಮಂ ॥೨॥

ಶಕುಂತಲೆ: ಆಗಲಿ, ನನ್ನನ್ನು ಪರಸ್ತ್ರೀಯೆಂದು ತಿಳಿದುದರಿಂದ ನೀನು ಹೀಗಾಗಿರುವೆ. ಈ ಅಭಿಜ್ಞಾನಾಭರಣದಿಂದ ನಿನ್ನ ಸಂದೇಹವನ್ನು ಹೋಗಲಾಡಿಸುವೆನು.(ಬಸವಪ್ಪಶಾಸ್ತ್ರಿಗಳ ಸ.ಕೃ- ಪು. ೨೬೬)

ನಾಟಕಗಳ ಭಾಷೆ ಹೇಗಿರಬೇಕು ಎಂಬುದರ ಬಗ್ಗೆ ಸಾಕಷ್ಟು ಚರ್ಚೆಗಳು ಮತ್ತು ವಾಗ್ವಾದಗಳು ನಡೆದಿವೆ. ಕಾವ್ಯದ ಭಾಷೆಗಿಂತ ಭಿನ್ನವಾದ ಭಾಷೆಯನ್ನು ತಂದುದರ ಉದ್ದೇಶವನ್ನು ನಾಟಕಕಾರರ ನಡುವೆ ಭಿನ್ನಾಭಿಪ್ರಾಯಗಳು ಇದ್ದವು. ನಾಟಕದಲ್ಲಿ ಹಳಗನ್ನಡ ಮತ್ತು ಹೊಸಗನ್ನಡ ಮಿಶ್ರಣ ಕುರಿತು ಶ್ರೀಕಂಠೇಶಗೌಡರು "ನಾಟಕದಲ್ಲಿ ಗದ್ಯ ಮಾತ್ರದಲ್ಲಿ ಅಲ್ಲದೆ ಪದ್ಯಗಳಲ್ಲೂ ಕೆಲವು ಮಟ್ಟಿಗಾದರೂ ಹೊಸಗನ್ನಡವನ್ನು ಸೇರಿಸದಿದ್ದರೆ ಅವು ನಾಟಕ ಶಾಲೆಗೆ ಉಪಯೋಗವಾಗುವುದಿಲ್ಲ. ಈ ರೀತಿ ಪದ್ಯಗಳನ್ನು ಬರೆಯುವುದು ಶಬ್ಧ ಸಂಗ್ರಹಣಕ್ಕೆ ಮಾತ್ರ ಕನ್ನಡ ಅಭ್ಯಾಸ ಮಾಡುತ್ತಿರುವ ಈ ಕಾಲದಲ್ಲಿ ಕೆಲವು ಜನಗಳಿಗೆ ಸಮರ್ಪಕವಾಗಿರಲಾರದು. ಇದಕ್ಕೆ ವಿಷಾದಿಸಬೇಕಲ್ಲದೆ ಅವರು ಹೇಳುವ ರೀತಿ ನೋಟಕರಿಗೆ ಅನುಪಯೋಗವಾಗದ ರೀತಿಯಲ್ಲಿ ಪ್ರವರ್ತಿಸುವುದಕ್ಕಾಗುವುದಿಲ್ಲ."(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೯೦) ಎಂದು 'ಸೀತಾಸ್ವಯಂವರ'ನಾಟಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ಇವರಿಗೆ ಇಂಗ್ಲಿಷ್ ನಾಟಕಗಳ ಪರಿಚಯ ಚೆನ್ನಾಗಿತ್ತು. ಇಂತಹ ಆಲೋಚನೆ ಆಧುನಿಕ ನಾಟಕಕಾರರಲ್ಲಿ ಇತ್ತು ಮತ್ತು ಪೌರಾಣಿಕ

ನಾಟಕಗಳ ರಚನೆಯಾದರೂ ಭಾಷೆಯು ಸರಳವಾಗಿರಬೇಕೆಂದು ಬಯಸಿದರು. ಎಂ.ಎಸ್.ಪುಟ್ಟಣ್ಣನವರ 'ಹೇಮಚಂದ್ರ ರಾಜ ವಿಲಾಸ' ನಾಟಕದಲ್ಲಿ ಭಾಷೆ ಕುರಿತಂತೆ "... ಕನ್ನಡ ಜನರ ಮತ್ತು ಕನ್ನಡ ಭಾಷೆಯ ತಿಳುವಳಿಕೆ ಮತ್ತು ರೀತಿಗೆ ಅನುಗುಣವಾಗಿರುವಂತೆ" ಎಂದು ಹೇಳಿದ್ದಾರೆ. ಇವರ ಭಾಷೆಯ ಶೈಲಿಯು ಹೀಗಿದೆ.

"ಎಲ ಈ ಭೂಮಿಯಲ್ಲಿ ಅಡಗಿಕೊಂಡಿರುವ ಹಿತಕರವಾದ ರಹಸ್ಯಗಳಿರಾ, ಯಾರೂ ಅರಿಯದ ವನೌಷಧಿಗಳಿರಾ, ನನ್ನ ಕಂಣೀರು ಉಕ್ಕಿ ಬರುವಂತೆ ನೀವು ಉಕ್ಕಿ ಬಂದು ಆ ಸತ್ಪುರುಷನ ಕಷ್ಟವನ್ನು ತೀವ್ರವಾಗಿ ನಿವಾರಿಸುವುದಕ್ಕೆ ನೀವು ಸಹಕಾರಿಗಳಾಗಿರಿ. ಹುಡುಕಿ, ಆತನನ್ನು ಹುಡುಕಿ, ಇಲ್ಲದಿದ್ದರೆ, ಪ್ರಾಣಧಾರೆಗೆ ಮಾರ್ಗವನ್ನು ತೋರಿಸುವ ಆ ಪ್ರಜ್ಞೆಯು ಇಲ್ಲದೆ ಹುಚ್ಚು ವಿಪರೀತವಾಗಿ ಪ್ರಾಣವೆಲ್ಲಾದರೂ ಹೋದೀತು...." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೧೭)

ಆದರೆ ಇವರ ವಾಕ್ಯ ರಚನೆಯು ಸರಳವಾಗಿರದೆ, ಭಾಷೆ ಹಾಗೂ ಅಭಿವ್ಯಕ್ತಿಯ ದಾಟಿ ಕ್ಲಿಷ್ಟಕರವಾಗಿದೆ. ಇದರ ಬಗ್ಗೆ ಅವರು ಹೇಳಿದ್ದು "....ಭಾಷಾಂತರ ಮಾಡತಕ್ಕ ಕಷ್ಟವನ್ನು ಬಲ್ಲ ಪುಣ್ಯಾತ್ಮರೆಲ್ಲರೂ ನನ್ನ ದೋಷಗಳನ್ನು ಕ್ಷಮಿಸಬೇಕು" ಎಂದು ವಿನಂತಿಸಿದ್ದಾರೆ. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೧೭)ಈ ಮಾತು ಸತ್ಯವಾದುದು. ಭಾಷಾಂತರಕ್ಕೆ ತೊಡಗಿಕೊಂಡ ನಾಟಕಕಾರ ಇಲ್ಲವೆ ಸಾಹಿತಿಗೆ ಭಾಷೆಯನ್ನು ಕುರಿತು ಪ್ರಶ್ನೆ ಉಂಟಾಗುತ್ತೆ. ಪಾಂಡಿತ್ಯ ಪೂರ್ಣ ಭಾಷೆ ಮತ್ತು ಸ್ಥಳೀಯ ಭಾಷೆಯಲ್ಲಿ ರಚಿಸುವುದರ ಬಗ್ಗೆ ಗೊಂದಲಗಳು ಇರುತ್ತವೆ.

ಇಲ್ಲಿ ಶ್ರೀಕಂಠೇಶಗೌಡರ 'ಪ್ರತಾಪರುದ್ರ ದೇವ' ನಾಟಕದ ಭಾಷೆಯ ಚರ್ಚೆಯು ಅವಶ್ಯಕವಾದದ್ದು. ಇವರಿಗೆ "ಸಂಸ್ಕೃತದಿಂದ ನಾವು ಅನೇಕ ಶಬ್ದಗಳನ್ನು ಇದ್ದುದಿದ್ದಂತೆ ತೆಗೆದುಕೊಳ್ಳುತ್ತೇವೆ. ಅದರಂತೆ ಇಂಗ್ಲಿಷ್‌ನಿಂದಲೂ ಏಕೆ ತಗೊಳ್ಳಬಾರದು" ಎಂಬುದಕ್ಕೆ ವಾಗ್ಭೂಷಣ ಪತ್ರಿಕೆಗೆ ಭಾಷಾಭಿಮಾನಿಯೊಬ್ಬ ಬರೆದಿದ್ದ ಪತ್ರದಲ್ಲಿ "ಕನ್ನಡ ಶಬ್ದ ಸ್ವರೂಪವು ಇಂಗ್ಲಿಷ್‌ಗಿಂತಲೂ ಸಂಸ್ಕೃತಕ್ಕೆ ಹತ್ತಿರವಿರುತ್ತದೆ; ಹಾಗೂ ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಸುಲಭವಾಗಿ ಹಚ್ಚಿ ಕನ್ನಡ ವಾಕ್ಯದಲ್ಲಿ ಸರಾಗವಾಗಿ ತಗೊಳ್ಳಬರುತ್ತದೆ; ಈ ಸೌಲಭ್ಯ ಇಂಗ್ಲಿಷ್‌ಗಿಲ್ಲ" ಎಂದಿದ್ದಾನೆ. ಆದರೆ ಗೌಡರಿಗಿಂತ ಮೊದಲಲ್ಲೆ ಆನಂದರಾಯರು ತಮ್ಮ ನಾಟಕದಲ್ಲಿ ಆಂಗ್ಲ ಪದಗಳ ಬಳಕೆಯನ್ನು ಮಾಡಿದ್ದರು. ಆದರೆ ಇಂತಹ ಟೀಕೆಗಳು ಎದುರಾಗಲಿಲ್ಲ.

ಉದಾ. "ನರಸಿಂಗರಾಯ:– ಯಾರೊ ಅಲ್ಲಿ, ಹೂಂ, ಇನ್ನೊಂದು ಬಾಟ್ಲಿ ಬರಲಿ."

ಇದಲ್ಲದೆ ಅವರು ನಾಟಕದಲ್ಲಿ ವಿಭಕ್ತಿ ಮತ್ತು ಕ್ರಿಯಾ ಪ್ರತ್ಯಯ, ಹಳಗನ್ನಡ–ಹೊಸಗನ್ನಡಗಳ ಮಿಶ್ರಣ; ಗ್ರಾಮ್ಯಶಬ್ದಗಳ ಬಳಕೆ ಬಗ್ಗೆ ಕಟುವಾಗಿ ಟೀಕಿಸಿ ಕೊನೆಯಲ್ಲಿ "ಇಷ್ಟೆಲ್ಲ ವಿಚಾರ ಮಾಡಿದ

ಅನಂತರದಲ್ಲಿ ಈ ಪ್ರತಾಪರುದ್ರದೇವ ಎಂಬ ಗ್ರಂಥವನ್ನು ಯಾವ ಗ್ರಂಥಗಳ ಜೊತೆ ಸೇರಿಸಬೇಕೊ ನಿಷ್ಕರ್ಷಿಸುವುದು ಪ್ರಯಾಸವಾಗಿದೆ... ಸರಿಯಾದ ಭಾಷಾಂತರವೂ ಅಲ್ಲದೆ, ಸ್ವಂತವಾಗಿ ಸಂವಿಧಾನವನ್ನು ಅನುಸರಿಸಿಯೂ ಬರೆಯದೆ, ಲಕ್ಷಣ ಗ್ರಂಥವೂ ಅಲ್ಲದೆ, ಓದುವುದಕ್ಕೆ ಆಹ್ಲಾದಕರವಾಗದಂತೆ ಬರೆದ ಗ್ರಂಥವನ್ನು ಏನೆಂದು ಕರೆಯೋಣ?" ಎಂದು ಆರೋಪಿಸಿದ್ದಾನೆ.

ಆದರೆ ಇದಕ್ಕೆ ಶ್ರೀಕಂಠೇಶಗೌಡರು ಪ್ರತ್ಯುತ್ತರ ನೀಡುವ ಬದಲಿಗೆ ಮಹಾರಾಜ ಕಾಲೇಜಿನ ಪಂಡಿತರಾಗಿದ್ದ ಪಿ.ಆರ್.ಕರಿಬಸವಶಾಸ್ತ್ರೀಯವರ ಪ್ರತ್ಯುತ್ತರ 'ವಿದ್ಯಾದಾಯಿನಿ'ಯ ಮುಂದಿನ ಸಂಚಿಕೆಗಳಲ್ಲಿ ಪ್ರಕಟವಾಗಿದೆ.

"ಇದು ರೂಪಾಂತರ, ಭಾಷಾಂತರವಲ್ಲ; ಆದ ಕಾರಣ ಬಹಳಷ್ಟು ಹೋಲಿಸುವುದು ಬೇಡ. ಇದರಲ್ಲಿಯ ಗುಣಗಳೊಂದನ್ನು 'ಭಾಷಾಭಿಮಾನಿ'ಯು ಗಮನಿಸಿಲ್ಲ. ಆದ್ದರಿಂದ ಇವನನ್ನು 'ದೋಷಾಭಿಮಾನಿ'ಯೆಂದು ಕರೆಯುವುದು ಸೂಕ್ತ" ಎಂದಿದ್ದಾರೆ.

ಈ ಮಾತು ಅಕ್ಷರಶಃ ಸತ್ಯ. ರೂಪಾಂತರ ಮಾಡಿಕೊಳ್ಳುವುದರ ಹಿನ್ನೆಲೆಯು ಒಂದು ಕೃತಿಯನ್ನು ತನಗೆ ಹೇಗೆ ಬೇಕೋ ಹಾಗೆ ಅದನ್ನು ಬದಲಾಯಿಸಿಕೊಳ್ಳುವ ಸ್ವಾತಂತ್ರ್ಯ ರಚನಾಕಾರನಿಗೆ ಇರುತ್ತದೆ. ಮೂಲ ಕೃತಿಯು ಒಂದು ಮಾದರಿಯಾಗಿರುತ್ತವೆ. ಅದರಲ್ಲಿ ಯಾವುದಾದರೂ ಒಂದು ಅಂಶವನ್ನು ಇಲ್ಲವೆ ಹಿಡಿಯಾಗಿ ತೆಗೆದುಕೊಂಡು ಅಂದರೆ ಒಂದು ಕೃತಿಯಲ್ಲಿನ ವಸ್ತು, ಶೈಲಿ, ಭಾಷೆ, ನಿರೂಪಣಾ ಕ್ರಮ, ಪಾತ್ರಗಳು ಇವುಗಳಲ್ಲಿ ಯಾವುದಾದರೂ ಒಂದು ಇಲ್ಲವೆ ಒಟ್ಟಾರೆಯಾಗಿ ಸ್ವೀಕರಿಸಬಹುದು. ಈ ಸ್ವಾತಂತ್ರ್ಯ ರೂಪಾಂತರಕಾರನಿಗೆ ಇರುತ್ತದೆ.

ಶ್ರೀಕಂಠೇಶಗೌಡರ ಅನುವಾದ ಶೈಲಿಯು ಈ ರೀತಿ ಇವೆ.

ಮೂಲ :

Lady Macbeth : Out damned spot! Say! One, two why when it is time to do it. Hell is Murky! Fie, my hord, fie; A soldier and a feared! what need we fear who knows it, when none can call our power to account? Yet, who would have thought the old name to have so much blood in him?

ಅನುವಾದ :

ಚಂದ್ರವಲ್ಲಿ : ಛೆ ಛೆ ಅಸಹ್ಯ ಕಲೆಯೆ, ತೊಲಗು, ತೊಲಗು, ತೊಲಗೆಂದರೆ ತೊಲಗದಿರುವ, ಒಂದು, ಎರಡು, ಹೊತ್ತಾಯಿತು, ಮಾಡಬೇಕು, ಇನ್ನೂ ಮಾಡಬೇಕು. ನರಕ ಕತ್ತಲಾಗಿದೆ. ಛೇ ಛೇ ಇದನೇನು ವಲ್ಲಭನೆ ಧುರಧೀರನಾಗಿಯೂ ಹೆದರುವೆ? ಇದಕ್ಕೆ ನಾವ್ಯಾತಕ್ಕೆ ಹೆದರಬೇಕು?

ಯಾರು ತಾನೆ ಕಾಣುವರು? ಕಂಡರೆ ಭಯವೇನು? ಮಹತ್ವದ ಪದವಿಯಲ್ಲಿರತಕ್ಕ ನಮ್ಮನ್ನು ಆಕ್ಷೇಪಿಸಲು ಯಾರಿಗೆ ತಾನೇ ಧೈರ್ಯವುಂಟು? ಆದರೆ, ಆ ವೃದ್ಧನಲ್ಲಿಷ್ಟು ರಕ್ತವಿತ್ತೆಂದು ಯಾರು ತಿಳಿದಿದ್ದರು?

ಇವರ ಮುಂದಿನ ನಾಟಕವಾದ ಪ್ರಮೀಳಾರ್ಜುನೀಯ ನಾಟಕವೂ ಇಂಗ್ಲೀಷ್‌ನ ರೂಪಾಂತರವೇ. 'ಪ್ರತಾಪರುದ್ರದೇವ' ನಾಟಕದ ಭಾಷೆಗಿಂತಲೂ ಇದರ ಭಾಷೆ ಪರಿಪಕ್ವವಾಗಿದೆ ಪಾತ್ರಕ್ಕೆ ತಕ್ಕಂತೆ ಭಾಷೆಯಲ್ಲಿ ಸಾಕಷ್ಟು ಬದಲಾವಣೆಗಳು ಇದರಲ್ಲಿ ಕಾಣಿಸಿಕೊಂಡಿದೆ.

ಸೂತ್ರದಾರ: ಹೀಗೇನಾದರೂ ಆದರೆ, ಮುಂದೆ ಆ ಕಂಕಭಟ್ಟನು ಕಂಕುಳಿಂದ ಕಡತ ತೆಗೆದು ಕೇಳತಕ್ಕವರ ಮುಂದೆ ಕಲಪಾಲವಾಡಿದರೆ ಕುದುರೆ ಒಂದು ಕಾರ್ಯ ಕೈಗೂಡುವುದೇ?

ಪ್ರಮೀಳೆ – ಇವರುಗಳಿಗೆ ಸಂತೋಷಕರವಾದದ್ದೇನೂ ಪ್ರತ್ಯಕ್ಷವಾಗಿಲ್ಲದಿದ್ದರೂ, ಇವರ ಪ್ರಬಲವಾದ ಊಹಾ ಶಕ್ತಿಯು ಸಂತೋಷವನ್ನುಂಟು ಮಾಡುವಂಥಾದ್ದನ್ನು ಭಾವಿಸಿಕೊಂಡು ಸಂತೋಷಪಡುವುದು. ಭಯಕ್ಕೆ ಕಾರಣವಿಲ್ಲದಿದ್ದಾಗ್ಯೂ, ಕತ್ತಲಲ್ಲಿ ಕಾನನದ ನೆರಳುಗಳನ್ನು ಕಂಡು ಕರಡಿಗಳೆಂಬ ಭಾವನೆಯಿಂದ ಭಯಪಡುವುದು. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೨೦, ೧೨೧)

ಇವರ ಭಾಷಾಶೈಲಿಯನ್ನು ಹಾಗೂ ಅವರ ನಾಟಕ ರಚನೆಯ ಸಾಮರ್ಥ್ಯವನ್ನು ಕುರಿತು ಅನೇಕ ವಿದ್ವಾಂಸರು ಹೀಗೆ ಹೇಳಿದ್ದಾರೆ– ಎಚ್.ಕೆ ರಂಗನಾಥ್‌ರವರು "...ಅವರು ಮೂಲ ಪಾತ್ರಗಳಿಗೆ , ಜನಪ್ರಿಯವಾದ ಸ್ಥಳೀಯ ಹೆಸರುಗಳನ್ನು ನೀಡಿ, ಸುಲಲಿತವಾಗಿ ಹರಿವ ಸರಳ ಕನ್ನಡ ಭಾಷೆಯನ್ನು ಬಳಸಿದ್ದಾರೆ" ಎಂದಿದ್ದಾರೆ. ಮಾಸ್ತಿಯವರು "ನಮ್ಮ ಈ ಜನ ಬರ್ತಾರೆ ಹಳ್ಳಿ ಜನ ಬರ್ತಾರೆ. ಅವರ ಮಾತುಗಳನ್ನು ಅದೇನು ಚೆನ್ನಾಗಿ ಮಾಡಿದ್ದಾರೆ ಅಂತೀರಿ.... ಹಳ್ಳೀಲೆ ಹುಟ್ಟಬಹುದು, ಹಳ್ಳೀಲೆ ಬೆಳೇಬಹುದು. ಆಡೋ ಮಾತನ್ನು ಕೇಳಿ ಸಂತೋಷಪಟ್ಟು ಇನರಲ್ಲಿ ಬೆರೆತು ಬಾಳಿ ಅದನ್ನ ಜೀರ್ಣಿಸಿಕೊಂಡು ಅದನ್ನು ಉಪಯೋಗಿಸುವ ಶಕ್ತಿ ಇದೆಯಲ್ಲಾ ಅದು ಎಲ್ಲರಿಗೂ ಇರುವುದಿಲ್ಲ." ಮತ್ತೆ "ಪ್ರಮಿಳಾರ್ಜುನೀಯವನ್ನು ಬರೆದ ಕವಿ ಬಹಳ ಬುದ್ಧಿವಂತ. ಆತ ನಮ್ಮ ಜನಗಳ ಜೀವನ ರೀತಿಯನ್ನು ಬಹಳ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಕನ್ನಡದಲ್ಲಿ ಚೆನ್ನಾಗಿಯೇ ಬರೆಯಬಲ್ಲರು. ಶೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ಭಾಷಾಂತರಿಸುವ ಬದಲು ತಾನೇ ಸ್ವತಂತ್ರ ನಾಟಕಗಳನ್ನು ಬರೆದಿದ್ದರೆ, ಅವರ ಪ್ರತಿಭೆ ಸರಿಯಾಗಿ ಉಪಯೋಗವಾಗಿರುತ್ತಿತ್ತು" ಎಂದಿದ್ದಾರೆ.(ವಸಾಹತುಶಾಹಿ ಮತ್ತು ಭಾಷಾಂತರ–ಪು.೯೦)

ಶ್ರೀಕಂಠೇಶಗೌಡರ ಭಾಷಾಶೈಲಿಯನ್ನು ಕೆರೂರ ವಾಸುದೇವಾಚಾರ್ಯರ ಗದ್ಯಭಾಗದಲ್ಲಿ ಕಾಣಬಹುದು. ಕೆರೂರರೂ ಇದೇ ನಾಟಕವನ್ನು ರೂಪಾಂತರಿಸಿದ್ದಾರೆ. ಪದ್ಯಭಾಗದಲ್ಲಿ ಸಂಸ್ಕೃತ ಮಾದರಿಯ ಛಂದೋಬದ್ಧವಾದ, ಪ್ರಾಸ ಸಹಿತವಾದ ಸಾಲುಗಳಿವೆ.

ಪ್ರಮವಾ ಮಣಿಯೇ ಇದೇಂ ನೀ ಮಾಡಿದೆ ॥ಪ॥
ಬಾಲಕಿಯರು ನಾವು ಕೂಡಿ ಪ್ರೇಮದೊಳಾಡಿ
ಸಾಲದ ಸಂತೋಷದಿ ಸುಹಾಸೆ ಕಾಲವ ಕಳೆದಿಲ್ಲವೆ ॥ ೧ ॥
ಒಂದೇ ತಾಣದೊಳುಂಡು ಒಂದೇ ಮಂಚದಿ ಮಲಗಿ
ಒಂದೇ ಭಾವದೊಳಿದ್ದವೆ ಸುಶೀಲೆ ತನುವೆರಡೆನ್ನದೆಲೆ ॥ ೨ ॥
ಮೇಳದಿಂದಲಿ ನಾವು ಹಾಡಿ ನರ್ತಿಸಿ, ಸ್ಮರ
ಸೀಳಿದ ಎದೆ ನೋವಿಗೆ ಮನೋಜ್ಞ ಸುಧೆಯನ್ನು ಪೂಸಿದೆವೆ ॥ ೩ ॥
ಇಂದಿಗೆ ಸಖಿ ನಾವು ಸ್ನೇಹದಿ ಕೂಡಿದ
ಹೊಂದಿಕೆ ಸಡಿಲಾಯಿತೆ! ಸುಜಾತೆ ಸುರಸವು ವಿಷವಾಯಿತೆ? ॥ ೪ ॥

ಆದರೆ ಗದ್ಯದ ಭಾಷೆ ಬಹಳ ಸರಳವಾಗಿದೆ. ಅವರ ರೂಪಾಂತರದ ಶೈಲಿಗೆ ಒಂದು ಉದಾಹರಣೆ :

Hippolita : Four days will quickly steep themselves in
night; Four nights will quickly dream away
the time; And then the noon like to a silver
bow new bent in heaven, shall behold the
night of our solemnities.

**ರೂಪಾಂತರ :**

ಪ್ರಗಲ್ಭಾ : (ಮಂದಹಾಸದಿಂದ) ಅಷ್ಟೇಕೆ ಆತುರತೆ,? ಈ ನಾಲ್ಕು ಹಗಲುಗಳೂ ಬೇಗನೆ ರಾತ್ರಿಗಳಲ್ಲಿ ನುಸುಗಿಕೊಳ್ಳುವುವು; ಸುಖ ಸ್ವಪ್ನಗಳಲ್ಲಿ ನಾಲ್ಕು ರಾತ್ರಿಗಳಾದರೂ ಅರಿಯದೆ ಹೋಗುವುವು. ಬಳಿಕ ಬೆಳ್ಳಿಯ ಬಿಲ್ಲಿನಂ ತೊಪ್ಪುವ ಬಿದಿಗೆಯ ಚಂದ್ರನು (like a silver bow). ಗಗನ ಮಂಡಲದಲ್ಲಿ ಹೊಳೆಯಲಾರಂಭಿಸಿದನೆಂದರೆ, ನಮ್ಮ ವಿವಾಹ ಮಹೋತ್ಸವವು ಸಂಗತತೆಯನ್ನು ಹೊಂದುವುದಿಲ್ಲವೆ?(ಹೊಸಗನ್ನಡದ ಅರುಣೋದಯ–ಪು. ೮೧)

ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳಿಗಿಂತ ಸಾಮಾಜಿಕ ನಾಟಕಗಳ ಭಾಷೆ ಇನ್ನೂ ಸರಳವಾಗಿವೆ. ಆಡು ಮಾತಿಗೆ ತೀರಾ ಹತ್ತಿರವಿದ್ದು ಸಹಜವಾಗಿ ವ್ಯಕ್ತಿಗಳ ನಡುವೆ ನಡೆಯುವ ಮಾತಿನ ದಾಟಿಯನ್ನು ಕಾಣಬಹುದಾಗಿದೆ. ಕನ್ಯಾವಿಕ್ರಯ ನಾಟಕದ ಭಾಷಾಶೈಲಿ ಹೀಗಿದೆ–

ಶಂಭಟ್ಟ- ನಮಗೆ ಸಾಯುವ ಪರಿಯಂತರವೂ ಸುರಕ್ಷತೆಯಿಂದ ಅಶನ ವಸನ ಶಿಕ್ಕುವಂತೆ ನಡೆಸಿಕೊಟ್ಟರೆ ತೀರಿತು. ಹೆಚ್ಚೇನು ಬೇಡ.

ರಾಮಭಟ್ಟ- ಬಹಳ ಒಳ್ಳೆಯದಾಯಿತು. ನೀವೆಲ್ಲರೂ ನಮ್ಮ ಮನೆಯಲ್ಲೇ ಬಂದು ಇದ್ದು ಬಿಡಿರಿ!

ಇದರಲ್ಲಿ ಹವ್ಯಕ ಕನ್ನಡ ಪರಿಸರದ ಶೈಲಿ ಇದೆಯಾದರೂ ಭಾಷೆ ಸರಳವಾಗಿದೆ. ಇದೆ ಮಾದರಿಯ ಭಾಷಾಶೈಲಿಯನ್ನು 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ', 'ಆರು ಬೆರಳಿನ ಕುರುಹು' ಮುಂತಾದ ನಾಟಕಗಳಲ್ಲಿ ಕಾಣಬಹುದು.

ಹೀಗೆ ೧೯ನೇ ಶತಮಾನದಲ್ಲಿ ನಾಟಕವೆಂಬ ಪ್ರಕಾರವೊಂದು ರಂಗಪ್ರದರ್ಶನದ ಹಿನ್ನೆಲೆಯಾಗಿ ಪ್ರವೇಶ ಪಡೆದರೂ ಅದಕ್ಕೆ ಹೊಸ ಮಾದರಿಗಳನ್ನು, ಚಿಂತನೆಗಳನ್ನು ಒದಗಿಸಿದ್ದು ಪಾಶ್ಚಾತ್ಯರ ನಾಟಕಗಳು ಅನುವಾದಗೊಳ್ಳುವುದರೊಂದಿಗೆ. ಪಾರ್ಸಿ ಹಾಗೂ ಮರಾಠಿ ನಾಟಕ ಕಂಪನಿಗಳಂತಹ ನಾಟಕ ಪ್ರದರ್ಶನದಿಂದಾಗಿ ಜನ ಕನ್ನಡ ಭಾಷೆಯ ಬಗ್ಗೆ ತೋರಿದ ನೀರಸ ಭಾವನೆಯನ್ನು ನಿವಾರಿಸುವ ಹಿನನೆಲೆಯಲ್ಲಿ ನಾಟಕ ಪ್ರಕಾರ ತನ್ನ ಸ್ವರೂಪವನ್ನು ಬದಲಾಯಿಸಿಕೊಂಡು ರಚನೆಯಾಯಿತು. ಆರಂಭದಲ್ಲಿ ಸಂಸ್ಕೃತದ ಪೌರಾಣಿಕ ವಸ್ತುವುಳ್ಳದ್ದಾದರೂ ಅದರ ಭಾಷೆ ಹಾಗು ತಂತ್ರ ಹೊಸತಾಗಿತ್ತು ನಂತರದಲ್ಲಿ ಹೊಸ ಪಾಶ್ಚಾತ್ಯರ ಐತಿಹಾಸಿಕ ತಿರುಳುಳ್ಳ ಮಾದರಿಯು ಲಭ್ಯವಾಯಿತು. ಅಲ್ಲದೆ ವಾಸ್ತವ ವಿಚಾರಗಳನ್ನು ಹೊಸ ಆಲೋಚನೆಯಲ್ಲಿ ವಿವರಿಸಿಕೊಳ್ಳುವ ಮನೋಧರ್ಮ ಹಾಗೂ ರಂಗ ಪ್ರಯೋಗದ ಮೂಲಕ ಸಾಮಾಜಿಕ ಸಮಸ್ಯೆಗಳಲ್ಲಿ ಬದಲಾವಣೆ ತರುವ ಚಿಂತನೆ ಹಾಗೂ ಪ್ರಯತ್ನಗಳು ಈ ಕಾಲಘಟ್ಟದಲ್ಲಿ ನಡೆಯಿತು. ಅಲ್ಲದೆ ಅಂದಿನ ಸಾಮಾಜಿಕ, ಧಾರ್ಮಿಕ ವಿಚಾರಗಳಲ್ಲಿದ್ದ ಮೌಢ್ಯತೆಯನ್ನು ನಿವಾರಿಸಲು ನಾಟಕಗಳನ್ನು ಉತ್ತಮ ಸಾಧನವಾಗಿ ಬಳಸಿಕೊಂಡರು. ಹೀಗೆ ನಾಟಕ ಪ್ರಕಾರವು ಅನುವಾದಗಳ ಮೂಲಕ ಹೊಸ ಚಿಂತನೆಯಾಗಿ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು.

* * * * *

೭. ಅಧ್ಯಾಯ

# ಸಾಮಾನ್ಯರ ಸಾಹಿತ್ಯವಾಗಿ ಸಣ್ಣಕತೆ

ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದ ಹುಟ್ಟಿಕೊಂಡ ಮತ್ತೊಂದು ಗದ್ಯಪ್ರಕಾರವೆಂದರೆ 'ಸಣ್ಣಕತೆಗಳು'. ಕತೆ ಅನ್ನುವ ಪ್ರಕಾರವು ಕನ್ನಡಕ್ಕೆ ಹೊಸತಲ್ಲ. ಕನ್ನಡದ ಮೊದಲ ಉಪಲಬ್ಧ ಸಾಹಿತ್ಯ ಕೃತಿ 'ವಡ್ಡಾರಾಧನೆ'ಯು ಧಾರ್ಮಿಕ ವಿಚಾರಗಳನ್ನು ತಿಳಿಸುವ ಒಂದು ಕಥಾಗುಚ್ಛ. ೧೧ನೇ ಶತಮಾನದಲ್ಲಿ ದುರ್ಗಸಿಂಹನಿಂದ ರಚಿತವಾದ 'ಪಂಚತಂತ್ರ'ವು ಒಂದು ನೀತಿಬೋಧಕ ಕಥಾ ಸಂಕಲನ. ಇದಲ್ಲದೆ ಜನಪದ ಸಾಹಿತ್ಯದಲ್ಲಿ ಸಿಗುವ ಸಮ್ಮೃದ್ಧವಾದ ಕಥೆಗಳು, ಅಜ್ಜಿಕಥೆಗಳು ಕನ್ನಡದಲ್ಲಿ ಇವೆ.

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕಥಾ ಸಾಹಿತ್ಯಕ್ಕೆ ತನ್ನದೇ ಆದ ಪ್ರಾಚೀನತೆಯನ್ನು ಕಾಣಬಹುದು. ಪೈಶಾಚಿ ಭಾಷೆಯಲ್ಲಿ ರಚಿತವಾದ ಗುಣಾಢ್ಯನ 'ಬೃಹತ್ಕಥಾ ಕೋಶ'ವು ದೊಡ್ಡ ಕಥಾಗುಚ್ಛ. ಸಂಸ್ಕೃತದ 'ಕಥಾಸರಿತ್ಸಾಗರ' ಮತ್ತು 'ಹಿತೋಪದೇಶ'ದ ಕಥೆಗಳು ಭಾರತೀಯ ಪರಿಸರದಲ್ಲೇ ಹುಟ್ಟಿಕೊಂಡಂತಹ ನೀತಿಕಥೆಗಳೇ ಆಗಿವೆ. ಕವಿರಾಜಮಾರ್ಗಕಾರನು 'ಗದ್ಯಕಥಾ' ಎಂಬ ಪ್ರಕಾರ ಇತ್ತೆಂಬುದನ್ನು ಹೇಳುತ್ತಾನೆ. ಇದಷ್ಟೇ ಅಲ್ಲದೆ 'ಮಹಾಭಾರತ' ಮತ್ತು ರಾಮಾಯಣಗಳೂ ಬೃಹತ್ ಕಥಾಕೋಶವೇ ಆಗಿದೆ. ಪಂಪನು ಕಾವ್ಯ ರಚನೆಯ ಕುರಿತು 'ಕಥೆಯ ಮೆಯ್ಗಡಲೀಯದೆ' ಎಂದರೆ ಕುಮಾರವ್ಯಾಸನು 'ತಿಳಿಯ ಹೇಳುವೆ ಕೃಷ್ಣ ಕಥೆಯ ಇಳೆಯ ಜಾಣರು ಮೆಚ್ಚುವಂತೆ' ಎಂದು ಹೇಳಿದ್ದಾನೆ. ಮಳೆಗಾಲದ ಬೇಸರಿಕೆಯನ್ನು ಕಳೆಯುವುದಕ್ಕಾಗಿ ನಲ್ಗತೆಯೊಂಧನ್ನು ಹೇಳೆಂದು ಮುದ್ದಣ್ಣನ್ನು ಮನೋರಮೆ ಕೇಳಿದಾಗ ರಾಮಾಶ್ವಮೇಧದ ಕಥೆಯನ್ನು ಹೇಳುತ್ತಾನೆ. ಒಟ್ಟಾರೆ ಭಾರತೀಯ ಪರಿಸರದಲ್ಲಿ ಕಥೆ ಹೇಳುವ ಕ್ರಿಯೆ ಪುರಾತನವಾದುದು.

ಆದರೆ ಇಂಥಹ ಕಥೆಗಳಿಗೆ ಭಿನ್ನವಾದ ಮಾದರಿಯೊಂದು ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಕಾಣಿಸಿಕೊಂಡಿತು. ಇಂಗ್ಲಿಷ್‌ನ 'ಽಂಡಿಣ, ಣಂಡಿಥಿ'ಯ ಲಕ್ಷಣವುಳ್ಳ ಸಣ್ಣಕಥೆಯೇ ಆ ಹೊಸ ಮಾದರಿ.

## ಪ್ರಕಾರ

ಒಬ್ಬ ವ್ಯಕ್ತಿ ತನಗೆ ಜೀವನದಲ್ಲಿ ಆದ ಸ್ವಅನುಭವ ಹಾಗೂ ಪರಾನುಭವವನ್ನು ಸರಳವಾಗಿ ಕೆಲವೇ ಸಾಲುಗಳಲ್ಲಿ ಹೇಳಲು ಸಾಧ್ಯವಾಗುವಂತಹ ಸಾಹಿತ್ಯ ಮಾಧ್ಯಮದ ಬರುವಿಕೆ ೧೯ನೇ ಶತಮಾನದ ತುಡಿತಗಳಲ್ಲಿ ಒಂದು. ಗದ್ಯ ಮಾದರಿಗಳಲ್ಲಿ ಕಾದಂಬರಿ ಪ್ರಕಾರವು ಹೆಚ್ಚು ಮಾನ್ಯತೆಯನ್ನು ಸ್ಥಾಪಿಸುತ್ತಿತ್ತು. ಇಂತಹ ಸಂದರ್ಭದಲ್ಲೇ ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಬಹಳ ವಿಶಿಷ್ಟವಾದ

ಪ್ರಕಾರವಾದ ಸಣ್ಣಕಥೆ ತನ್ನ ಸ್ಥಾನವನ್ನು ಪಡೆಯಿತು. ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಹುಟ್ಟಿಕೊಂಡ ಹೊಸ ಪ್ರಕಾರಗಳನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ವಿಚಾರದಲ್ಲಿ ಅದರ ಭಾಷೆ, ಶೈಲಿ ಕುರಿತಂತೆ ಅನೇಕರು ತಮ್ಮದೇ ಆದ ಸಮರ್ಥನೆ ಇಲ್ಲವೆ ಟೀಕೆಗಳನ್ನು ನೀಡಿದ್ದಾರೆ. ಇಂತಹ ಗೊಂದಲಗಳಿಂದ ಮುಕ್ತವಾದ ಒಂದು ನವೀನ ಪ್ರಕಾರವೇ ಸಣ್ಣಕಥೆ. ಜೊತೆಗೆ ಈ ಪ್ರಕಾರದ ಕಥೆಗಳನ್ನು ಕುರಿತು ವಿಮರ್ಶಕರೂ ಹೆಚ್ಚಾಗಿ ಚರ್ಚಿಸಿಲ್ಲ. ಇದಕ್ಕೆ ಇದನ್ನು ಬರೆಯುವ ಸಂದರ್ಭದಲ್ಲಿ ಕಥೆಗಾರರು ಯಾವುದೇ ಗೊಂದಲಗಳನ್ನು ವ್ಯಕ್ತ ಪಡಿಸದೇ ಇರುವುದು ಇಲ್ಲವೆ ಸಣ್ಣ ಪ್ರಕಾರವೆಂದು ನಿರ್ಲಕ್ಷಿಸಿರಬಹುದು, ಇಲ್ಲವೆ ಕೇವಲ ಮನರಂಜನೆಯ ಮಾಧ್ಯವಾಗಿಯಷ್ಟೇ ಸ್ವೀಕರಿಸಿದ್ದು ಇದಕ್ಕೆ ಕಾರಣವಿರಬಹುದು.

ಇದು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ರೂಪಿತವಾದುದ್ದಾದರೂ ಇಲ್ಲಿನ ಸತ್ವಗಳನ್ನು ಮೈಗೂಡಿಸಿಕೊಂಡು ಸ್ವತಂತ್ರವಾದ ಸಾಹಿತ್ಯ ಪ್ರಕಾರವೆಂಬಂತೆ ರಚನೆಯಾಗಿದೆ. ಇಂತಹದೊಂದು ಪ್ರಕಾರದ ಅವಶ್ಯಕತೆ ಕನ್ನಡ ಪರಿಸರಕ್ಕೆ ಅಗತ್ಯವಾಗಿತ್ತು. ಇದಕ್ಕೆ ಕಾರಣಗಳೆಂದರೆ ದೀರ್ಘವಾದ ಕಾದಂಬರಿ, ನಾಟಕ ಪ್ರಕಾರಗಳು. ಇಲ್ಲವೆ ವೈಯಕ್ತಿಕ ನೆಲೆಯಿಂದ ದೂರವಿದ್ದ ಕಾವ್ಯ ಪ್ರಕಾರ. ಸಣ್ಣಕಥೆ ಹಾಗೂ ಕಾದಂಬರಿಗಳ ನಡುವೆ ಸಾಮ್ಯತೆ ಇದೆಯಾದರೂ ಮತ್ತು ವೈಯಕ್ತಿಕ ವಿಚಾರಗಳನ್ನು ಅನಾವರಣಗೊಳಿಸುವ ಸಾಧನವಾಗಿದ್ದರೂ ಸಣ್ಣಕಥೆಗಿರುವ ನಿರ್ದಿಷ್ಟತೆ, ನಿರೂಪಣೆಯ ವಿಧಾನವು ತೀರಾ ಸಾಮಾನ್ಯರಿಗೂ ಪ್ರಿಯವಾದುದು. ಆದ್ದರಿಂದಲೇ ೧೯ನೇ ಶತಮಾನದಲ್ಲಿ ದೊರೆತ ಅನೇಕ ಹೊಸ ಮಾದರಿಗಳಲ್ಲಿ ಸಣ್ಣಕಥೆಯು ಹುಲುಸಾಗಿ ಬೆಳೆಯಿತು.

ಕನ್ನಡದಲ್ಲಿ ರಚನೆಯಾದ ಸಣ್ಣಕಥೆಗಳ ಸ್ವರೂಪಕ್ಕೂ ಪಾಶ್ಚಾತ್ಯ ಸಣ್ಣಕಥೆಗಳ ಸ್ವರೂಪಕ್ಕೂ ಬಹಳ ವ್ಯತ್ಯಾಸವಿದೆ. ಇಂಗ್ಲಿಷ್‌ನಲ್ಲಿ ಐದಾರು ಸಾಲಿನ ಕಥೆಗಳಿಂದ ಹಿಡಿದು ಹೆಚ್ಚೆಂದರೆ ಮೂರರಿಂದ ನಾಲ್ಕು ಪುಟಗಳ ಕಥೆಗಳು ಈ ವ್ಯಾಪ್ತಿಗೆ ಬರುತ್ತದೆ. ಆದರೆ ಕನ್ನಡದ ಸಣ್ಣಕಥೆಗಳ ಲಕ್ಷಣ ಕುರಿತಂತೆ ಆಗಿನ ಪತ್ರಿಕೆಯೊಂದರಲ್ಲಿ ಹೀಗೆ ಹೇಳಿದ್ದಾರೆ "ಪುಟ, ಪರಿಮಿತಿ, ಓದುವುದಕ್ಕೆ ಹಿಡಿಯುವ ಕಾಲ ಮುಂತಾದವುಗಳ ಮೇಲೆ ಕತೆಗಳ ಅಂತಸ್ತನ್ನು ನಿರ್ಧರಿಸುತ್ತಾರೆ. ಅಂದರೆ ೨೦-೩೦ ಪುಟವಿದ್ದರೆ ಸಣ್ಣಕತೆ, ೫೦ರವರೆಗಾದರೆ ನೀಳ್ಗತೆ, ೭೦ ಪುಟವಿದ್ದರೆ ಕಾದಂಬರಿ, ನೂರಕ್ಕೆ ಮೀರಿದರೆ ದೊಡ್ಡ ಕಾದಂಬರಿಯೆಂದು ಸಾಮಾನ್ಯವಾಗಿ ಭಾವಿಸುವುದು ತಪ್ಪಾಗುತ್ತದೆ. ಆಕಾರದೆಡೆ ಗಮನವಿಡುವುದು ಮುಖ್ಯವಾದರೂ ಅದೊಂದೇ ಪ್ರಧಾನವಲ್ಲ. ಕಾದಂಬರಿಯು ಪಾತ್ರಗಳ ರಚನೆಯಲ್ಲಿ ಪ್ರಮುಖ ಪಾತ್ರವಹಿಸುವಂತೆಯೇ ಸಣ್ಣಕತೆಗಳು ಏಕಕೇಂದ್ರವಾದ ಸನ್ನಿವೇಶನಿರೂಪಣೆಯಲ್ಲಿ ಆಸಕ್ತಿವಹಿಸುತ್ತದೆ."(ಕನ್ನಡ ನುಡಿ ಪತ್ರಿಕೆ-ಆಗಸ್ಟ್ ೧೩, ೧೯೪೮) ಎಂದಿದ್ದಾರೆ.

ಇದರ ಜೊತೆಗೆ ಅದರ ಸ್ವರೂಪ ಹಾಗೂ ವ್ಯಾಪ್ತಿ ಕುರಿತು ಎಂ.ವಿ.ಸೀತಾರಾಮಯ್ಯನವರು "ಸಣ್ಣ ಕಥೆ, ಕಾದಂಬರಿ-ಇವು ಆಧುನಿಕ ಗದ್ಯಕಥಾ ಸಾಹಿತ್ಯದ ಎರಡು ವಿಶಿಷ್ಟವಾದ ಪ್ರಕಾರಗಳು. ಒಂದನ್ನೊಂದು ಅವಲಂಬಿಸದೆ ಎರಡೂ ಸ್ವತಂತ್ರವಾಗಿ ಬೆಳೆದಿವೆ. ಎರಡರ ಗುರಿಯೂ ಕಥೆ

ಹೇಳುವುದು. ಘಟನೆ, ಪಾತ್ರ, ಸನ್ನಿವೇಶ, ವರ್ಣನೆ, ಸಂಭಾಷಣೆ– ಇವು ಕಥೆಯ ಅವಯವಗಳು; ಇವನ್ನುಳ್ಳ ಒಂದು 'ಕಥೆ' ಸಣ್ಣಕಥೆಗೂ ಕಾದಂಬರಿಗೂ ಸಮಾನವಾದ ಅಂಶ. ಆದರೂ, ಸಣ್ಣಕಥೆಯನ್ನು ಹಿಗ್ಗಿಸಿದರೆ ಅದು ಕಾದಂಬರಿಯಾಗದು; ಕುಗ್ಗಿಸಿದರೆ, ಕಾದಂಬರಿ ಸಣ್ಣಕಥೆಯಾಗದು. ಕಾದಂಬರಿಯ ಪ್ರಪಂಚ ವಿಸ್ತಾರವಾದದ್ದು..... ಸಣ್ಣಕಥೆಯ ಪ್ರಪಂಚ ಸಣ್ಣದು; ಆದರೂ ಸ್ವಯಂಪರಿಪೂರ್ಣ. ಇಲ್ಲಿ ಕಥೆಗಾರನಿಗೆ ಕಾದಂಬರಿಕಾರನಿಗೆ ಇರುವ ಸ್ವಾತಂತ್ರ್ಯವಿಲ್ಲ. ಸಣ್ಣಕಥೆಯಲ್ಲಿ ಯಾವ ಒಂದು ವಿವರವೇ ಆಗಲಿ, ಸಂಗತಿಯೇ ಆಗಲಿ, ವರ್ಣನೆಯೇ ಆಗಲಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕಥೆಯ ಒಟ್ಟಿನಲ್ಲಿ ಪರಿಣಾಮಕ್ಕೆ ಪೋಷಕವಾಗಿರಬೇಕು." (ಕನ್ನಡ ನುಡಿ–ಬೆಳ್ಳಿ ಸಂಚಿಕೆ ೧೯೬೩)ಎಂದಿದ್ದಾರೆ. ಇಂತಹ ಸೀಮಿತ ವ್ಯಾಪ್ತಿಯನ್ನು ಹೊಂದಿದ್ದರಿಂದಲೇ ಈ ಪ್ರಕಾರವು ಹೆಚ್ಚು ಮಾನ್ಯತೆಯನ್ನು ಪಡೆಯಿತು.

ಸಣ್ಣಕಥೆಯ ನಿರ್ಮಾಣದ ಸಂದರ್ಭದಲ್ಲಿ ಅನೇಕ ಅನುವಾದಿತ ಕಥೆಗಳು ಲಭ್ಯವಿದ್ದವು. ಆದರೆ ಸಾಮಾಜಿಕ ವಿಚಾರವುಳ್ಳ ಸಣ್ಣಕಥೆಯ ಮಾದರಿಯು ಇದ್ದಕ್ಕಿದ್ದಂತೆ ರಚಿತವಾದುದಕ್ಕೆ ಯಾವುದೇ ಮಹತ್ತರದ ಸಂಗತಿಗಳು ಕಾರಣವಾದಂತೆ ಮೇಲ್ನೋಟಕ್ಕೆ ಕಾಣುವುದಿಲ್ಲ. ಆದರೆ ಸೂಕ್ಮವಾಗಿ ಗಮನಿಸಿದರೆ ಇದರ ರಚನೆಯ ಹಿನ್ನೆಲೆಯನ್ನು ಗುರುತಿಸಬಹುದು. ಕೆರೂರು ವಾಸುದೇವಾಚಾರ್ಯರ ಕಥೆಗಳನ್ನು ಗಮನಿಸಿದರೆ ಅಂದಿನ ಸಮಾಜದಲ್ಲಿದ್ದ ಅನೇಕ ಸ್ತ್ರೀ ಕೇಂದ್ರಿತ ಸಮಸ್ಯೆಗಳು ಚರ್ಚೆಯಲ್ಲಿದ್ದವು. ಅದಕ್ಕೆ ಸಂಬಂಧಿಸಿದಂತೆ ಕಾದಂಬರಿಗಳು, ನಾಟಕಗಳು ನಿರ್ಮಾಣವಾಗುತ್ತಿದ್ದವು ಮತ್ತು ಪತ್ರಿಕೆಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಲೇಖನಗಳು ಪ್ರಕಟವಾದವು. ಕೆರೂರರು ಸ್ವತಃ ಕಾದಂಬರಿಕಾರರು. ದೀರ್ಘವಾದ ಕಾದಂಬರಿ ಪ್ರಕಾರವು ಮನರಂಜನೆಗೆ ಸೂಕ್ತ ಮಾದರಿಯಾಗಿತ್ತು. ಇದರಲ್ಲಿ ವಾಸ್ತವ ಜಗತ್ತಿನ ಸಣ್ಣ ಸಣ್ಣ ಸಮಸ್ಯೆಗಳನ್ನು ಕುರಿತು ಜನರಿಗೆ ತಿಳಿಸಲು ಸಾಧ್ಯವಿರಲಿಲ್ಲ. ಕಡಿಮೆ ಪದಗಳಲ್ಲಿ ಸೂಕ್ತ ಮಾಹಿತಿಯನ್ನು ಅರ್ಥವಾಗುವಂತೆ ತಿಳಿಸಲು ಈ ಮಾದರಿ ಸೂಕ್ತವೆನಿಸಿತು. ಅಲ್ಲದೆ ಪಠ್ಯ ಪುಸ್ತಕಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ದೊರೆತ ಅನುವಾದಿತ ಹಾಗೂ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ಸ್ವತಂತ್ರ ಕಥೆಗಳು ಪ್ರಕಟವಾಗುತ್ತಿದ್ದವು. ಇವುಗಳಿಂದ ಪ್ರೇರಿತರಾದ ಜನರು ಈ ಮಾದರಿಯಲ್ಲಿ ಬರೆಯಲು ಆರಂಭಿಸಿದರು.

### ವಸ್ತು

ಸಣ್ಣಕಥೆಯ ಸ್ವರೂಪದಂತೆ ಅದರ ವಸ್ತು ಕೂಡ ವಿಶಿಷ್ಟವಾದ್ದರಿಂದಲೇ ಸಾಮಾನ್ಯರೂ ರಚನೆಯಲ್ಲಿ ತೊಡಗಿಕೊಳ್ಳಲು ಸಾಧ್ಯವಾಗಿದ್ದು. ಕನ್ನಡದಲ್ಲಿ ದೊರೆತ ಆರಂಭದ ಸಣ್ಣ ಕಥೆಗಳು ಪಾಶ್ಚಾತ್ಯ ಸಾಹಿತ್ಯದಿಂದ ಅನುವಾದಿತವಾದದ್ದು. ಈ ಕಥೆಗಳು ಕ್ರೈಸ್ತಧರ್ಮ ಬೋಧಕರು ಸ್ಥಳೀಯವಾಗಿ ಮಾಡುತ್ತಿದ್ದ ಧರ್ಮ ಪ್ರಚಾರಕ್ಕಾಗಿ ಅಂದಿನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಈ ಕ್ರೈಸ್ತ ಧರ್ಮದ ನೀತಿ ಕಥೆಗಳು ಕನ್ನಡದಲ್ಲಿ ಹೊಸ ಮಾದರಿಯ ಸಣ್ಣಕಥೆಗಳು ರಚನೆಯಾಗಲು ಪ್ರೇರಣೆಯಾಗಿವೆ. ಕನ್ನಡದಲ್ಲಿ ಸಣ್ಣಕಥೆಯ ಪ್ರವೇಶಗೊಂಡ ಬಗೆಯನ್ನು ಹೀಗೆ ವಿಂಗಡಿಸಬಹುದು.

೧. ಕ್ರೈಸ್ತಧರ್ಮ ವಿಚಾರವುಳ್ಳ ಕಥೆಗಳು

೨. ನೀತಿ ಕಥೆಗಳು

೩. ಹೊಸ ಮಾದರಿಯ ಕಥೆಗಳು

**೧. ಕ್ರೈಸ್ತಧರ್ಮ ವಿಚಾರವುಳ್ಳ ಕಥೆಗಳು**

ಕ್ರೈಸ್ತ ಮಿಶನರಿಗಳು ತಮ್ಮ ಧರ್ಮ ಪ್ರಚಾರಕ್ಕೆ ಆಯ್ದುಕೊಂಡ ಮಾರ್ಗಗಳಲ್ಲಿ ಸಾಹಿತ್ಯವೂ ಒಂದು. ಅದರಲ್ಲಿ ಕವಿತೆ ಹಾಗೂ ಸಣ್ಣಕಥೆಗಳು ಉತ್ತಮ ಪ್ರಕಾರಗಳೆನಿಸಿದವು. ಆದರೆ ಅವುಗಳನ್ನು ಇಲ್ಲಿನ ಮನೋಧರ್ಮಕ್ಕೆ ಅನ್ವಯಿಸಿ ರೂಪಾಂತರಗಳನ್ನು ಮಾಡಿದರು. ಅಲ್ಲದೆ ನಮ್ಮ ದೇಶದಲ್ಲಿ ಇದ್ದ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕದಂತಹ ಅನೇಕ ಸಮಸ್ಯೆಗಳನ್ನು ವಿಡಂಬಿಸುತ್ತಲೇ ತಮ್ಮ ಧರ್ಮದ ಪ್ರಚಾರಕ್ಕೆ ಬೇಕಾದ ರೀತಿಯಲ್ಲಿ ಕಥೆಗಳನ್ನು ನಿರ್ಮಿಸಿದರು. ಸಣ್ಣಕಥೆಗಳಲ್ಲಿ ಯಾವುದಾದರೂ ಸಾಮಾನ್ಯ ವ್ಯಕ್ತಿ ಜೀವನದಲ್ಲಿ ಕಷ್ಟಗಳನ್ನು ಅನುಭವಿಸಿ ತನ್ನ ಧರ್ಮದ ಆಚಾರ ವಿಚಾರಗಳಿಂದ ಯಾವುದೇ ಪರಿಹಾರ ದೊರೆಯದೆ ಕೊನೆಗೆ ಏಸುವಿನಲ್ಲಿ ನಂಬಿಕೆಯಿಟ್ಟು ಪ್ರಾರ್ಥನೆ ಸಲ್ಲಿಸಿ ಜೀವನದಲ್ಲಿ ನೆಮ್ಮದಿಯನ್ನು ಪಡೆದ ಪರಿಯನ್ನು ಈ ಕಥೆಗಳಲ್ಲಿ ತಿಳಿಸಲಾಗುತ್ತಿತ್ತು. ಈ ಅಂಶವೇ ಅಭಿವ್ಯಕ್ತಿಯ ಮಾದರಿಯ ಸಣ್ಣಕಥೆಗಳನ್ನು ಬರೆಯುವುದಕ್ಕೆ ಉಂಟುಮಾಡಿದ ಪ್ರೇರಣೆಗಳಲ್ಲಿ ಒಂದು.

ಕನ್ನಡ ಸಾಹಿತ್ಯದಲ್ಲಿ ಸಣ್ಣಕಥೆಗಳ ಅನುವಾದ ಪ್ರಕ್ರಿಯೆ ಆರಂಭವಾದದ್ದು 'ಯಾತ್ರಿಕನ ಸಂಚಾರ'ವು ಪಾಶ್ಚಾತ್ಯ ಸಾಹಿತ್ಯದಿಂದ ಅನುವಾದವಾಗುವುದರ ಮೂಲಕ. ಇದೊಂದು ಕಥಾಗುಚ್ಛ. ಆರ್.ವೈಗಲ್‌ರವರು ೧೮೪೭ರಲ್ಲಿ ಇದನ್ನು ಕನ್ನಡಕ್ಕೆ ಅನುವಾದಿಸಿದರು. ಇದು ಕನ್ನಡದ ಸಣ್ಣ ಕಥಾ ಪ್ರಕಾರಕ್ಕೆ ದೊರೆತ ಮೊದಲ ಮಾದರಿ. ಇದು ರೂಪಾಂತರ ಶೈಲಿಯಲ್ಲಿದೆ. ಕ್ರೈಸ್ತಧರ್ಮದ ಪ್ರಚಾರವೇ ಇದರ ವಸ್ತು ಹಾಗೂ ಉದ್ದೇಶ. ಭಾರತದ ವಿವಿಧ ಜನಾಂಗದ ವ್ಯಕ್ತಿಗಳನ್ನು ಕಥೆಯಲ್ಲಿ ತಂದಿದ್ದಾರೆ. 'ಕ್ರೈಸ್ತಯ್ಯ' ಎಂಬುವನು ಕ್ರೈಸ್ತ ಧರ್ಮದ ಪ್ರಚಾರಕ. ಇವನು ಇಲ್ಲಿ ಬರುವ ಎಲ್ಲಾ ವ್ಯಕ್ತಿಗಳ ಮೇಲೆ ಪ್ರಭಾವವನ್ನು ಬೀರಿ ತಮ್ಮ ಧರ್ಮದ ಕಡೆ ಸೆಳೆದುಕೊಳ್ಳುವ ಪ್ರಯತ್ನ ನಡೆಸುತ್ತಾರೆ. ಹರಿಕೃಷ್ಣ ಭರಣ್ಯರವರು ಹೇಳುವಂತೆ ಇಲ್ಲಿ ಧರ್ಮಬೋಧೆಯನ್ನು ಪ್ರತ್ಯಕ್ಷವಾಗಿ ಮಾಡಿಲ್ಲ. ಭೇದೋಪಾಯದ ಅಥವಾ ಒಡೆದು ಆಳುವಿಕೆಯ ತಂತ್ರವನ್ನಿಲ್ಲಿ ಕಾಣಬಹುದು. ಭಾರತೀಯ ಧರ್ಮದಲ್ಲಿರುವ ಲೋಪದೋಷಗಳನ್ನೇ ರೂಪಕಗೊಳಿಸಿ ಪಾತ್ರ ಸೃಷ್ಟಿ ಮಾಡಿದುದು ಇದರಲ್ಲಿ ಕಾಣಿಸುತ್ತವೆ. ಈ ಕಥೆಯಲ್ಲಿ ಬರುವ ಕ್ರೈಸ್ತ ಧರ್ಮದ ಪಾತ್ರಧಾರಿಗಳಾದ ಸುವಾರ್ತಿಕ, ಕ್ರೈಸ್ತಯ್ಯ, ವಿಶ್ವಾಸಯ್ಯ ಮುಂತಾದ ಪಾತ್ರಗಳು ಕ್ರೈಸ್ತ ಧರ್ಮದ ಪ್ರಚಾರದ ಹಿನ್ನೆಲೆಯಲ್ಲಿ ಕಾಣಿಸಿಕೊಳ್ಳುತ್ತವೆ.

ಇವರ ಧರ್ಮದ ಪ್ರಚಾರದ ವೈಖರಿ ಈ ರೀತಿ ಇದೆ.

"ಅವನಲ್ಲಿ ಈ ಲೋಕದ ಬೋಧನೆ ಮಾತ್ರ ರುಚಿಯಾಗಿದೆ. ಅವನು ಯಾವಾಗಲೂ ನಿಯಮಪುರವೆಂಬ ಪಟ್ಟಣದಲ್ಲಿ ಆಗುವ ಪ್ರಸಂಗಗಳನ್ನು ಕೇಳಲಿಕ್ಕೆ ಹೋಗುತ್ತಾನೆ. ಈ ಲೋಕದ ಬೋಧನೆಯಲ್ಲಿ ಶಿಲುಬೆಯ ಅನುಭವವು ಇಲ್ಲದ ಕಾರಣ ಅದೇ ಅವನಿಗೆ ಇಷ್ಟವು. ಈ ಪ್ರಕಾರ ಅವನು ಸತ್ಯವಾದ ನನ್ನ ಮಾರ್ಗಗಳಿಗೆ ಅಡ್ಡಿ ಮಾಡಲಿಕ್ಕೆ ನೋಡುತ್ತಾನೆ. ಈ ಮನುಷ್ಯನ ಬೋಧನೆಗೆ ನೀವು ಪೂರ್ಣವಾಗಿ ಅಸಹ್ಯಪಡತಕ್ಕ ಮೂರು ಕಾರಣಗಳಿವೆ" (ಹೊಸಗನ್ನಡದ ಅರುಣೋದಯ–ಪು. ೧೮) ಇತ್ಯಾದಿ. ಅಲ್ಲದೆ, ವಿಶ್ವಾಸಯ್ಯ ಎಂಬ ಪಾತ್ರದ ಮೂಲಕ ಭಾರತದಲ್ಲಿರುವ ಮೂರ್ತಿ ಪೂಜೆ ಇತ್ಯಾದಿಗಳನ್ನು ಟೀಕಿಸಲಾಗಿದೆ.

"ಮನುಷ್ಯರು ಕಲ್ಪಿಸಿದ ದೇವರುಗಳನ್ನು ಆರಾಧಿಸಿ, ವಿಗ್ರಹಗಳಿಗೆ ಪೂಜೆ ಮಾಡಿದರೆ ಸತ್ಯದೇವರ ಶಿಕ್ಷೆಯು ಮನುಷ್ಯರ ಮೇಲೆ ಬರುವದೆಂದೂ, ವಿಗ್ರಹಾರಾಧಕರು ಪಾಪದ ಕೂಪದಲ್ಲಿ ಮುಳುಗಿ ಹೋಗುತ್ತಾರೆಂದೂ ಹೇಳಿದ್ದೇನೆ". (ಹೊಸಗನ್ನಡದ ಅರುಣೋದಯ–ಪು. ೧೦೭)

ನಂತರದಲ್ಲಿ ಇದೇ ಮಾದರಿಯ ಕ್ರೈಸ್ತಧರ್ಮ ಪ್ರಚಾರಕ ಕಥೆಗಳು ಅಂದಿನ ಸಾಹಿತ್ಯ ಪತ್ರಿಕೆಗಳಲ್ಲಿ ಮುದ್ರಣಗೊಂಡವು. ಆದರೆ ಇವು ಇಂಗ್ಲಿಷ್‌ನ ಸಣ್ಣಕಥೆಗಳ ಸ್ವರೂಪಕ್ಕಿಂತ ಭಿನ್ನವಾಗಿದೆ. ಇದರಲ್ಲಿ ದೀರ್ಘವಾದ ಕಥಾಹಂದರವನ್ನು ಕಾಣಬಹುದು. ಆರಂಭದಲ್ಲಿ ಬಂದಂತಹ ಕಥೆಗಳು ಭಾರತೀಯ ಪರಿಸರಕ್ಕೆ ಹೊಂದಿಕೆಯಾಗುವಂತೆ ರೂಪಾಂತರಗೊಂಡವು. ನಂತರದಲ್ಲಿ ಅದೇ ಮಾದರಿಯನ್ನು ಅನುಸರಿಸಿ ಇಲ್ಲಿನ ಧಾರ್ಮಿಕ ವಿಚಾರಗಳ ಸೂಕ್ಷ್ಮತೆಯನ್ನು ಬಳಸಿಕೊಂಡು ಸ್ವತಂತ್ರ ಕಥೆಗಳನ್ನು ರಚಿಸಿದರು. ಚಂದ್ರಲೀಲೆ, ಸಂಧ್ಯಾಭ್ರಲೇಖೆಯಂತಹ ಕ್ರೈಸ್ತಧರ್ಮ ಪ್ರಚಾರಕ ಕತೆಗಳು ಈ ಮಾದರಿಯವಾಗಿವೆ. ಅಂದಿನ ಅನೇಕ ಕ್ರೈಸ್ತಧರ್ಮ ಪ್ರಚಾರಕ ಪತ್ರಿಕೆಯಲ್ಲಿ ಇಂತಹ ಕಥೆಗಳು ಮುದ್ರಿತವಾಗಿದೆ.

೧೯೦೦ ಜನವರಿ ತಿಂಗಳ ಸತ್ಯದೀಪಿಕೆ ಪತ್ರಿಕೆಯಲ್ಲಿ ಪ್ರಕಟವಾದ ಚಂದ್ರಲೀಲೆಯ ಕಥೆಯ ವಸ್ತು ಹೀಗಿದೆ:– "ನೇಪಾಳದ ಬ್ರಾಹ್ಮಣ ಹೆಣ್ಣು ಮಗಳೊಬ್ಬಳು ಜೀವನದಲ್ಲಿ ಸಾಕಷ್ಟು ಕಷ್ಟಗಳನ್ನು ಅನುಭವಿಸಿ ಅನೇಕ ತೀರ್ಥಯಾತ್ರೆಗಳನ್ನು ನಡೆಸಿ ಜೀವನದಲ್ಲಿ ನೆಮ್ಮದಿ ಕಾಣದೆ ಕೊನೆಗೆ ಕ್ರೈಸ್ತಧರ್ಮ ಅನುಸರಿಸಿ ನೆಮ್ಮದಿಯನ್ನು ಹೊಂದಿದ ಕತೆ ಇದಾಗಿದೆ."

ಈ ಕಥೆಗಳೆಲ್ಲದ ಉದ್ದೇಶ ಭಾರತೀಯರಲ್ಲಿ ಕ್ರೈಸ್ತ ಧರ್ಮವನ್ನು ನೆಲೆಯೂರಿಸಿ ಅದನ್ನೆ ಅನುಸರಿಸಲು ಮುಂದಾಗುವಂತೆ ಪ್ರೇರಣೆ ನೀಡುವದೇ ಆಗಿದೆ.

**೨. ನೀತಿ ಕಥೆಗಳು**

ಈಗಾಗಲೇ ಹೇಳಿದಂತೆ ಭಾರತೀಯ ಸಾಹಿತ್ಯದಲ್ಲಿ ಕಥಾಪ್ರಕಾರವೊಂದು ಇರುವುದು ಗಮನಾರ್ಹ. ವಡ್ಡಾರಾಧನೆ ಹಾಗೂ ಪಂಚತಂತ್ರ ಕಥೆಗಳು ಕನ್ನಡದಲ್ಲಿ ರಚನೆಯಾದರೂ ತರುವಾಯದಲ್ಲಿ

ಕಥಾ ಪ್ರಕಾರವು ಹೆಚ್ಚು ಪ್ರಾಶಸ್ತ್ಯ ಪಡೆಯಲಿಲ್ಲ. ಈ ಎರಡೂ ಕಥಾಸಂಕಲನಗಳು ಭಿನ್ನವಾದ ವಸ್ತುವನ್ನೊಳಗೊಂಡ ಕೃತಿಗಳಾಗಿವೆ. ವಡ್ಡಾರಾಧನೆಯು ಜೈನಧರ್ಮದ ವಿಚಾರಗಳನ್ನು ತಿಳಿಸುವ ಕೃತಿಯಾದರೆ; ಪಂಚತಂತ್ರವು ನೀತಿ ವಿಚಾರಗಳನ್ನು ಹೇಳುವ ಕಥೆಗಳಾಗಿವೆ. ಇವು ಅನುವಾದ ಕೃತಿಗಳೇ.

ಆದರೆ ಕನ್ನಡ ಸಾಹಿತ್ಯವನ್ನು ಈ ಹೊಸ ಮಾದರಿಯ ಸಣ್ಣಕಥೆಗಳು ಪ್ರವೇಶ ಪಡೆದದ್ದು 'ಯಾತ್ರಿಕನ ಸಂಚಾರ'ವು ಅನುವಾದಗೊಂಡ ನಂತರದಲ್ಲಿಯೇ. ನಂತರದಲ್ಲಿ ಎಲಿಯಟ್ ಎಂಬುವುದನ್ನು 'ಇಸೋಪನ ನೀತಿಕಥೆ'ಗಳನ್ನು ಶಾಲಾ ಮಕ್ಕಳ ಅಭ್ಯಾಸಕ್ಕಾಗಿ ಅನುವಾದ ಮಾಡಿದನು. ಇದು ಹೊಸಗನ್ನಡದಲ್ಲಿ ದೊರೆತ ಮೊದಲ ಅನುವಾದದ ನೀತಿಕಥೆಗಳಾಗಿವೆ. ಈ ಕೃತಿಯ ನಂತರದಲ್ಲಿ ಸಂಸ್ಕೃತದ ಕಥೆಗಳು ಕನ್ನಡದಲ್ಲಿ ಇದ್ದಕ್ಕಿದ್ದಂತೆ ಅನುವಾದಗೊಳ್ಳಲು ಆರಂಭವಾಗುತ್ತದೆ. ಈ ಅನುವಾದ ಪ್ರಕ್ರಿಯೆಗೆ ಈ ಎರಡೂ ಕೃತಿಗಳು ಪ್ರೇರಣೆ ಹಾಗೂ ಪ್ರಭಾವವನ್ನು ಉಂಟುಮಾಡಿವೆ. ಇದಕ್ಕೆ ಕಾರಣಗಳನ್ನು ಹೀಗೆ ಊಹಿಸಬಹುದು. "ಮೊದಲನೆಯದಾಗಿ ಈ ಕೃತಿಗಳಿಗೆ ಸಿಕ್ಕ ಪ್ರಾಶಸ್ತ್ಯ, ಎರಡನೆಯದಾಗಿ ನೀತಿ ಕಥೆಗಳ ಹೊಸ ಮಾದರಿ, ಮೂರನೆಯದಾಗಿ ಕ್ರೈಸ್ತಧರ್ಮ ಪ್ರಚಾರದ ಪ್ರಭಾವ ಹೆಚ್ಚಾಗಿದ್ದರಿಂದ ಹಿಂದೂ ಧಾರ್ಮಿಕ ವಿಚಾರಗಳನ್ನು ಜನರಿಗೆ ಸುಲಭವಾಗಿ ತಲುಪಿಸುವ ಕಾರ್ಯ."

ಈ ಹಿನ್ನೆಲೆಯಲ್ಲಿ ಸ್ಥಳೀಯ ಬರಹಗಾರರು ಸಂಸ್ಕೃತದ ಕಥೆಗಳಾದ ಬೇತಾಳ ಪಂಚವಿಂಶತಿ, ಶುಕ ಸಪ್ತಶತಿ, ಪಂಚತಂತ್ರ, ರಾಮಾಯಣ, ಮಹಾಭಾರತದ ಮುಖ್ಯ ಪ್ರಸಂಗಗಳನ್ನು ಕಥೆಗಳನ್ನಾಗಿ ರಚಿಸಿದರು. ನೀತಿಕಥೆಗೆ ಪ್ರಸಿದ್ಧವಾದ ಕಥೆಗಳಲ್ಲಿ ಪಂಚತಂತ್ರದ ಕಥೆ (೧೮೭೮) ಮುಖ್ಯವಾದುದು. ಇದರ ಕನ್ನಡಾನುವಾದದ ಭಾಷೆಯು ಪೂರ್ತಿಯಾಗಿ ಹೊಸಗನ್ನಡದಲಿಲ್ಲ. ವಾಕ್ಯಗಳು ಉದ್ದುದ್ದವಾಗಿವೆ. ಆದರೆ ಅನಾವಶ್ಯಕ ವರ್ಣನೆಗಳಿಲ್ಲದೆ ಕಥೆಯು ಸುಲಭವಾಗಿ ಅರ್ಥವಾಗುತ್ತದೆ.

"ಅತ್ಯಾಶೆಯುಳ್ಳ ನರಿ ಕೆಟ್ಟದ್ದು"

"ಮಂದರ ಪರ್ವತದ ತಪ್ಪಲಲ್ಲಿ ತಮರಾಶಿಯೆಂಬುದೊಂದು ಘೋರಾರಣ್ಯದಲ್ಲಿ ಒಬ್ಬ ಬೇಟೆಗಾರಂ ಬಂದು ಬಲೆಯಂ ಹಾಕಿಕೊಂಡು ಒಂದು ಹರಿಣನ ಕೊಂದು ಹೊತ್ತು ಹೋಗುತ್ತಂ ಇರಲು, ಒಂದು ಕಾಡ ಹಂದಿಯು ಈ ಬೇಟೆಗಾರನಂ ಕಂಡು, ಮಹಾಭರದಿಂದ ಬಂದು ಹೊಯ್ಯಲು, ಅವನು ಈಟಿಯಲ್ಲಿ ಇರಿಯಲು, ಆ ಹಂದಿಯು, ಈ ಬೇಟೆಗಾರನು, ಆ ಹರಿಣ ಸಹಾ ಮೂವರು ದಾರಿಯಲ್ಲಿ ಸತ್ತು ಬಿದ್ದು ಇರಲು...." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೬೯)

ಸಂಸ್ಕೃತದ ಕಥೆಗಳಲ್ಲದೆ ಪಾಶ್ಚಾತ್ಯ ಕಥೆಗಳೂ ಇಂಥಹ ನೀತಿ ಬೋಧಕವಾದವುಗಳು. ಈ ಅಂಶದಿಂದಾಗಿಯೇ ಅವುಗಳ ಅನುವಾದವಾದವು. ಈಸೋಪನ ನೀತಿಕಥೆಗಳು, ಅರೇಬಿಯನ್

ನೈಟ್ಸ್, ಹಾತಿಮಾತಾಯಿ ಕಥೆಗಳು ಪ್ರಮುಖವಾದವು. ಇಂಗ್ಲಿಷ್‌ನಿಂದ ನೇರವಾಗಿ ಅನುವಾದಗೊಂಡ ಕಥೆಗಳೆಂದರೆ ಕೃಷ್ಣಸ್ವಾಮಯ್ಯರವರು ೧೮೫೫ರಲ್ಲಿ ಅನುವಾದಿಸಿದ "ರಾಬಿನ್‌ಸನ್ ಕ್ರೂಸೋ ವೃತ್ತಾಂತಗಳು", ೧೮೬೩ರಲ್ಲಿ ವೆಂಕಟರಂಗೋಕಟ್ಟಿಯವರು ಅನುವಾದಿಸಿದ "ಸುರಸ ಕಥೆಗಳ ಸಂಗ್ರಹ" (ಅರಬ್) ೧೮೭೩ರಲ್ಲಿ ಬಂದ "ಗಲಿವರ ಎಂಬವನು ಲಿಲ್ಲಿಪಟ್ ದೇಶಕ್ಕೆ ಹೋದ ಕಥೆ" ಮುಂತಾದವು. ಇದಲ್ಲದೆ ಷೇಕ್ಸ್‌ಪಿಯರ್‌ನ ನಾಟಕಗಳನ್ನು ಕಥಾ ರೂಪದಲ್ಲಿ ಬರೆದಿದ್ದಾರೆ. ಭಂಡಿವಾಡ ಅವರ "ಕಮಲಾಕ್ಷ ಪದ್ಮಗಂಧಿಯರ ಕಥೆ", ಅಣ್ಣಾಜಿರಾವ್ ಮಲ್ಲೇಶ್ವರರ 'ಕುಸುಮಾಕರ', ಕೆ.ಎಂ. ಕರಿಬಸವಯ್ಯನವರ 'ನಗದವರನ್ನು ನಗಿಸುವ ಕಥೆ' (ಕಾಮೆಡಿ ಆಫ್ ಎರರ್ಸ್) ಇತ್ಯಾದಿ.

ಇದಲ್ಲದೆ ಇಂತಹ ಅನುವಾದಿತ ಕೃತಿಗಳಿಂದ ಪ್ರೇರಣೆ ಪಡೆದ ಅನೇಕರು ತಮಿಳು, ತೆಲುಗಿನಂತಹ ಭಾಷೆಗಳಲ್ಲಿನ ನೀತಿಕಥೆಗಳನ್ನು ಅನುವಾದಿಸತೊಡಗಿದರು. ತೆಲುಗಿನಿಂದ ಧೂರ್ಜಟಿ ಲಕ್ಷ್ಮೀಪತಿಯವರ 'ಹಂಸ ವಿಂಶತಿ', ಶೇಷಾಚಲ ನಾಯಡುರವರ 'ಹನ್ನೆರಡು ರಾಜಪುತ್ರರ ಕತೆ', ತಮಿಳಿನಿಂದ ತಾಂಡವ ಮೊದಲಿಯಾರರ 'ಕಥಾಮಂಜರಿ' ಅನುವಾದವಾದವು.

೧೮೭೪ಕ್ಕೆ ಮುಂಚೆಯೇ ರಚಿಸಿರಬಹುದೆನ್ನಲಾದ ಕನ್ನಡದಲ್ಲಿ ಲಭ್ಯವಾದ ಮೊದಲ ಕಥಾಸಂಕಲನವೆಂದರೆ ಮಾನವಿ ವೀರಪ್ಪನವರಿಂದ ರಚಿಸಲ್ಪಟ್ಟ 'ಕಥಾಸಾಗರ'. ಇದೊಂದು ನೀತಿಕಥೆಗಳನ್ನುಳ್ಳ ಕಾಲ್ಪನಿಕ ಇತಿಹಾಸದ ವಿಚಾರವುಳ್ಳ ಕಥಾಗುಚ್ಛ. ಇದರ ಪ್ರಸ್ತಾವನೆಯಲ್ಲಿ ಈ ಕೃತಿ ರಚನೆಯ ಹಿನ್ನೆಲೆ ಹಾಗೂ ಉದ್ದೇಶವನ್ನು ಹೀಗೆ ಹೇಳಿದ್ದಾರೆ– "ಈ ಪುಸ್ತಕವನ್ನು ಭ್ರೂಪುರಾಂತರ್ಗತವಾದ ಮಾನವಿ ವೀರಪ್ಪನು ಎಂದರೆ ನಾನು ಸರಕಾರದ ಕಾರ್ಯದ ಮೇಲೆ ಧಾರವಾಡ ಗ್ರಾಮದಲ್ಲಿದ್ದು ವೃಥಾ ವ್ಯಾಳೆಗಳೆಯಬಾರದೆಂದು ಸ್ವಕಲ್ಪನೆಯಿಂದಲೂ ಕೇಳುವಿಕೆಯ ಬಲದಿಂದಲೂ ಚಮತ್ಕಾರವುಳ್ಳ ಕಥೆಗಳು, ಶ್ಲೋಕಾರ್ಥಗಳು, ಮಾತುಗಳು ಮೊದಲಾಗಿ ಕಲ್ಪಿಸಿದ, ಶಕೆ (೧೭೭೩) ವಿರೋಧಿಕೃತ ನಾಮ ಸಂವತ್ಸರ ಅಶ್ವೀಜ ಶುದ್ಧ ದ್ವಾದಶಿ ಕ್ರಿಸ್ತ ಸನ್(೧೮೫೧)ನೆ ಇಸವಿ ತಾರೀಖು (೬) ಅಗಟೋಬರ ಇಂದುವಾರ ಪ್ರಾರಂಭಿಸಿದೆನು."(ಹೊಸಗನ್ನಡದ ಅರುಣೋದಯ–ಪು. ೫೪೯)

ಈ ಕೃತಿಯಲ್ಲಿ ವಜ್ರಚೂಡಾಮಣಿ ಎಂಬ ರಾಜನು ಎಷ್ಟೇ ಕಥೆಗಳನ್ನು ಕೇಳಿದರೂ ತೃಪ್ತಿಯಾಗದಿದ್ದಾಗ ಕಥಾಸಾಗರನೆಂಬುವನು ಅನೇಕ ಕಥೆಗಳನ್ನು ಹೇಳಿ ರಾಜನನ್ನು ತೃಪ್ತಿಪಡಿಸಿದ ೫೩ ಕಥೆಗಳು ಇದರಲ್ಲಿವೆ. ಇದರಲ್ಲಿರುವ ಎಲ್ಲಾ ಕಥೆಗಳು ನೀತಿ ಬೋಧಕವಾದದ್ದು. ಇದರಲ್ಲಿ "ಅಲ್ಪ ಕೆಲಸಕ್ಕೆ ರಾಜಸ್ಥಾನಕ್ಕೆ ನ್ಯಾಯವ ಹೋಗುವುದು ಅತಿ ಮೂರ್ಖತನವಾಗಿದೆ", "ಈ ಕಲಿಯುಗದಲ್ಲಿ ಪುಣ್ಯದ ಕೆಲಸ ಮಾಡಲಿಕ್ಕೆ ಅನೇಕ ವಿಘ್ನ ಬರುವವು. ಪಾಪದ ಕಾರ್ಯ ಮಾಡಲಿಕ್ಕೆ ಸರ್ವವೂ ಅನುಕೂಲವಾಗುವವು. ಪರಂತು ದೇವರು ಮೆಚ್ಚನು" ಎಂಬಂತಹ ನೀತಿವಾಕ್ಯಗಳ ಹಿನ್ನೆಲೆಯಲ್ಲಿ ಕಥೆಗಳು ರಚನೆಯಾಗಿವೆ. ಪಂಚತಂತ್ರದ ನೀತಿವಿಚಾರಗಳು ಇದರ ಮೇಲೆ ಪ್ರಭಾವ ಬೀರಿದೆ.

ಇದೇ ವೇಳೆಯಲ್ಲಿ ಅಡಕ್ಕಿ ಸುಬ್ಬರಾಯರು ಅನುವಾದಿಸಿರುವ 'ಕೆಲವು ಕಥೆಗಳು' (A Selection of Stories) ಟಾಲ್‌ಸ್ಟಾಯ್‌ನ ಸಣ್ಣ ಕಥೆಗಳ ಮಾದರಿಯಲ್ಲಿವೆ. ಇದರ ಒಂದು ಕಥೆ ಇಂತಿದೆ.

"ಒಂದು ಹದ್ದೂ ಒಂದು ಕಾಗಿಯೂ ಸುಡುಗಾಡಿನಲ್ಲಿ ವೊಂದು ಮರದ ಮೇಲೆ ಕೂತುಕೊಂಡು ಮಾತನಾಡುತ್ತಾ ಯಿರುವಾಗ ಆ ಹದ್ದು ಕಾಗಿಯಂನು ನೋಡಿ 'ಇಲ್ಲಿಗೆ ಮನುಷ್ಯರ ಹೆಣಗಳು ಆ ವೂರಿಂದ ಮುಂಚಿನ ಹಾಂಗೆ ಹೇರಳವಾಗಿ ಯಾತಕ್ಕೆ ಬರುವುದಿಲ್ಲ?' ಎಂದು ಕೇಳಿತು. 'ಆ ವೂರಿನಲ್ಲಿ ಇದ್ದ ವೈದ್ಯನು ಕೆಲವು ದಿವಸಕ್ಕೆ ಮುಂಚೆ ದೂರ ದೇಶಕ್ಕೆ ಹೊರಟು ಹೋದನು. ಆ ಅವನು ತಿರಿಗೀ ಬಂದರೆ ಹೆಣಗಳಿಗೆ ಕಡಿಮೆಯಿರದು' ಎಂದು ಕಾಗಿ ಉತ್ತರಾ ಕೊಟ್ಟಿತು."(ಹೊಸಗನ್ನಡದ ಅರುಣೋದಯ-ಪು. ೫೫೧) ಈ ಕಥೆ ಐದಾರು ಸಾಲಿನಲ್ಲಿ ಇದೆ. ಆದರೆ ಅದು ಅರ್ಥಗರ್ಭಿತವಾದ ನೀತಿಯೊಂದನ್ನು ಹೇಳುತ್ತಿದೆ. ಪಂಚತಂತ್ರದ ಶೈಲಿಯನ್ನು ಒಳಗೊಂಡಿದೆ. ಟಾಲ್‌ಸ್ಟಾಯ್‌ನ ಕಥೆಗಳು ಹೀಗೆಯೇ ನಾಲ್ಕಾರು ಸಾಲುಗಳಲ್ಲಿ ಪ್ರಾಣಿ ಪಕ್ಷಿಗಳ ಸಂವಾದದಲ್ಲಿ ನೀತಿ ಮಾತುಗಳು ಹೊರಡುತ್ತದೆ. ೧೮೮೦ರ ನಂತರದಲ್ಲಿ ಈ ಮಾದರಿಯ ಅನೇಕ ಕಥೆಗಳು ರಚನೆಯಾದವು. ೧೮೮೫ರಲ್ಲಿ ರಚನೆಯಾಗಿರುವ 'ಧರ್ಮವರ್ಮ ಚರಿತಂ' (ಇದರ ಲೇಖಕರು ಯಾರೆಂದು ತಿಳಿದಿಲ್ಲ) ಮತ್ತು 'ಚರಿತ್ರೆ ಮತ್ತು ಕಥೆಗಳ ಪಂದ್ಯಾವಳಿ' ಎಂಬ ಕೃತಿಯಲ್ಲಿ ಮ.ರಾ.ಕೊರಡಲ್ ಶ್ರೀನಿವಾಸರಾಯರು ನೀತಿ ಬೋಧಕ ಕಥೆಗಳನ್ನು ಬರೆದಿದ್ದಾರೆ. ಬೆಕ್ಕುಗಳೂ ಮಂಗವೂ, ಬೆಕ್ಕು ಸನ್ಯಾಸಿಯಾದುದು. ಕುರುಡರೂ ಆನೆಯೂ, ಸಿಂಹವೂ ಇಲಿಯೂ, ತೋಳನೂ ಕೊಕ್ಕರೆಯೂ, ಪಾರಿವಾಳಗಳೂ ಬೇಡನೂ, ಯಕ್ಷನೂ ಮರ ಕಡಿಯುವವನೂ, ಹೊಟ್ಟೆಯೂ ಅವಯವಗಳೂ ಮುಂತಾದ ಚಿಕ್ಕ ಕಥೆಗಳಿವೆ.

ಇಂತಹ ನೀತಿಕಥೆಗಳು ವೈಯಕ್ತಿಕ ನೆಲೆಯಿಂದ ಸಾಮಾಜಿಕ ವಿಚಾರಗಳ ಅಂಶಗಳಿಗೆ ವಿಸ್ತಾರವಾಯಿತು. ಈ ಪ್ರಕಾರವು ಉತ್ತಮ ನೀತಿಬೋಧಕವೆಂದು ತಿಳಿದು ಅಂದಿನ ಸಮಾಜದಲ್ಲಿನ ಅನೇಕ ಸಮಸ್ಯೆಗಳಿಗೆ ತಿಳಿ ಹೇಳುವ ಕೆಲಸವನ್ನು ಮಾಡಿದರು. ಅಂದಿನ ಅನೇಕ ಸಮಸ್ಯೆಗಳಲ್ಲಿ ಸ್ತ್ರೀ ಶಿಕ್ಷಣವು ಒಂದು. ಇಂತಹ ನೀತಿಯನ್ನು ತಿಳಿಸುವ ಸ್ವತಂತ್ರ ಕಥೆಗಳು ರಚನೆಯಾದವು. ಸ್ತ್ರೀಯೊಬ್ಬಳು ವಿದ್ಯೆಯನ್ನು ಪಡೆದರೆ ಅದರಿಂದಾಗುವ ಪ್ರಯೋಜನವನ್ನು ಕುರಿತು 'ವೈಜಯಂತಿ' ಕಥೆಯನ್ನು ಬರೆದಿದ್ದಾರೆ.

ವೈಜಯಂತಿ ಕಥೆಯ ಸಾರಾಂಶ ಹೀಗಿದೆ – "ಸ್ತ್ರೀಯು ಬುದ್ಧಿವಂತಿಯಾದರೆ ತನ್ನ ಪತಿಯು ತಪ್ಪು ದಾರಿಯಲ್ಲಿ ಹೋದರೆ ಉಪಾಯದಿಂದ ದಾರಿಗೆ ತರುವಳು ಅಲ್ಲದೆ ಪತಿಯು ಮೂರ್ಖನಾಗಿದ್ದು ಸ್ತ್ರೀಯೂ ಮೂರ್ಖಳಾದರೆ ಸಂಸಾರವು ನೆರವೇರುವುದೇ ಇಲ್ಲ" ಈ ಕಾರಣದಿಂದಲೇ ಅಲ್ಲವೆ ಸ್ತ್ರೀಯರು ಅವಶ್ಯವಾಗಿ ವಿದ್ಯೆಯನ್ನು ಕಲಿಯಬೇಕೆಂಬುದು. "ವಿದ್ಯಾವತಿಯರಾದ ಸ್ತ್ರೀಯರ ಲಕ್ಷಣವೇ ಹೀಗೆ ಕೊನೆಯಲ್ಲಿ "ಪ್ರತಿ ಕುಟುಂಬದವರೂ ಹೆಣ್ಣು ಮಕ್ಕಳಿಗೆ ವಿದ್ಯೆಯನ್ನು ಕಲಿಸುವದು

ಅವಶ್ಯಕವಾಗಿದೆ. ಸ್ತ್ರೀಯರಿಗಿರುವ ಮೂಢತನಕ್ಕೆ ಅವರ ವಿದ್ಯಾವಿಹೀನತ್ವವೇ ಕಾರಣವಾಗಿದೆ. ಸ್ತ್ರೀಪುರುಷರೀರ್ವರೂ ವಿದ್ಯೆಯನ್ನು ಕಲಿತಲ್ಲದೆ ಕುಟುಂಬದಲ್ಲಿ ನಿಜವಾದ ಸೌಖ್ಯವು ದೊರೆಯಲಾರದು. ಕುಟುಂಬದಲ್ಲಿ ಸೌಖ್ಯವಿಲ್ಲದ ಮೇಲೆ ರಾಜ್ಯದಲ್ಲಿ ನಾಗರಿಕತೆಯು ಎಲ್ಲಿಂದ ಬಂದೀತು? ವೈಜಯಂತಿಯು ವಿದ್ಯಾವತಿಯಾಗಿದ್ದುದರಿಂದ ಎಷ್ಟು ಸುಲಭವಾಗಿ ತನಗೊದಗಿದ ಕಷ್ಟಗಳನ್ನು ನೀಗಿಸಿಕೊಂಡಳು." (ವಿದ್ಯಾದಾಯಿನಿ–ಪು. ೧೪೩) ಇದು ಇಂಗ್ಲಿಷ್ ಕಥೆಗಳ ಲಕ್ಷಣವನ್ನು ಹೊಂದಿದೆ.

ಹೀಗೆ ಕನ್ನಡದಲ್ಲಿ ಪಾಶ್ಚಾತ್ಯ ಹಾಗೂ ಭಾರತೀಯ ಸಾಹಿತ್ಯದಲ್ಲಿ ಕಥೆ ಹಾಗೂ ಸಣ್ಣಕಥೆ ಪ್ರಕಾರಗಳು ಅನುವಾದದ ಮೂಲಕ ಆರಂಭವಾಯಿತು ಮತ್ತು ಹೊಸ ಚಿಂತನೆಗಳಿಗೆ ಅಡಿಪಾಯವನ್ನು ಹಾಕಿತು.

## ೩. ಹೊಸ ಮಾದರಿಯ ಕಥೆಗಳು

ಹೊಸಗನ್ನಡ ಸಾಹಿತ್ಯದಲ್ಲಿ ೧೯೦೦ರಿಂದ ಕನ್ನಡದಲ್ಲಿ ಸಣ್ಣಕಥೆ ಎಂಬ ನಿರ್ದಿಷ್ಟ ರೂಪದ ಕಥಾಪ್ರಕಾರವು ರಚನೆಯಾಗುವುದರೊಂದಿಗೆ ಹೊಸ ಚಿಂತನೆಗಳು ಆರಂಭವಾಯಿತು. ಹಿಂದಿನಿಂದಲೂ ರೂಢಿಯಲ್ಲಿದ್ದ ದೀರ್ಘ ಕಾವ್ಯಗಳಿಂದ ಬೇಸತ್ತ ಜನ ಕಡಿಮೆ ಅವಧಿಯಲ್ಲಿ ಮನರಂಜನೆಯನ್ನು ಪಡೆಯಲು ಸಣ್ಣಕಥೆಗಳು ಉತ್ತಮವಾಗಿದ್ದುವು. ಅಲ್ಲದೆ ಸಾಹಿತ್ಯದ ರಚನೆಯು ಕಠಿಣವೆನಿಸಿದ್ದ ಅನೇಕರಿಗೆ ಇದು ಉತ್ತಮ ಪ್ರಕಾರವಾಯಿತು. ಅದರ ವಸ್ತು ಸರಳ ಹಾಗೂ ನೀತಿಭೋಧನೆಗೆ ಸೂಕ್ತವೆನಿಸಿತು. ವಾಸ್ತವ ಬದುಕಿನ ಸಣ್ಣ ಘಟನೆಗಳು ಕಥೆಯ ವಸ್ತುವಾಗಬಹುದು ಎಂಬುದು ಇದಕ್ಕೆ ಪ್ರಾಶಸ್ತ್ಯ ದೊರೆಯಲು ಮತ್ತೊಂದು ಕಾರಣ. ಜೊತೆಗೆ ಹೊಸ ಗದ್ಯಪ್ರಕಾರದಲ್ಲಿ ಕಾದಂಬರಿ ಇತ್ತಾದರೂ ಅದೂ ಕೂಡ ದೀರ್ಘವಾಗಿತ್ತು. ಈ ಎಲ್ಲಾ ಕಾರಣಗಳು ಮುಂದೆ ಸಣ್ಣಕಥೆಯು ರಚನೆಯಾಗಲು ಮಾರ್ಗವಾಯಿತು.

ಪಾಶ್ಚಾತ್ಯ ವಿಮರ್ಶಕನಾದ ಓ'ಕಾನರ್ ಎಂಬುವನು ಸಣ್ಣಕಥೆಯ ವಸ್ತು ವಿನ್ಯಾಸ ಕುರಿತು "ಸಣ್ಣಕಥೆಗೆ ನಿಜವಾದ ಅರ್ಥದಲ್ಲಿ ನಾಯಕನಿಲ್ಲ. ಅವನು ಧೀರೋದಾತ್ತನೂ ಅಲ್ಲ, ಧೀರಲಲಿತನೂ ಅಲ್ಲ, ಧೀರೋದ್ಧತನೂ ಅಲ್ಲ, ಸಣ್ಣಕಥೆಯಲ್ಲಿ ಕಾಣಿಸಿಕೊಳ್ಳುವ ಮುಖ್ಯ ಪಾತ್ರಗಳು ಮುಳುಗಿಹೋದ ಜನರ ಗುಂಪಿಗೆ ಸೇರಿದವರು. ಲೇಖಕನಿಂದ ಲೇಖಕನಿಗೆ, ಪೀಳಿಗೆಯಿಂದ ಪೀಳಿಗೆಗೆ ಇವರ ಸ್ವಭಾವ ಬದಲಾಗುತ್ತಾ ಹೋದರೂ ಅವರು ಮೂಲತಃ ಮುಳುಗಿ ಹೋದವರೇ ಇರುತ್ತಾರೆ. ಇವರು ಸಮಾಜದಿಂದ ಬಹಿಷ್ಕೃತರಾದವರು. ಹಾಗಾಗಿ ಸಮಾಜದ ಹೊರ ಅಂಚಿನಲ್ಲಿಯೇ ಸುಳಿದಾಡುವವರು."

ಇದಕ್ಕೆ ಪೂರಕವಾಗುವಂತೆ ಬರ್ನಾಡ್ ಬರ್ಗೋಂಜಿ ಎಂಬ ವಿಮರ್ಶಕ "ಸಣ್ಣಕಥೆಯ ಪಾತ್ರಗಳು ಬದುಕಿನ ಬಲಿಪಶುಗಳು, ಅವಮಾನಿತರು, ನೊಂದವರು, ಹತಾಶರು ಮತ್ತು ಅನಾಥರು." ಎನ್ನುತ್ತಾನೆ. ಕನ್ನಡ ಸಣ್ಣಕಥೆಯ ಮಾದರಿ ರೂಪುರೇಖೆಯನ್ನು ಕುರಿತು ಚರ್ಚಿಸುವಾಗ ೧೯೪೮ರ ಪತ್ರಿಕೆಯಲ್ಲಿ ಈ ಅಂಶಗಳನ್ನು ಹೇಳಿದ್ದಾರೆ.

೧. ಕಥಾವಸ್ತುವಿನಲ್ಲಿ ಅನುಮಾನಕ್ಕೆಡೆಯಾಗಬಾರದು.

೨. ಕತೆಗೆ ಹೊಂದುವಂತೆ ಒಂದು ಸುಂದರ ಆಕಾರವಿರಬೇಕು.

೩. ಸತ್ಯ ಜೀವನದ ಪ್ರತಿಬಿಂಬ ಕಾಣುವಂತಿರಬೇಕು.

ಈ ಅಂಶಗಳನ್ನು ಹೊಸಗನ್ನಡದ ಸಣ್ಣಕಥೆಗಳಲ್ಲಿ ಕಾಣಬಹುದು. ಮೊದಲನೆಯದಾಗಿ ಸಣ್ಣಕಥೆಗಳ ಮುಖ್ಯವಾದ ಲಕ್ಷಣ ವಾಸ್ತವ ಜಗತ್ತಿನ ಸಂಗತಿಗಳು ಇದರ ವಸ್ತು. ಪೌರಾಣಿಕ ಇಲ್ಲವೆ ಕಾಲ್ಪನಿಕ ಕಥಾವಸ್ತುಗಳು ಜನರಿಗೆ ಮನರಂಜನೆಯನ್ನು ನೀಡುತ್ತವೆ. ಆದರೆ ವಸ್ತುವಿನ ವಿಚಾರವಾಗಿ ಯೋಚಿಸಿದಾಗ ವಾಸ್ತವಕ್ಕೂ ಕಥೆಗೂ ನಡುವೆ ಅಜಗಜಾಂತರ ಗೋಚರಿಸುತ್ತದೆ. ಉದಾಹರಣೆಗೆ ಅಜ್ಜಿ ಹೇಳುವ ಇಲ್ಲವೆ ಜನಪದ ಕಥೆಗಳಲ್ಲಿ ಬರುವ ರಾಕ್ಷಸನ ಇಲ್ಲವೆ ಮಂತ್ರವಾದಿಯ ಕಥೆ. ರಾಕ್ಷಸನು ತನ್ನ ಜೀವವನ್ನು ಪಕ್ಷಿಯ ರೂಪದಲ್ಲಿ ಏಳು ಸಮುದ್ರದಾಚೆ ಇರುವ ಗುಹೆಯಲ್ಲಿ ಅಡಗಿಸುವುದು. ಅದನ್ನು ಕಥೆಯ ನಾಯಕ ಹೋಗಿ ಕೊಂದು ಇತರರನ್ನು ರಕ್ಷಿಸುವುದು. ಇಂತಹ ಕೇಳಲು ರಮ್ಯ ಹಾಗೂ ಅದ್ಭುತ ಮನರಂಜನೆಯಾಗಿವೆ ಆದರೆ ವಾಸ್ತವತೆ ಬಹಳ ದೂರ. ಇಂತಹ ವಿಚಾರಗಳಿಗಿಂತ ಸಣ್ಣಕಥೆಯು ಭಿನ್ನವಾದದ್ದು. ಎರಡನೆಯದಾಗಿ ಸಣ್ಣಕಥೆಗೆ ಇಂದು ನಿರ್ದಿಷ್ಟವಾದ ವ್ಯಾಪ್ತಿಯಿದೆ. ಕಾದಂಬರಿಯಂತೆ ದೀರ್ಘವಾದ ವಿವರಣೆ ಇದರಲ್ಲಿ ಇರುವುದಿಲ್ಲ. ವಿಚಾರಗಳು ಕೆಲವೇ ಶಬ್ಧಗಳಲ್ಲಿ ವ್ಯಕ್ತವಾಗಬೇಕು ಅಲ್ಲದೆ ಓದುಗರಿಗೆ ಕಡಿಮೆ ಅವಧಿಯಲ್ಲಿ ಮನರಂಜನೆಯ ಜೊತೆಗೆ ಸಂದೇಶವನ್ನು ನೀಡುವಂತಿರಬೇಕು. ಮೂರನೆಯದಾಗಿ ಒಂದು ಪ್ರದೇಶದ ಜನರ ಜೀವನ ವಾಸ್ತವ ಜಗತ್ತಿನ ಒಳಗೇ ಕಥೆ ಅನಾವರಣಗೊಂಡಂತೆ ಇರಬೇಕು. ಏಕೆಂದರೆ ಈ ಪ್ರಕಾರವು ಮನರಂಜನೆಯ ಜೊತೆಗೆ ಸಂದೇಶವನ್ನು ನೀಡುವುದು ಅದರ ಉದ್ದೇಶ.

ಈ ಅಂಶಗಳನ್ನು ವ್ಯಾಪಾರದ ಗುಟ್ಟು ಮತ್ತು ಪಂಜೆಮಂಗೇಶರಾಯರ ಕಥೆಗಳಿಂದ ಆರಂಭವಾದ ಈ ಪ್ರಕಾರವು ವಾಸ್ತವವೂ, ಸತ್ಯವೂ ಹಾಗೂ ನಿರ್ದಿಷ್ಟ ರೂಪವನ್ನು ಪಡೆದಿದೆ. ಈ ಹೊಸ ಪ್ರಕಾರದಲ್ಲಿ ಮೊದಲು ರಚನೆಯಾದ ಕಥೆಗಳು ಪ್ರಕಟಣೆಯಾಗಿದ್ದು ೧೯೦೦ರ ಸುಹಾಸಿನಿ ಪತ್ರಿಕೆಯಲ್ಲಿ. ಈ ಪತ್ರಿಕೆಯಲ್ಲಿ ಮೊದಲು ಅಚ್ಚಾಗಿರುವ ಕಥೆಯೆಂದರೆ 'ವ್ಯಾಪಾರದ ಗುಟ್ಟು'. ಇದರ ಲೇಖಕ ಯಾರೆಂದು ತಿಳಿದಿಲ್ಲ. ನಂತರದಲ್ಲಿ 'ಪ್ರಭುಲಾ', 'ದುರ್ಗಾವತಿ' ಕಥೆಗಳು ಇವೆ. ಆದರೆ ಇದು ಸ್ವಲ್ಪ ಮಟ್ಟಿನ ಐತಿಹಾಸಿಕ ಅಂಶಗಳನ್ನು ಒಳಗೊಂಡಿದೆ. ಇದಾದ ಮೇಲೆ ಪಂಜೆಯವರ 'ನನ್ನ ಚಿಕ್ಕ ತಾಯಿ', 'ನನ್ನ ಹೆಂಡತಿ', 'ನನ್ನ ಚಿಕ್ಕ ತಂದೆ', 'ನನ್ನ ಚಿಕ್ಕಪ್ಪನ ಉಯ್ಯಿಲ್' ಕಥೆಗಳು ಪ್ರಕಟಗೊಂಡಿವೆ. ಇದರಲ್ಲಿದ್ದ ಚಿಕ್ಕಕಥೆಗಳಲ್ಲಿ ಪಂಜೆಯವರು ಬರೆದ ಕಥೆಗಳು ಹೆಚ್ಚು ಪ್ರವರ್ಧಮಾನಕ್ಕೆ ಬಂದಿವೆ. ದುರ್ಗಾವತಿಯ ಕಥೆಯನ್ನು ಉಗ್ರಾಣದ ಮಂಜೇಶರಾಯರು ಬರೆದಿದ್ದಾರೆ. ಇನ್ನುಳಿದ ಎರಡು ಕಥೆಗಳ ಲೇಖಕರು ತಿಳಿಯದ್ದರಿಂದಲೇ ಇದರ ಬಗ್ಗೆ ಗಮನಹರಿಸಿಲ್ಲವೆಂಬತೆ ತೋರುತ್ತದೆ. ಪತ್ರಿಕೆಯ ಸಂಪಾದಕರೇ 'ಚಿಕ್ಕ ಕತೆಗಳು' ಎಂಬ ಶೀರ್ಷಿಕೆಯಲ್ಲಿ ಈ ಕತೆಗಳನ್ನು ಪ್ರಕಟಿಸಿದ್ದಾರೆ. ಈ ಕತೆಗಳೂ ಸಣ್ಣಕತೆಯ ಚೌಕಟ್ಟಿನಲ್ಲಿದೆ.

ವ್ಯಾಪಾರದ ಗುಟ್ಟು ಕಥೆಯ ಭಾಗ "ನನಗೆ ಹೊಗೆಬಂಡಿಯ ಆಫೀಸಿನಲ್ಲಿ ಕೆಲಸವಿತ್ತು. ೧೦ರೂಪಾಯಿ ಸಂಬಳ ಬರುತ್ತಿತ್ತು. ಮನೆಯಲ್ಲಿ ನಾನು, ನನ್ನ ಹೆಂಡತಿ ಮತ್ತು ನನ್ನ ತಾಯಿ, ಹೀಗೆ ನಾವು ಮೂರು ಮಂದಿ ಇದ್ದೆವು. ೧೦ ರೂಪಾಯಿಯ ಮೇಲೆ ಜೀವನ ನಡೆಯುವುದು ಎಷ್ಟು ಪ್ರಯಾಸಕರ ಎಂಬುದು ಸರ್ವರೂ ಬಲ್ಲರು. ಹಾಗೂ ಹೀಗೂ ಮರ್ಯಾದೆಯಿಂದಲೇ ಕಾಲಕ್ಷೇಪ ಮಾಡಿಕೊಳ್ಳುತ್ತಿದ್ದೆವು." ಹೀಗೆ ಒಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಏನಾದರು ಮಾಡಿ ಹೆಚ್ಚಿನ ಹಣ ಗಳಿಸಲು ನಿರ್ಧರಿಸಿ ಬರಗಾಲದ ಸಂದರ್ಭದಲ್ಲಿ ವ್ಯಾಪಾರ ಮಾಡಲು ಹೋದಾಗ ತನಗಾದ ಅನುಭವವನ್ನು ಹೇಳುವ ಮಾದರಿ ಇದರಲ್ಲಿದೆ. ಮಾಸ್ತಿಯವರ ಕಥೆಗಳ ಎಳೆ ಇದರಲ್ಲಿದೆ.

ಪ್ರಥುಲಾ ಮತ್ತು ದುರ್ಗಾವತಿ ಕಥೆಗಳು ಐತಿಹಾಸಿಕ ಪರಿಸರದಲ್ಲಿನ ಒಬ್ಬ ಸಾಮಾನ್ಯ ಕುಟುಂಬದಲ್ಲಿ ನಡೆಯುವ ಘಟನೆಯನ್ನು ಹೊಂದಿದೆ. ಇದರ ನಿರೂಪಣೆ ಕೂಡ ಹೊಸಗನ್ನಡ ಶೈಲಿಯಲ್ಲಿದೆ.

೧೯೦೦ ರಲ್ಲಿ ಪಂಜೆಯವರು ರಚಿಸಿದ 'ನನ್ನ ಚಿಕ್ಕ ತಾಯಿ' ಯು ಹೊಸಗನ್ನಡದ ಮೊದಲ ಸಣ್ಣ ಕಥೆಯಾಗಿದೆ. ಸಾಮಾಜಿಕ ವಿಷಯವನ್ನಾಧರಿಸಿಕೊಂಡು ಇದರ ರಚನೆಯಾಗಿದೆ. ಕುತೂಹಲಕರವಾದ ಕಥಾನಕವನ್ನಿದರಲ್ಲಿ ಕಾಣಬಹುದು. ಕಥೆಯು ಉತ್ತಮ ಪುರುಷದಲ್ಲಿದೆ:

"ಅನಿವಾರ್ಯವೆಂದು ತೋರುವ ಅಪಾಯಗಳನ್ನು ಪರಿಹರಿಸುವ ಉಪಾಯಗಳು ಮೂಢರ ಮನಸ್ಸಿನಲ್ಲಿಯೂ ಹೊಳೆಯುವುದುಂಟು. ಈ ಮಾತು ನನ್ನ ವಿಷಯದಲ್ಲಿ ಸಿದ್ಧವಾಗಿ ದೃಷ್ಟಾಂತಕ್ಕೆ ಬಂತು. ಆನೆಜಮೆಸರವನ್ನು ಹೇಗೋ ಶೋಧಿಸಿದಿದ್ದರೆ ಚಿಕ್ಕ ತಾಯಿಯ ಮನಸ್ಸು ಎಂದೂ ಸ್ವಸ್ಥವಾಗಿರದು. ಅವಳು ನನ್ನ ಮನೆ ಮಾರನ್ನು ನನ್ನ ಹೆಸರಿಗೆ ಮಾಡುವಳು ಎಂಬುದೊಂದು ಆಶೆಯು ಇನ್ನೂ ಉಳಿಯದು. ನನ್ನ ಚಿಕ್ಕ ತಾಯಿಗೆ ದೇವರ ಮೇಲೆ ಭಕ್ತಿಯೂ ಪೌರಾಣಿಕರ ಮೇಲೆ ಪ್ರೀತಿಯೂ ಅಧಿಕವಾದುದರಿಂದ ಅವಳ ಸರ್ವಸ್ವವು ಅವಳ ಮರಣವನ್ನು ನಿರಂತರ ಎದುರ್ನೋಡುತ್ತಿರುವ ಪೌರಾಣಿಕರ ಹಸ್ತಗತವಾಗುವುದಲ್ಲದೆ, ಅದರಲ್ಲಿ ಒಂದು ಕಾಸೂ ನನ್ನ ಪಾಲಿಗೆ ಬರುವುದರಲ್ಲಿ ಸಂದೇಹವಿತ್ತು..."

ಪಂಜೆಯವರ ಕತೆಗಳಾದ ನನ್ನ ಚಿಕ್ಕತಾಯಿ, ನನ್ನ ಹೆಂಡತಿ, ನನ್ನ ಚಿಕ್ಕತಂದೆ, ನನ್ನ ತಂದೆಯ ಉಯಿಲು ಕಥೆಗಳು ಆರಂಭದಲ್ಲಿ ರಚನೆಯಾಗಿವೆ. ಈ ನಾಲ್ಕೂ ಕಥೆಗಳು ಒಂದಕ್ಕೊಂದು ಕೊಂಡಿಯಂತೆ ಕಥೆಯು ಸಂಬಂಧವನ್ನು ಹೊಂದಿದೆ. ಒಂದು ಕಥೆಯ ಮುಂದುವರೆದ ಭಾಗದಂತೆ ಮತ್ತೊಂದು ಕಥೆ ಆರಂಭಗೊಳ್ಳುತ್ತದೆ. ನಂತರದಲ್ಲಿ ಬರೆದ ಕಮಲಾಪುರದ ಹೋಟ್ಲಿನಲ್ಲಿ, ಭಾರತ ಶ್ರವಣ ಕಥೆಗಳು ಸಣ್ಣಕಥೆಯ ಲಕ್ಷಣವನ್ನು ಹೊಂದಿವೆ.

ಇದೇ ವರ್ಷದಲ್ಲಿ ಐತಿಹಾಸಿಕ ಕಥೆಯ ಮಾದರಿಯಂತೆ ಕಂಡರೂ ಸಾಮಾಜಿಕ ವಿಚಾರವುಳ್ಳ ಎರಡು ಕಥೆ ಪ್ರಕಟವಾಗಿವೆ. ಮೊದಲನೆಯದು ೧೯೦೦ರ ಜೂನ್ ತಿಂಗಳ ಸುಹಾಸಿನಿ ಪತ್ರಿಕೆಯಲ್ಲಿ

ಪ್ರಕಟವಾದ 'ಶ್ರೀಮಂತ ಸವಾಯಿ ಮಾಧವರಾವ್ ಪೇಶ್ವೆ'. ಇದು ಶಿವಾಜಿಯ ಆಳ್ವಿಕೆಯ ಸಂದರ್ಭದಲ್ಲಿ ನಡೆದ ಘಟನೆಯಂತೆ ಇದೆಯಾದರೂ ಸಾಮಾಜಿಕ ವಿಚಾರಗಳ ಹಿನ್ನೆಲೆಯಲ್ಲಿಯೇ ಸಾಮಾನ್ಯ ವ್ಯಕ್ತಿಯಾದ ಸವಾಯಿ ಮಾಧವರಾವ್‌ನ ಕಥೆಯಿದೆ. ಎರಡನೆಯ ಕಥೆ 'ಆಶಾವತಿ'. ಇದು ಅಕ್ಬರನ ಕಾಲದಲ್ಲಿ ನಡೆದ ಘಟನೆಯಾದರೂ; ಭಕ್ತಸಿಂಹನೆಂಬ ಬಡ ರಜಪೂತ ಶಿಲ್ಪಿಯ ಜೀವನದ ಘಟನೆ ಇದರ ವಸ್ತು.

ಇದರ ನಂತರದಲ್ಲಿ ಅನೇಕರು ಕಥೆಯನ್ನು ಬರೆಯುವ ಉತ್ಸಾಹ ತೋರಿದರು. ಎಂ.ಎನ್.ಕಾಮತ, ಎ.ಆರ್.ಕೃಷ್ಣಶಾಸ್ತ್ರಿ, ಆನಂದ, ಮಾಸ್ತಿ ಮುಂತಾದವರು ಕಥೆಗಳನ್ನು ವಿಶಿಷ್ಟ ಮಾದರಿಯಲ್ಲಿ ರಚಿಸುವ ಮೂಲಕ ಅದಕ್ಕೆ ಸ್ಪಷ್ಟರೂಪ ಕೊಡಲು ಪ್ರಯತ್ನಿಸಿದರು. ಪಂಜೆಯವರ ನಂತರದಲ್ಲಿ ಪ್ರಮುಖರಾದ ಕಥೆಗಾರರೆಂದರೆ ಕೆರೂರು ವಾಸುದೇವಾಚಾರ್ಯ. ಆರಂಭದ ಕಾದಂಬರಿಕಾರಲ್ಲಿ ಪ್ರಮುಖರಾದಂತೆ ಸಣ್ಣಕಥೆಗಾರರಲ್ಲೂ ಪ್ರಮುಖರು. ಇವರ ಇಂದಿರಾ ಕಾದಂಬರಿಯ ಅನುಭವವು ಅವರ ಕಥೆಗಳ ವಸ್ತು, ಶೈಲಿ, ಭಾಷೆ ಎಲ್ಲದರಲ್ಲೂ ಕಾಣಬಹುದು. ಇವರಿಗೆ ಪಾಶ್ಚಾತ್ಯ ಸಾಹಿತ್ಯ ಪರಿಚಯ ಚೆನ್ನಾಗಿತ್ತು. ಅಲ್ಲದೆ ಅರ್ಥರ್ ಕಾನನ್ ಡಾಯಾಲ್ ಹಾಗೂ ಷರ್ಲಾಕ್ ಹೋಮ್ಸ್‌ನಂತಹ ಅನೇಕ ಪತ್ತೆದಾರಿ ಕಥೆಗಳನ್ನು ಅನುವಾದಿಸಿದ್ದರು. ಇವರ ಕಥೆಗಳಲ್ಲಿ ಸ್ತ್ರೀ ಶಿಕ್ಷಣ, ಪ್ರೇಮ ವಿವಾಹ, ವಿಧವಾ ವಿವಾಹದಂತಹ ಆಧುನಿಕ ವಿಚಾರಗಳ ಪರವಾದ ವಸ್ತುಗಳನ್ನು ಕಾಣಬಹುದು. ಇವರ ಮಲ್ಲೇಶಿಯರ ನಲ್ಲೆಯರು, ತೊಳೆದ ಮುತ್ತು ಕಥೆಗಳು ಹೊಸತನವನ್ನು ಕಟ್ಟುವಲ್ಲಿ ಯಶಸ್ವಿಯಾಯಿತು.

ಆರಂಭದ ಕಥೆಗಾರರಲ್ಲಿ ಪ್ರಸಿದ್ಧರಾದವರಲ್ಲಿ ಆನಂದರು ಪ್ರಮುಖರು. ಇವರ ಕಥೆಗಳು ಗ್ರಾಮೀಣ ಪರಿಸರದ ಚಿತ್ರಣಗಳಾದರೂ ಬ್ರಿಟೀಷರ ಕಾಲದ ಆಡಳಿತ ವ್ಯವಸ್ಥೆಯಲ್ಲಿನ ಜಮೀನ್ದಾರಿ ವ್ಯವಸ್ಥೆಯ ಕುರಿತ ಚಿತ್ರಣ, ಅವ್ಯವಸ್ಥೆಯ ವಿರುದ್ಧದ ಹೋರಾಟದ ಚಿತ್ರಣ ಮುಖ್ಯವಾದುದು. ಇವರ 'ಮಾಲ್ಕಿಹಕ್ಕು' ಕಥೆ ಈ ಹಿನ್ನೆಲೆಯಲ್ಲಿ ರಚನೆಯಾಗಿದೆ. ಇದಲ್ಲದೆ ಇವರ 'ನಾನು ಕೊಂದ ಹುಡುಗಿ' ಇಡೀ ಕನ್ನಡ ಸಾಹಿತ್ಯದ ಆಲೋಚನಾ ಕ್ರಮವನ್ನೆ ಬದಲಾಯಿಸಿತು. ಇವರ ಕಥೆಗಳು ಸ್ತ್ರೀ ಕೇಂದ್ರಿತವಾದುದು. ಅಲ್ಲದೆ ಒಂದು ದಾಂಪತ್ಯ ಜೀವನದ ಸಿಹಿ–ಕಹಿ ಅನುಭವಗಳು ಇವರ ಕಥೆಗಳ ವೈಶಿಷ್ಟ್ಯ. ಒಟ್ಟಾರೆ ನವೋದಯ ಕಾಲದ ಸಣ್ಣಕಥೆಗಳಲ್ಲಿ ವ್ಯಕ್ತಿ ಕೇಂದ್ರಿತವಾದ ಚಿತ್ರಣವೇ ಮುಖ್ಯವಾದುದು. ಸಾಮಾನ್ಯ ಮನುಷ್ಯನ ಜೀವನದಲ್ಲಿ ನಡೆಯುವ ಘಟನೆಗಳು ಇದರ ವಸ್ತು. ವಸ್ತುವಿನ ವ್ಯಾಪ್ತಿ ಚಿಕ್ಕದಾಗಿರುತ್ತದೆ. ಅಲ್ಲದೆ ಇದರಲ್ಲಿ ಗಂಡು ಹೆಣ್ಣು ಇಬ್ಬರೂ ಸಮಾನವಾದ ಸ್ಥಾನವನ್ನು ಪಡೆದಿದ್ದಾರೆ. ಮಾಸ್ತಿಯವರ 'ಮೊಸರಿನ ಮಂಗಮ್ಮನ' ಕಥೆಯು ಸ್ತ್ರೀ ಕೇಂದ್ರಿತವಾದದ್ದು. ಅತ್ತೆ ಸೊಸೆಯ ನಡುವೆ ನಡೆಯುವ ಘಟನಾವಳಿ ಇದರ ವಸ್ತು.

ಕೆಲವೊಮ್ಮೆ ಇಂತಹ ಹೊಸ ಪ್ರಯತ್ನಗಳಿಗೆ ವಿರೋಧಗಳು ವ್ಯಕ್ತವಾಗುವುದು ಸಹಜ. ಅಂತಹುದೇ ಆದ ತೀರ ಟೀಕೆಯನ್ನು ಮಾಸ್ತಿಯವರು ಎದುರಿಸಬೇಕಾಯಿತು. ಮಧುರವಾಣಿ ಪತ್ರಿಕೆಯಲ್ಲಿ ಬಂದ ಟೀಕೆ ಹೀಗಿದೆ "ಒಂದು ಕತೆಯಂತೆ, ಕತೆ, ಕತೆಯನ್ನು ಬರೆದಿದ್ದಾರೆ. ಅದರ ಹೆಸರು

'ರಂಗಪ್ಪನ ದೀಪಾವಳಿ'. ಇನ್ನು ನಾಳೆ ನಾನು ಕೂತು 'ಉಗ್ರಪ್ಪನ ಉಗಾದಿ' ಎಂದು ಒಂದು ಕಥೆಯನ್ನು ಬರೆಯಬೇಕೆಂದಿದ್ದೇನೆ. ಆಹಾ. ಏನು ಹೇಳಬೇಕೋ!" ಎಂದು ವಿಡಂಬಿಸಿದ್ದರು.

ಆದರೆ ಇಂತಹ ಟೀಕೆಗಳಿಗೆ ಬೆಲೆಕೊಡದೆ ಬಹಳ ಸಮಾಧಾನವಾಗಿಯೇ ಮಾಸ್ತಿ ಉತ್ತರಿಸಿದ್ದು ಹೀಗೆ "ರಂಗಪ್ಪನ ದೀಪಾವಳಿಯೇ ಸರಿ, ಉಗ್ರಪ್ಪನ ಉಗಾದಿ, ವೆಂಕಟರಾಯನ ಪಿಶಾಚವೋ ಸರಿ, ಶ್ರೀಕಂಠನ ಬೇತಾಳ ಎಂದು ಮೊದಲಾಗಿ ಧೋರಣೆಯಿಂದ ಮಾತನಾಡಿ ಈ ಕಥೆಗಳನ್ನು ಎಸೆಯಬೇಡಿ, ನಾನು ರಂಗಪ್ಪನ ದೀಪಾವಳಿಯನ್ನು ಅಚ್ಚು ಹಾಕಿಸಿದ್ದೇನೆ; ಇದರಿಂದ ಕೆಲವರು ಸಂತೋಷಪಟ್ಟಿದ್ದಾರೆ. 'ಉಗ್ರಪ್ಪನ ಉಗಾದಿ' ಎನ್ನುವ ನೀವು ಉಗ್ರಪ್ಪನ ಉಗಾದಿಯನ್ನು ಬರೆದು ಅಚ್ಚು ಹಾಕಿಸಿ; ನಾನು ಓದಿ ಸಂತೋಷಪಡುತ್ತೇನೆ. ಶ್ರೀಕಂಠಯ್ಯನ ಬೇತಾಳವನ್ನು ಅದು ಅಚ್ಚಾಗಿ ಬಂದಾಗ್ಗೆ ನನ್ನ ಒಡಹುಟ್ಟಿದವನಂತೆ ಪ್ರೀತಿಯಿಂದ ಆಲಂಗಿಸಿಕೊಳ್ಳುತ್ತೇನೆ. ಈ ಕತೆಗಳು ಸಾಮಾನ್ಯವಾದವು; ಕೆಲವರು ಮಾತ್ರ ಸಂತೋಷ ಪಡಬಹುದು. ನೀವು ಒಳ್ಳೆಯ ಕತೆಗಳನ್ನು ಬರೆಯಿರಿ, ಅಚ್ಚು ಹಾಕಿಸಿ; ಹೆಚ್ಚು ಜನ ಓದಿ ಸಂತೋಷ ಪಡಲಿ. ಈ ಹತ್ತು ಕತೆಗಳು ಇವುಗಳೆಲ್ಲಕ್ಕಿಂತ ನೂರು ಪಾಲು ಹೆಚ್ಚಾದವುಗಳನ್ನು ನಮ್ಮ ನಾಡಿನ ಅಣ್ಣಂದಿರಾ, ತಮ್ಮಂದಿರಾ ನೀವು ಬರೆಯಬೇಕೆಂಬುದೇ ನನ್ನ ಮನಸ್ಸಿನ ಅಂತರಾಳದಲ್ಲಿರುವ ಅಧಿಕವಾದ ಆಸೆ." ಎಂದು ಉತ್ತರಿಸಿದರು. ಇವರು ಕಥೆಗಳನ್ನು ಬರೆಯುವುದರ ಉದ್ದೇಶವನ್ನು ಕುರಿತು "ಇದು ಒಳ್ಳೆದು, ಇದು ಕೆಟ್ಟದ್ದು ಅಂತ ಹೇಳೋದಿಲ್ಲ. ನನ್ನ ಮುಖ್ಯ ಉದ್ದೇಶ ಜೀವನದ ಚಿತ್ರ ಕೊಡೋದು. ಕಂಡ ಜೀವನ ಹೇಳೋದು" ಎಂದಿದ್ದಾರೆ. ಸಣ್ಣಕಥೆಯ ಮೂಲ ಉದ್ದೇಶವೇ ಇದಾಗಿದೆ. ವಾಸ್ತವ ಬದುಕಿ ಘಟನೆಗಳನ್ನು ಯಥಾವತ್ತಾಗಿ ಹಾಗೂ ಸರಳವಾಗಿ ಕಟ್ಟಿಕೊಡುವುದು. ಮಾಸ್ತಿಯವರ 'ಜೋಗ್ಯೋರ ಅಂಜಪ್ಪನ ಕೋಳಿಕತೆ', 'ಮೊಸರಿನ ಮಂಗಮ್ಮ', 'ರಂಗಪ್ಪನ ದೀಪಾವಳಿ' ಮುಂತಾದವು ಈ ಮಾದರಿಯ ಕಥಾಹಂದರವನ್ನು ಹೊಂದಿದೆ.

ಮಾಸ್ತಿಯವರ ಕಥೆಗಳಿಗೆ ಇಂಗ್ಲಿಷ್ ಕಥೆಗಳು ಪ್ರೇರಣೆಯನ್ನು ನೀಡಿವೆ. ಅವರೇ ಹೇಳಿಕೊಳ್ಳುವಂತೆ "ಸಾಹಿತ್ಯ ಪತ್ರಿಕೆಯಾದ 'ಸ್ಟ್ರಾಂಡ್‌ಮ್ಯಾಗಜಿನ್' ಎಂಬ ಆಂಗ್ಲ ಮಾಸಪತ್ರಿಕೆಯನ್ನು ನೋಡಿದ್ದರಿಂದ ತಮಗೆ ಸಣ್ಣಕಥೆ ಬರೆಯುವುದಕ್ಕೆ ಪ್ರೇರಣೆ ದೊರೆಯಿತು" ಎಂದಿದ್ದಾರೆ. ಪಂಜೆ ಮಂಗೇಶರಾಯರ ಕಥೆ ಮುದ್ರಣಕ್ಕಾಗಲೇ ಕನ್ನಡಕ್ಕೆ ಸಣ್ಣಕಥೆಗಳ ಮಾದರಿಗಳು ಲಭ್ಯವಾಗಿದ್ದವು. ಅಲ್ಲದೆ ಅನೇಕ ಇಂಗ್ಲಿಷ್ ಸಾಹಿತ್ಯ ವಿಮರ್ಶಕರು ಸಣ್ಣಕಥೆಯ ಸ್ವರೂಪವನ್ನು ಕುರಿತು ಸಾಕಷ್ಟು ಚರ್ಚೆಗಳನ್ನು ನಡೆಸಿದ್ದರು. ಇಂಗ್ಲಿಷ್ ಭಾಷೆ ಹಾಗೂ ಶಿಕ್ಷಣವು ಕನ್ನಡದಲ್ಲಿ ಈ ರೂಪವನ್ನು ಇನ್ನು ವೈಶಿಷ್ಟಪೂರ್ಣವಾಗಿ ನಿರ್ಮಿಸಲು ನೆರವಾಯಿತು.

### ಭಾಷೆ ಮತ್ತು ಶೈಲಿ

ಸಣ್ಣಕಥೆಯು ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಹೆಚ್ಚು ಪ್ರಿಯವಾದ ಪ್ರಕಾರವಾಗಿ ಹಾಗೂ ಸಮೃದ್ಧವಾಗಿ ಬೆಳೆಯಿತು. ಇದಕ್ಕೆ ಕಾರಣ ವಸ್ತು, ಶೈಲಿಯ ಜೊತೆಗೆ ಅದರ ಭಾಷೆ. ಭಾಷೆಯ

ಸರಳತೆ ಹೊಸಗನ್ನಡ ಸಾಹಿತ್ಯದ ಪ್ರಮುಖ ಅಂಶಗಳಲ್ಲಿ ಒಂದು. ದೈನಂದಿನ ಆಡುಭಾಷೆಯೇ ಕಥೆಯಲ್ಲಿ ಬಳಸಬಹುದಾದ್ದರಿಂದ ಈ ಪ್ರಕಾರದಲ್ಲಿ ಮಹಿಳೆಯರಾದಿಯಾಗಿ ಸಾಮಾನ್ಯರೂ ರಚಿಸಲು ತೊಡಗಿಕೊಂಡರು. ಯಾತ್ರಿಕನ ಸಂಚಾರದಾದಿಯಾಗಿ ರಚನೆಯಾದ ಕಥೆಗಳ ಭಾಷೆ ಬಹಳ ಸರಳವಾಗಿದೆ.

ಇದಕ್ಕೆ ಪೂರ್ವದಲ್ಲಿ ಅಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ನಾಟಕಗಳನ್ನು ಗದ್ಯದ ಶೈಲಿಯಲ್ಲಿ ರಚಿಸುವ ಪ್ರಯತ್ನವಾಗಿದೆ. ಇವರ ಕಾಲದಲ್ಲಿ ರಚನೆಯಾದ 'ಉತ್ತರರಾಮಚರಿತ್ರ ಕಥೆ'ಯಲ್ಲಿ ಬಳಸಿರುವ ಭಾಷೆ ಮತ್ತು ಶೈಲಿಯನ್ನು ಗಮನಿಸಿದರೆ ೧೯ನೇ ಶತಮಾನದಲ್ಲಿ ರಚನೆಯಾದ ಕಥೆಗಳ ಭಾಷೆ ಮತ್ತು ಶೈಲಿಯ ಭಿನ್ನತೆ ತಿಳಿಯುತ್ತದೆ.

"ಈ ರೀತಿ, ತಮಸಾ ಮರುಳುಗಳೆಂಬ ನದಿಗಳೀರ್ವರೂ ತಮ್ಮ ಪ್ರಶ್ನೋತ್ತರ ವಚನಗಳಿಂದ ಪೂರ್ವೋತ್ತರ ಕಥಾಸಂಗತಿಗಳಂ ಶ್ರೀರಾಮ ಪುರಪ್ರವೇಶವಂ ಸೀತಾ ಪ್ರವೇಶಂ ಸಹ ಸೂಚನೆಗೈದು ರಂಗಸ್ಥಾನದಿಂ ತಿರಿಗಿ ಹೊಱಟು ಪೋಗಲು ಆ ಬಳಿಕ ನೇಪಥ್ಯವೆಂಬ ಸ್ಥಾನದಲ್ಲಿ ಒಬ್ಬಳು 'ಎಲೆ ಮಗುವೆ! ಎಲೆ ಮಗುವೆ! ಎಂದು ಘೋಷವಂ ಮಾಡಲು,

ಆ ಬಳಿಕ ಸೂರ್ಯನ ಪೂಜಾನಿಮಿತ್ತವಾಗಿ ಪುಷ್ಪಗಳಂ ಕೊಯ್ಯುವುದರಲ್ಲಿ ಉದ್ಯುಕ್ತವಾದ ಹಸ್ತವುಳ್ಳ ಸೀತೆಯು ಶೋಕದೊಡನೆಯು ಕುತೂಹಲದೊಡನೆಯು ಕೂಡಿದವಳಾಗಿ ಆ ನೇಪಥ್ಯದಲ್ಲಿ ಪುಟ್ಟಿದ ಶಬ್ದಮಂ ಕೇಳುತ, ರಂಗಸ್ಥಾನವಂ ಪ್ರವೇಶವಂ ಗೈದು 'ಎಲೌ ಇದೇನಾಶ್ಚರ್ಯವು! ಪ್ರಿಯ ಸಖಿಯಾದ ವಾಸಂತಿಯು ನುಡಿಯುವಳೆಂದು ನಾನು ತಿಳಿಯುತ್ತೇನೆ' ಎಂದು ಪೇಳಲು; ಆಗ ಪುನಃ ನೇಪಥ್ಯದಲ್ಲಿ ಒಬ್ಬಳು ಇಂತೆಂದಳು...."(ಹೊಸಗನ್ನಡದ ಅರುಣೋದಯ–ಪು. ೫೪೭)

ಈ ಭಾಗವು ಶೈಲಿಯ ದೃಷ್ಟಿಯಿಂದ ವಡ್ಡಾರಾಧನೆ ಕಥೆಗಳ ಮಾದರಿಯಲ್ಲಿದೆ. ಭಾಷೆ ಕಾವ್ಯಕ್ಕಿಂತ ಸರಳವಾಗಿದೆ. ಇದು ರಾಜಾಶ್ರಯದಲ್ಲಿ ರಚಿತವಾದದ್ದಾಗಿರುವುದರಿಂದ ಭಾಷೆ ಹಾಗೂ ಶೈಲಿಯಲ್ಲಿ ಬಿಗಿತನವಿದೆ. ಇದು ಆರಂಭದ ಕಥೆಗಳ ಭಾಷೆಯ ಸ್ವರೂಪವಾಗಿದೆ. ನಂತರದಲ್ಲಿ ಅನುವಾದಗೊಂಡ

ಕ್ರೈಸ್ತ ಪಾದ್ರಿಗಳು ಧರ್ಮ ಪ್ರಚಾರಕ್ಕಾಗಿ ಕಾವ್ಯ ಮತ್ತು ಸಣ್ಣಕಥೆ ಪ್ರಕಾರಗಳನ್ನು ಬಳಸಿಕೊಂಡರು. ಈಗಾಗಲೇ ಕಾವ್ಯ ಪ್ರಕಾರದಲ್ಲಿ ಅವರು ಬಳಸಿದ ಭಾಷೆ ಕುರಿತು ನೋಡಲಾಗಿದೆ. ೧೮–೧೯ನೇ ಶತಮಾನದಲ್ಲಿ ಸಣ್ಣಕಥೆಗಳು ಪಾಶ್ಚಾತ್ಯ ಸಾಹಿತ್ಯದಲ್ಲಿ ಸಾಕಷ್ಟು ಕೃಷಿಯಾಗಿದ್ದವು. ಅಲ್ಲದೆ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದಂತೆ ಕಥೆಗಳು ನಿರ್ಮಾಣವಾಗಿದ್ದವು. ಜೊತೆಗೆ ಮಿಶನರಿಗಳು ಇಲ್ಲಿ ಮತಪರಿವರ್ತನೆಗೆ ಆಯ್ಕೆ ಮಾಡಿಕೊಂಡ ವರ್ಗ ಸಾಮಾನ್ಯ ವರ್ಗವಾಗಿತ್ತು. ಈ ಜನರಿಗೆ ತಮ್ಮ ಆಲೋಚನೆಗಳನ್ನು ಅರ್ಥಮಾಡಿಸಲು ಧರ್ಮಕ್ಕೆ ಸಂಬಂಧಿಸಿದ ಕಥೆಗಳನ್ನು ಸರಳ ಭಾಷೆಗೆ ಅನುವಾದಿಸುವ ಆಲೋಚನೆ ಹಾಗೂ ಅನಿವಾರ್ಯತೆ ಇತ್ತು. ಅವರ ಕಥೆಗಳ ಭಾಷೆ ಇಂತಿದೆ.

## ಚಂದ್ರಲೀಲೆ

### ನೇಪಾಳದ ಒಬ್ಬ ಬ್ರಾಹ್ಮಣಿಯ ಕಥಾನಕ

### ಅಧ್ಯಾಯ ೧

### ಜನನವು ವಿವಾಹವು ವೈಧವ್ಯವು

ಹಿಂದೂ ದೇಶದ ಉತ್ತರದಲ್ಲಿರುವ ನೇಪಾಳವೆಂಬ ಪರ್ವತಪ್ರದೇಶದಲ್ಲಿ ಅರವತ್ತು ಸಂವತ್ಸರಗಳ ಮೊದಲು ಒಂದು ಬ್ರಾಹಣ ಕುಟುಂಬದಲ್ಲಿ ಒಂದು ಕನ್ಯಾ ಜನನವಾಯಿತು. ಆ ಕೂಸಿನ ಅಂದಚಂದ ನೋಡಿ ಅದಕ್ಕೆ ಚಂದ್ರಲೀಲೆ ಎಂಬ ಹೆಸರನ್ನಿಟ್ಟರು. ಅವಳ ತಂದೆಯು ಧನಿಕನಾಗಿದ್ದನು...... ಈ ಕನ್ಯಾರತ್ನವನ್ನು ಏಳನೇ ವಯಸ್ಸಿನಲ್ಲಿ ಮತ್ತೊಂದು ಪುರೋಹಿತ ಮನೆತನದ ವರನೊಬ್ಬನಿಗೆ ಬಹು ಸಡಗರದಿಂದ ಮದುವೆ ಮಾಡಿಕೊಟ್ಟರು. ಆ ಹುಡುಗನು ಕುಟುಂಬದಲ್ಲಿ ಹುಟ್ಟಿದ ಏಕಪುತ್ರನು.(ಜನವರಿ–೧೯೦೦–ಸತ್ಯದೀಪಿಕೆ)

ಬಹಳ ಸರಳವಾದ ಭಾಷಾಶೈಲಿ ಇದರಲ್ಲಿದೆ. ೧೮೯೯ರ ಜನವರಿ ತಿಂಗಳಿನಲ್ಲಿ ಪ್ರಕಟವಾದ ಸಂಧ್ಯಾಭ್ರಲೇಖೆ ಎಂಬ ಕಥೆಯಲ್ಲಿ ಕ್ರೈಸ್ತಗೀತೆಗಳನ್ನೂ ನೀಡಲಾಗಿದೆ. ಇದರ ಭಾಷೆಯನ್ನು ಗಮನಿಸಿ. ಬಹಳ ಸರಳವಾದ ರೀತಿಯಲ್ಲಿಯೇ ಗೀತೆಯ ಭಾಷೆಯನ್ನು ಬಳಸಿದ್ದಾರೆ.

ನನ್ನ ಅಪ್ಪನು ನೀನೇ, ಅಯ್ಯನು ನೀನೇ
ಅಣ್ಣನು ನೀನೇ, ತಮ್ಮನು ನೀನೇ
ಭಾವನೂ ನೀನೇ ಗುರುವೂ ನೀನೇ ॥
ಪ್ರಿಯನು ನೀನೇ, ಉತ್ತಮನು ನೀನೇ
ನನ್ನ ಪ್ರಾಣನಾಯಕನೂ ನನ್ನೊಡೆಯನೂ
ನನ್ನ ವಿಮೋಚಕನೂ ನೀನೇ ॥

ಆದರೆ ಸಂಸ್ಕೃತದ ಅನುವಾದಿತ ಕಥೆಗಳ ಭಾಷೆ ಸ್ವಲ್ಪ ಭಿನ್ನವಾಗಿದೆ. ೧೮೬೩ರಲ್ಲಿ ಪ್ರಕಟವಾದ 'ಕಥಾಸಂಗ್ರಹ'ದಲ್ಲಿ ಮಹಾಭಾರತದಿಂದ ಆಯ್ದುಕೊಂಡ ಕಥಾಭಾಗದ ಅನುವಾದ –

"ಇತ್ತಲಾ ಧರ್ಮರಾಯನೇ ಮೊದಲಾದ ನಾಲ್ಕು ಮಂದಿಯು ಭಿಕ್ಷಾನ್ನವನ್ನು ತೆಗೆದುಕೊಂಡು ಮನೆಗೆ ಬಂದ ಸಮಯದಲ್ಲಿ ಉತ್ಸಾಹದೊಡನೆ ಕೂಡಿರುವ ಭೀಮಸೇನನನ್ನು ನೋಡಿ, ಧರ್ಮರಾಯನು ಆತನ ಇಂಗಿತವನ್ನು ನೋಡಿ ಸಂತೋಷಯುಕ್ತನಾಗಿ ಇದ್ದಾನೆಂದು ತಿಳಿದು, ಇದಕ್ಕೆ ಏನೋ ನಿಮಿತ್ತವಿದೆ ಎಂದು ಚಿಂತಿಸುತ್ತಾ, ಏಕಾಂತದಲ್ಲಿ ತನ್ನ ತಾಯಿಯನ್ನು ನೋಡಿ, ವಾಯುಪುತ್ರನು ನಿನ್ನ ಅಪ್ಪಣೆಯಿಂದ ಒಂದು ಮಹಾ ಕಾರ್ಯವನ್ನು ನಿರ್ವಹಿಸುವುದಕ್ಕೆ ಎಣಿಸಿದ್ದಾನೆಂದು, ಆತನ ಮುಖೋಲ್ಲಾಸದಿಂದ ತಿಳಿದೆನು...."

ಪೌರಾಣಿಕ ಕಥೆಯನ್ನು ಆಧರಿಸಿ ರಚಿಸಲಾದ 'ಶುಕಸಪ್ತತಿ'(೧೮೮೩)ಯ ಭಾಷಾ ಶೈಲಿಯ ಮತ್ತೊಂದು ಮಾದರಿಯನ್ನು ಇಲ್ಲಿ ಗಮನಿಸಬೇಕು.

೧೮ನೆಯ ದಿವಸದ ಕಥೆ

"ಅನಸೂಯೆಯು ಕೈಯಲ್ಲಿ ನೀರು ತೆಗೆದುಕೊಂಡು ಈ ಬಾಲಕರಂ ನಾರಶೀರೆಯ ಮೇಲೆ ಮಲಗಿಶಿ, ಆ ಸ್ತ್ರೀಯರು ಮೂರು ಮಂದಿಯು ಮಹಾಭೀತಿಯಿಂದ ನೋಡುತ್ತಿರಲು, ಪ್ರತಿಜ್ಞೆಯಂ ಮಾಡುತ್ತಾಳೆ, ತಂದೆ ತಾಯಿ ಅತ್ತೆ ಮಾವಂದಿರು ಭಾವ ಮೈದಂದರುಗಳಲ್ಲಿ ನಾನು ಹೃದಯ ಸಿದ್ಧಾಂತವಾದಂತ ವಿಶ್ವಾಸವುಳ್ಳವಳಾದರೆ, ಆ ಸತ್ಯದಿಂದ ಈ ಮೂರು ಮಂದಿ ಮಕ್ಕಳೂ, ಎಂದಿನಂತೆ ಆಗಲಿ ಎಂದು ಉದಕಮಂ ಅವರ ಮೇಲೆ ಪ್ರೋಕ್ಷಿಸಲು..."

ಇದರಲ್ಲಿ ಭಾಷೆಯ ಬಿಗಿ ಇದ್ದರೂ ಸಾಮಾನ್ಯರಿಗೂ ಅರ್ಥವಾಗುವಂತೆಯೇ ಇದೆ. ಇಂಗ್ಲಿಷ್‌ನಿಂದ ಅನುವಾದಗೊಂಡ ಕಥೆಗಳು ಕೆಲವೊಮ್ಮೆ ಬಿಗಿತನದಿಂದ ಕೂಡಿದ್ದರೆ ಕೆಲವೊಮ್ಮೆ ಬಹಳ ಸರಳತೆಯಿಂದ ಕೂಡಿದೆ. ಗೋಲ್ಡ್‌ಸ್ಮಿತ್ ಕವಿಯ 'ದಿ ವಿಕಾರ್ ಆಫ್ ವೇಕ್ ಫೀಲ್ಡ್' ಅನ್ನು ಎಸ್.ಜಿ. ಗೋವಿಂದರಾಜಯ್ಯಂಗಾರ್ ಅವರು 'ಪ್ರಿಂರೋಜ ವಿಜಯಂ' ಎಂಬ ಹೆಸರಿನಿಂದ ಅನುವಾದಿಸಿದ್ದಾರೆ. ಇದರ ಶೈಲಿ ಹೀಗಿದೆ: "ಈ ಭೂಮಂಡಲದ ಪೂರ್ವಾರ್ಧಗೋಳದ ಪಶ್ಚಿಮದಿಕ್ಕಿನ ಸಮುದ್ರದಲ್ಲಿ ಸಂಯುಕ್ತ ರಾಜ್ಯವೆಂಬ ದ್ವೀಪವೊಂದಿರುತ್ತದೆ. ಅದರಲ್ಲಿ ವೇಕ್ ಫೀಲ್ಡೆಂಬ ಮನೋಹರವಾದ ಗ್ರಾಮವೊಂದುಂಟು. ನಾನು ಆವೂರಲ್ಲಿ ಪೌರಾಣಿಕನಾಗಿಯೂ ಮಿತ ಬೋಧಕನಾಗಿಯೂ ಇದ್ದನು. ಮದುವೆ ಮಾಡಿಕೊಂಡಂತೆ ಪ್ರಜಾವೃದ್ಧಿಯಾಗಿ ಕೋಟಲೆಗಳುಂಟಾಗುವುದೆಂದು ಹರಟತ್ತ ಸ್ವಾರ್ಥತೆಯಿಂದ ಏಕಾಂಗಿಯಾಗಿರುವ ಮನುಷ್ಯನಿಗಿಂತಲೂ ಸಂಸಾರಿಯಾಗಿ ಮಕ್ಕಳನ್ನು ಹೆತ್ತು ಸತ್ಯಸಂಧನಾಗಿ ಬಾಳುವ ಗೃಹಸ್ಥನೇ ಶ್ರೇಷ್ಠನೆಂದು ನನ್ನ ಅಭಿಪ್ರಾಯ." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೩೪)

ವೆಂಕಟರಂಗೋ ಕಟ್ಟಿಯವರು ಇಂಗ್ಲಿಷ್‌ನಲ್ಲಿದ್ದ 'ಅರೇಬಿಯನ್ ನೈಟ್ಸ್'ನ ಅನುವಾದಿಸಿದುದರ ಭಾಷೆ ಮತ್ತು ಶೈಲಿ ಕುರಿತು ರಾ.ಯ. ಧಾರವಾಡಕರವರು "ಪುಸ್ತಕವನ್ನು ಒಂದು ಸಲ ಓದಲು ಪ್ರಾರಂಭಿಸಿದರೆ, ಓದಿ ಮುಗಿಸುವವರೆಗೆ ಬಿಡಬೇಕೆಂದು ಎನಿಸುವುದಿಲ್ಲ" ಎಂದಿದ್ದಾರೆ. ಇದರ ಭಾಷೆ ಬಹಳ ಸರಳವಾಗಿದ್ದರೂ, ಅಲ್ಲಲ್ಲಿ ವೃತ್ಯಾನುಪ್ರಾಸದ ಬಳಕೆ ಇದೆ. ಉದಾ:– "ಯಾರನ್ನು ಲೆಕ್ಕಿಸದೆ ಸೊಕ್ಕಿನಿಂದ ಮಾಡಿದ್ದು ತಕ್ಕುದೆಂದೆಣಿಸಿ ತಕ್ಕ ಮಂಚದ ಮೇಲೆ ಅಕ್ಕರೆಯಿಂದ ಕುಕ್ಕರಿಸಿಕೊಂಡಳು".

"ಅವಳು ಕುಳಿತಿರುವುದನ್ನು ಕಂಡು ಕೋಪದಿಂದಡಿಗಳನ್ನು ರೂಢಿಸಿ ಕತ್ತಿಯನ್ನು ತಡವಿಲ್ಲದೇ ಪಡಕೊಂಡು, ನಡ ಹುಬ್ಬುಗಳನ್ನು ಕೂಡಿಸಿ ಸುಡು ಸುಡುವ ಕೆಂಡದಂಥ ಕಣ್ಣುಗಳೊಡನೆ, ಮುಂದೆ ನಡೆದು ಹೋಗಿ, ಸಿಟ್ಟು ತಾಳದೇ ಆ ದುಷ್ಟರನ್ನು ನಟ್ಟ ನಡುವೆ ಕಟ್ಟನೆ ಕಡಿದು ಒಟ್ಟಿಗೆ

ಒಂದೇ ಮೊಟ್ಟೆಯೊಳಗೆ ಗಟ್ಟಿಯಾಗಿ ಕಟ್ಟಿ ಆ ಕೊಠಡಿಯ ಕಿಟಕಿಯೊಳಗಿಂದ ಅದನ್ನು ಪಟ್ಟದ ಕೋಟೆಯ ಕಂದಕದೊಳಗೆ ಬಿಟ್ಟುಬಿಟ್ಟನು".

ಸಾಹಿತ್ಯದ ಭಾಷೆಯು ಗೊಂದಲದ ಸ್ಥಿತಿಯಲ್ಲಿ ಇದ್ದ ಸಂದರ್ಭದಲ್ಲಿ ರಚನೆಯಾದ ಕೃತಿಯಿದು. ಹೊಸಗನ್ನಡದ ಭಾಷಾ ಶೈಲಿ ಈ ಕಥೆಯಲ್ಲಿ ಮೊದಲ ಹೆಜ್ಜೆ ಇಟ್ಟಿದೆ. ನಂತರದಲ್ಲಿ ಸ್ವತಂತ್ರ ಕಥೆಗಳನ್ನು ಬರೆದ ಪಂಜೆಮಂಗೇಶರಾಯರು ತಮ್ಮ ಕಥೆಗಳಲ್ಲಿ ಆಡು ಭಾಷೆಯನ್ನು ಬಳಸಿದ್ದಾರೆ. ಅವರ ಭಾಷೆಯ ಶೈಲಿ ಹೀಗಿದೆ.

"ಕಮಲಪುರದ ಹೋಟ್ಲಿನಲ್ಲಿ

ಕಮಲಪುರದ ಬಂದರ್ ಸ್ಥಳವು ವಸಂತ ಋತುವಿನ ಸಂಧ್ಯಾತಪದಿಂದ ಸುಖ ಹೊಂದುತ್ತಲಿತ್ತು. ವೀರಪುರದಿಂದ ಬಂದು ದಂಡೆಯಲ್ಲಿ ನಿಂತಿದ್ದ ಒಂದೆರಡು ದೋಣಿಗಳು ನೀರಿನ ಸಣ್ಣ ಅಲೆಗಳ ಮೇಲೆ ಕುಣಿಯುತಲಿದ್ದವು. ದೋಣಿಗಾರರು ಈಳಿಗೆಯನ್ನು ಕಾಲಿಂದ ಒತ್ತಿ ಹಿಡಿದು, ಕೈಯಲ್ಲಿದ್ದ ಮೀನನ್ನು ತರಿದು, ಬಳಿಯ ನೀರು ತುಂಬಿದ ಮಣ್ಣಿನಪಾತ್ರೆಗೆ ಒಟ್ಟುತ್ತಿದ್ದನು. ಆಗಾಗ ಹಾರಿ ಬರುವ ಕಾಗೆಗಳನ್ನು ಅಟ್ಟುತ್ತಿದ್ದನು. ಸ್ವಲ್ಪ ದೂರದಲ್ಲಿ ಅಂಬಿಗರ ಹೆಂಗಸರು ಸೊಂಟಕ್ಕೆ ಮುಟ್ಟುವಷ್ಟು ನೀರಿಗೆ ಇಳಿದು ಫಕ್ಕನೆ ಮುಳುಗುಹಾಕಿ ಕೆಸರಿನಲ್ಲಿದ್ದ ಚಿಪ್ಪು ಮೀನುಗಳನ್ನು ಕೈತುಂಬಾ ಆಯ್ದುಕೊಂಡು ತಮ್ಮ ಮೈ ಬಟ್ಟೆಯ ಪದರಿನ ಚೀಲವನ್ನು ತುಂಬಿಸುತ್ತಿದ್ದರು."(ಕನ್ನಡದ ಕೆಲವು ಸಣ್ಣಕಥೆಗಳು)

ಈ ಮಾದರಿಯ ಭಾಷೆ ಮತ್ತು ಶೈಲಿಯು ಮುಂದೆ ಮಾಸ್ತಿ ಕುವೆಂಪುರವರ ಕಥೆಗಳಲ್ಲಿ ಕಾಣಬಹುದು. ಕುವೆಂಪುವರ 'ಯಾರೂ ಅರಿಯದ ವೀರ' ಕಥೆಯ ಭಾಗ ಹೀಗಿದೆ

"ಆಷಾಢಮಾಸ, ಸುಮಾರು ರಾತ್ರಿ ಎಂಟು ಗಂಟೆಯ ಸಮಯ. ಕಗ್ಗತ್ತಲು ಕಣ್ಣು ತಿವಿಯುವಂತಿತ್ತು. ಜಡಿಮಳೆ ಜರ್‍ರೆಂದು ಕರೆಕರೆ ಹುಟ್ಟಿಸುತ್ತಿತ್ತು. ಸುಬ್ಬಣ್ಣಗೌಡರು ಜಗಲಿಯಲ್ಲಿ ಒಂದು ಜಮಖಾನದ ಮೇಲೆ ಕುಳಿತು ಲ್ಯಾಂಪಿನ ಬೆಳಕಿನಲ್ಲಿ ಲೆಕ್ಕಪತ್ರ ನೋಡುತ್ತಿದ್ದರು.... ನೊರೆಯೆದ್ದ ಕೆಂಬಣ್ಣದ ತೆರೆಗಳು ಅವರ ಕಾಲಿಗೆ ಬಂದು ಬಡಿಯುತತಿದ್ದುವು. ತುಂಗಾನದಿಯ ಪ್ರವಾಹ ಉಕ್ಕಿ ಉಕ್ಕಿ ನೊರೆ ನೊರೆಯಾಗಿ ಭೋರೆಂದು ಹರಿಯುತ್ತಿತ್ತು. ಲಾಟೀನಿನ ಬೆಳಕಿನಲ್ಲಿ ಅಲೆಗಳು ಪಳಪಳ ಮಿಂಚುತ್ತಿದ್ದುವು. ಮಳೆ ನಿರಂತರವಾಗಿ ಸುರಿಯುತ್ತಲೇ ಇತ್ತು...."

ಈ ಇಬ್ಬರ ಕಥೆಗಳಲ್ಲೂ ಕಥೆಯ ಜೊತೆಗೆ ಸುತ್ತಲಿನ ಪ್ರಕೃತಿಯ ವರ್ಣನೆ ಸಹಜವಾಗಿಯೇ ತರುವ ಶೈಲಿಯು ಏಕರೂಪವಾಗಿದೆ. ಪಂಜೆಯವರ ಸಮಕಾಲೀನ ಕಥೆಗಾರರಾದ ಎ.ಆರ್.ಕೃಷ್ಣಶಾಸ್ತ್ರಿ ಮತ್ತು ಮಾಸ್ತಿಯವರ ಕಥೆಯ ಭಾಷೆ ಹಾಗು ಶೈಲಿ ಒಂದೇ ಮಾದರಿಯಲ್ಲಿದೆ.

"ಒಂದು ಸಂಸಾರದಲ್ಲಿ ಬರಿಯ ಹೆಣ್ಣುಮಕ್ಕಳೇ ಇದ್ದರು. ತಾಯಿಗೆ ಒಂದಾದರೂ ಗಂಡುಮಗುವಾಗಲೆಂಬ ಆಸೆ ಇತ್ತು. ಅದು ನೇರವೇರದ್ದರಿಂದ, ಕಡೆಯ ಮಗಳು ಅಳಿಯ

ಇವರನ್ನು ಮನೆಯಲ್ಲಿ ಇಟ್ಟುಕೊಂಡು, ಅಳಿಯನ್ನೇ ಮಗನಂತೆ ಕಂಡುಕೊಂಡಿದ್ದರು. ಹೀಗಿರಲು, ಒಬ್ಬ ಗುರುಗಳು ಕೋರಿದ್ದನ್ನೆಲ್ಲಾ ಕೊಡುತ್ತಾರೆಂದು ಕೇಳಿ, ಅವರಲ್ಲಿ ಸೇವೆ ಮಾಡಿ, ಆಕೆ ತನಗೆ ಪುತ್ರಸಂತಾನವಾಗಬೇಕೆಂದು ಹಟಹಿಡಿದಳು. ಅವರು ಎಷ್ಟು ಬೇಡವೆಂದರೂ ಕೇಳಲಿಲ್ಲ. ಒಂದು ಹೋಗಿ ಒಂದಾಯಿತು. ತನ್ನ ಹೊಟ್ಟೆಯಲ್ಲೇ ಮಗುವಾಗುವುದಕ್ಕೆ ಬದಲು ಮಗಳು ಒಂದು ಗಂಡುಮಗುವನ್ನು ಹೆತ್ತು ತೀರಿಹೋದಳು. ಅದನ್ನು ಸಾಕಿಕೊಳ್ಳವ ಭಾರ ಆಕೆಯ ಮೇಲೆ ಬಿತ್ತು" (ಕಥೆ–ಗುರುಗಳ ಮಹಿಮೆ)

ಮಾಸ್ತಿಯವರ ಸಂಜೀವನ ಸ್ವಪ್ನ ಕಥೆಯ ಆರಂಭವೂ ಹೀಗೆ ಇದೆ. ನಂತರದಲ್ಲಿ ಮಾಸ್ತಿಯವರ ಕೆಲವು ಸಣ್ಣಕಥೆಗಳು ಬಿಡುಗಡೆಯ ಕಾಲಕ್ಕಾಗಲೇ ಈ ಪ್ರಕಾರದ ಭಾಷೆ ಹಾಗು ನಿರ್ದಿಷ್ಟ ರೂಪನ್ನು ಪಡೆದುಕೊಂಡಿತ್ತು. ಮುಂದೆ ಬಂದಂತಹ ಕಥೆಗಾರರು ಇದೇ ಮಾದರಿಯನ್ನು ಅನುಸರಿಸಿದರು. ಮಾಸ್ತಿಯವರ ಪರಿಚಯದವರಾದ ಹೊಸಹಳ್ಳಿ ಶಾಮಣ್ಣನವರು ಹೇಳಿದ ಕಥೆ 'ಸಂಜೀವನ ಸ್ವಪ್ನ'ದ ಭಾಷೆ ಹೀಗಿದೆ–

"ಹೀಗಿರುವಾಗ ನಮ್ಮೂರ ಸಂಜೀವನಿಗೆ ಒಂದು ಸ್ವಪ್ನ ಬಿತ್ತು.

ಈ ಕಥೆ ಕೇಳುವವರಿಗೆ ಸಂಜೀವನ ಪರಿಚಯವಾಗಿದೆ. ರಂಗಪ್ಪ ಇಂಗ್ಲೀಷು ಕಲಿತು ಬಂದಾಗ ಸಂಜೀವ 'ರಂಗಪ್ಪಾ ಕನ್ನಡದಲ್ಲಿ ಹದಿನಾರು ಅಂತೇವಲ್ಲ ಅದಕ್ಕೆ ಇಂಗ್ಲೀಷು ಹೇಳು' ಎಂದ. ರಂಗಪ್ಪ 'ಸಿಕ್ಸ್ಟೀನ್' ಎಂದ. ಸಂಜೀವ 'ಸಿಕ್ಸ್ಟೀನ್ ಎಂದರೆ ಎಷ್ಟು' ಎಂದ. ಅದಕ್ಕೆ ರಂಗಪ್ಪ 'ಹದಿನಾರು' ಎಂದ. ಸಂಜೀವ 'ಅಷ್ಟೇನಾ ಅಯ್ಯೋ' ಎಂದ. ರಂಗಪ್ಪ 'ಅದ್ಯಾಕಪ್ಪ ಅಯ್ಯೋ' ಎಂತ ಕೇಳಿದ. ಸಂಜೀವ ' ಕನ್ನಡದಲ್ಲಿ ಹದಿನಾರಾದ್ದು ಇಂಗ್ಲೀಷ್ನಲ್ಲೂ ಹದಿನಾರೇ ಆದರೆ ಇಂಗ್ಲೀಷಿನಲ್ಲಿ ಏನು ವಿಶೇಷ? ಅದನ್ನು ಯಾಕೆ ಕಲೀಬೇಕು ಇಷ್ಟು ಕಷ್ಟಪಟ್ಟು' ಎಂದ."

ಮಾಸ್ತಿಯವರ ನಂತರದಲ್ಲಿ ಬರೆದ ಆನಂದರ ಭಾಷೆಯು ಮಾಸ್ತಿಯವರ ಭಾಷೆಗೆ ಹಾಗೂ ಶೈಲಿಗೆ ಸಾಮಿಪ್ಯವಿದೆ.

"ಸರೂ–ಗೆ ಏನು ಉತ್ತರ ಬರೆಯಲಿ?– ಎಂದು ಯೋಚಿಸತೊಡಗಿದೆ. ಈ ಇಪ್ಪತ್ತು ದಿನಗಳಲ್ಲಿ ಅವಳಿಂದ ಐದು : ಅಲ್ಲ–ಆರು ಕಾಗದಗಳು ಬಂದಿದ್ದವು. ಇದು ಏಳನೆಯದು ; ಬಲು ಜೋರಾಗಿದೆ! ಮೆಣಸಿನ ಪುಡಿ ಹೆಚ್ಚು! ! ನಾನಾದರೋ ಒಂದೇ ಒಂದು ಸಣ್ಣ–ಸಾಧಾರಣವಾದ ಸಪ್ಪೆ ಕಾಗದ ಬರೆದಿದ್ದೆ. ಇವತ್ತು ಬಂದ ಈ ಕಾಗದಕ್ಕೆ ಏನು ಉತ್ತರ ಕೊಡುವುದೋ ತೋರದಾಗಿದೆ... ಯಾವ ಕಾರಣ ಜೋಡಿಸಲಿ? ಏನು ನೆವ ಹೊಂದಿಸಲಿ? ಬಲು ಕಿಡಿ ಕಿಡಿಯಾಗಿದ್ದಾಳೆ! ಅವಳ ಕೋಪವನ್ನು ಹೇಗೆ ಹತೋಟಿಗೆ ತರಲಿ? ಕುಂಟು ನೆವ ಹೇಳಲೆ? ಅಥವಾ ನಿಜವಾದ ಕಾರಣವನ್ನು ಬರೆದುಬಡಲೆ? ನಿ–ಜ–ವಾ–ದ–ಕಾ–ರ–ಣ! ಏನು ಗೊತ್ತೆ?...."

ಮಾಸ್ತಿಯವರು ಅನೇಕ ಕಥೆಗಳಲ್ಲಿ ಹೆಚ್ಚಾಗಿ ಲೇಖನಚಿಹ್ನೆಗಳನ್ನು ಬಳಸುತ್ತಾರೆ. ಅದೇ ಮಾದರಿಯಲ್ಲಿ ಅದಕ್ಕಿಂತಲೂ ಹೆಚ್ಚಿನ ಲೇಖನಚಿಹ್ನೆಗಳನ್ನು ಆನಂದರು ಬಳಸಿದ್ದಾರೆ.

ಹೀಗೆ ಸಣ್ಣ ಕಥೆಗಳು ಆರಂಭದಿಂದಲೂ ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತಾ ಮಾಸ್ತಿಯವರ ಕೆಲವು ಸಣ್ಣಕಥೆಗಳು ಸಂಕಲನ ಬಿಡುಗಡೆಯಾಗುವ ವೇಳೆಗೆ ಖಚಿತ ರೂಪವಾಗಿ ಸಿದ್ಧವಾಯಿತು. ಹೀಗೆ ಅನುವಾದದ ಸಂದರ್ಭದಲ್ಲಿ ಬಳಕೆಯಾದ ಭಿನ್ನವಾದ ವಸ್ತು, ಭಾಷಾಶೈಲಿಯು ಆರಂಭದ ಸಣ್ಣಕಥೆಯ ಮೇಲೆ ಪ್ರಭಾವವನ್ನುಂಟು ಮಾಡಿದುವು ಹಾಗೂ ಮಾದರಿಗಳನ್ನು ಒದಗಿಸಿದವು. ಒಟ್ಟಾರೆ ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಪಾಶ್ಚಾತ್ಯ ಹಾಗೂ ಸಂಸ್ಕೃತ ಸಾಹಿತ್ಯದ ಸಣ್ಣಕಥೆಗಳು ಅನುವಾದವಾಗುವುದರೊಂದಿಗೆ ಹೊಸ ಪ್ರಕಾರದೊಂದಿಗೆ ಹೊಸ ಚಿಂತನೆಗಳು ಪ್ರವೇಶವನ್ನು ಪಡೆಯಿತು. ಮುಂದೆ ಕಾಲಕ್ಕನುಗುಣವಾಗಿ ವಾಸ್ತವ ಸಂಗತಿಗಳನ್ನು ವಿಶ್ಲೇಷಿಸುತ್ತಾ ವಿಸ್ತಾರವಾಗಿ ಈ ಪ್ರಕಾರವು ಬೆಳೆಯಿತು.

* * * * *

೮. ಅಧ್ಯಾಯ

# ವ್ಯಕ್ತಿತ್ವ ವಿಕಸನ ನೆಲೆಯಲ್ಲಿ ಚರಿತ್ರೆ

ಹೊಸಗನ್ನಡ ಸಾಹಿತ್ಯ ಸಂದರ್ಭದ ಗದ್ಯ ಪ್ರಕಾರಗಳಲ್ಲಿ 'ಚರಿತ್ರೆ'ಯೂ ಒಂದು. ಒಬ್ಬ ವ್ಯಕ್ತಿಯ ಜೀವನ ಸಾಧನೆಯ ಅನಾವರಣ ಹಾಗೂ ಒಂದು ದೇಶದ ಇತಿಹಾಸವನ್ನು ಕಟ್ಟಿಕೊಡುವುದು ಈ ಪ್ರಕಾರದ ಮುಖ್ಯ ಗುರಿ. ಪ್ರತಿಯೊಬ್ಬನ ಜೀವನವೂ ಒಂದೊಂದು ಚರಿತ್ರೆಯೇ. ಆದರೆ ಎಲ್ಲವೂ ಕೃತಿರೂಪ ತಾಳಲಾಗುವುದಿಲ್ಲ. ಒಬ್ಬ ವ್ಯಕ್ತಿ ಸಾವಿರಾರು ಜನರ ನಡುವೆ ತನ್ನ ವಿಶಿಷ್ಟವಾದ ಜೀವನ ಶೈಲಿ, ಸಾಧನೆಗಳ ಮೂಲಕ ಇತರರಿಗಿಂತ ಭಿನ್ನನಾಗಿ ಗೋಚರಿಸುತ್ತಾನೆ. ಅವನ ಜೀವನದ ಘಟನೆಗಳು ಮತ್ತೊಬ್ಬರ ಸಾಧನೆಗೆ ಸಾಧನವಾಗುವುದೇ ಈ ಪ್ರಕಾರ ರೂಪುಗೊಳ್ಳುವುದರ ಮೂಲ ಉದ್ದೇಶ.

೧೯ನೇ ಶತಮಾನದಲ್ಲಿ ಈ ಪ್ರಕಾರವು ವ್ಯಕ್ತಿ ವಿಕಸನದಂತಹ ಅನೇಕ ವಿಚಾರಗಳ ಹಿನ್ನೆಲೆಯಲ್ಲಿ ಅನುವಾದಗೊಂಡವು. ಅಲ್ಲದೆ ಅನುವಾದಿತವಾದ ಚರಿತ್ರೆಗಳು ಅಂದಿನ ಪತ್ರಿಕೆಗಳಲ್ಲಿ ಧಾರಾವಾಹಿಗಳ ರೂಪದಲ್ಲಿ ಪ್ರಕಟಗೊಂಡವು. ಕೆಲವು ಬಹಳ ತಡವಾಗಿ ಒಂದು ಪೂರ್ಣ ಪ್ರಮಾಣದ ಗ್ರಂಥ ರೂಪವನ್ನು ಪಡೆದುವು. ಇತರೆ ಪ್ರಕಾರಗಳಂತೆ ಇದರ ಅನುವಾದದ ಹಿನ್ನೆಲೆಯನ್ನು ಲೇಖಕರಾರೂ ಹೆಚ್ಚಾಗಿ ಹೇಳಿಕೊಂಡಿಲ್ಲ. ಆದರೆ ಅವು ಅನುವಾದಗೊಂಡ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ಕಾರಣಗಳನ್ನು ಶೋಧಿಸಬೇಕಾಗುತ್ತದೆ. ೧೮೪೯ರಲ್ಲಿ ಇಂಗ್ಲಿಷ್‌ನ 'ಬೂಸಿಯ ಕೊನೆಯ ದಿನಗಳು' ಜೀವನ ಚರಿತ್ರೆಯ ಅನುವಾದದೊಂದಿಗೆ ಹೊಸಗನ್ನಡ ಸಾಹಿತ್ಯದಲ್ಲಿ ಹೊಸ ಪ್ರಕಾರವೊಂದು ಪ್ರವೇಶವನ್ನು ಪಡೆಯಿತು. ಇದು ಪಾಶ್ಚತ್ಯರಿಂದಲೇ ಕನ್ನಡಕ್ಕೆ ಅನುವಾದವಾದ ಕೃತಿ. ಆರ್.ಡಬ್ಲ್ಯುಸ್ಪೋಕ್ಸ್ ಇದನ್ನು ಅನುವಾದಿಸಿದವರು.

## ಪ್ರಕಾರ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಚರಿತ್ರೆ' ಎಂಬ ಶಬ್ದವು ಬಹಳ ಹಿಂದಿನಿಂದಲೂ ಬಳಕೆಯಲ್ಲಿದೆ. ಶ್ರೀಕೃಷ್ಣ ಚರಿತ್ರೆ, ಪ್ರಹ್ಲಾದ ಚರಿತ್ರೆಯಂತೆ ಪುರಾಣ ಪ್ರಸಿದ್ಧ ವ್ಯಕ್ತಿಗಳನ್ನು ಮತ್ತು ಶರಣರ ಮತ್ತು ಐತಿಹಾಸಿಕ ಪುರುಷರನ್ನು ಕುರಿತ ಬಸವರಾಜದೇವರ ರಗಳೆ, ಸಿದ್ಧರಾಮ ಚರಿತೆ, ಹರಿಹರ ಮಹತ್ವ, ರಾಘವಾಂಕ ಚಾರಿತ್ರ್ಯ, ಸಿದ್ಧೇಶ್ವರ ಪುರಾಣ, ಶಂಕರ ದಾಸಿಮಯ್ಯನ ಚರಿತೆ, ಶರಣ ಬಸವ ಚರಿತೆ ಮೊದಲಾದ ಜೀವನ ಚರಿತ್ರೆಗಳನ್ನು ಕಾಣಬಹುದು. ಇವು ಕಾವ್ಯ ರೂಪದಲ್ಲಿ ರಚಿತವಾದವು. ಭಾರತದಲ್ಲಿ ಹಿಂದಿನ ಕಾಲದಲ್ಲಿ ಸಂಕ್ಷಿಪ್ತವಾಗಿ ಶಾಸನಗಳಲ್ಲಿ ರಾಜನ ವಿಚಾರಗಳನ್ನು ಕೆತ್ತಿರುತ್ತಿದ್ದರು. ಕನ್ನಡದಲ್ಲಿ ಇಂತಹ ಚರಿತೆಯ ಲಕ್ಷಣವು ೬ನೇ ಶತಮಾನದ ಕಪ್ಪೆ ಅರಭಟ್ಟ ಶಾಸನದಲ್ಲಿ ಕಾಣಬಹುದಾಗಿದೆ.

೧೭೦೦ರ ಸಂದರ್ಭದಲ್ಲಿ ಶಾನುಭೋಗ ವೆಂಕಟರಮಣಯ್ಯನವರು ಬರೆದ ಮೈಸೂರು ರಾಜರ ಚರಿತ್ರೆ ಗದ್ಯಕ್ಕೆ ಹತ್ತಿರವಾದ ರೀತಿಯಲ್ಲಿ ರಚನೆಯಾಗಿದೆ. ದೇವಚಂದ್ರನ ರಾಜಾವಳೀ ಕಥೆಯಲ್ಲಿ ಅನೇಕ ವ್ಯಕ್ತಿಗಳ ಚರಿತ್ರೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಹೀಗೆ ಕನ್ನಡ ಸಾಹಿತ್ಯದ ಮೊದಲಲ್ಲಿ ಜೀವನ ಚರಿತ್ರೆಯ ಮಾದರಿಗಳು ಲಭ್ಯವಿದ್ದವು. ಆದರೆ ಆಧುನಿಕ ಮಾದರಿಯು ತನ್ನದೇ ಆದ ವೈಶಿಷ್ಟ್ಯದೊಂದಿಗೆ ಹೊಸಗನ್ನಡ ಸಾಹಿತ್ಯ ಪರಿಸರವನ್ನು ಪ್ರವೇಶಿಸಿತು. ಇದು ಕೂಡ ಇಂಗ್ಲಿಷಿನ ಸಾಹಿತ್ಯದ ಪ್ರೇರಣೆಯಾಗಿದೆ. ಚರಿತ್ರೆಯನ್ನು ಪ್ರಮುಖವಾಗಿ ಮೂರು ಪ್ರಕಾರಗಳಲ್ಲಿ ವಿಂಗಡಿಸಬಹುದು.

೧. ಜೀವನ ಚರಿತ್ರೆ

೨. ಆತ್ಮ ಚರಿತ್ರೆ

೩. ದೇಶದ ಚರಿತ್ರೆ

ಈ ಪ್ರಕಾರದ ಅವಶ್ಯಕತೆಯನ್ನು ಕುರಿತು ಸಿ. ಸುಬ್ಬರಾವ್‌ರವರು "ಲೋಕವ್ಯವಹಾರಗಳಲ್ಲಿ ಪ್ರಸಿದ್ಧಿಗೆ ಬಂದವರ ಚರಿತ್ರೆಗಳಿಗಿಂತಲೂ ಪರಲೋಕ ಸಾಧನೆಗೆ ದಾರಿಯನ್ನು ತೋರಿಸುವವರ ಚರಿತ್ರೆಯು ಉತ್ತಮವಾದದ್ದು. ಇಂತ ಚರಿತ್ರೆಗಳಿಂದ ಜನರಿಗಾಗುವ ಏಳ್ಗೆಯು ಹೆಚ್ಚಾಗಿರುತ್ತದೆ. ವಿನಯೌದಾರ್ಯ ಭೂತದಯಾದಿ ಸದ್ಗುಣಗಳು ಜನರಿಗೆ ಉಂಟಾಗುತ್ತದೆ. ಲೋಕದಲ್ಲಿ ಸೌಖ್ಯವೂ ಹೆಚ್ಚಾಗುತ್ತದೆ" (ವಿದ್ಯಾದಾಯಿನಿ–ಆಗಸ್ಟ್–೧೮೯೧–೨/೧೦)ಎಂದಿದ್ದಾರೆ. ಉತ್ತಮ ಸಾಧನೆಯನ್ನು ಮಾಡಿರುವ ವ್ಯಕ್ತಿಗಳ ಜೀವನ ಚರಿತ್ರೆಯು ತಿಳಿಸಲು ಕಾವ್ಯಕ್ಕಿಂತ ಗದ್ಯ ಪ್ರಕಾರವು ಉತ್ತಮ ಮಾರ್ಗವೆಂದು ತೋರಿತು. ಅಲ್ಲದೆ ಕ್ರೈಸ್ತ ಧರ್ಮ ಪ್ರಚಾರಕ ಕಥೆಗಳ ಮಾದರಿಗಳೂ ಚರಿತ್ರೆಯ ಸ್ವರೂಪಕ್ಕೆ ಹತ್ತಿರವಾಗಿದ್ದವು.

ರಾಮಚಂದ್ರ ಹನುಮಂತ ದೇಶಪಾಂಡೆಯವರು ಅನೇಕ ಪಾಶ್ಚಿಮಾತ್ಯರ ಜೀವನ ಚರಿತ್ರೆಗಳನ್ನೂ ಬರೆದಿದ್ದಾರೆ. ಇದರ ಉದ್ದೇಶವನ್ನು ಬಹಳ ಸುದೀರ್ಘವಾಗಿಯೇ ಚರ್ಚಿಸಿದ್ದಾರೆ "ನಮಗೆ ಪ್ರವಾಸವೆಂದರೆ ಮೈಮೇಲೆ ಮುಳ್ಳು ಬರುತ್ತದೆ; ದೇಶಾಟನೇಚ್ಛೆಯು ಕನಸಿನಲ್ಲಿಯಾದರೂ ಬರುವುದಿಲ್ಲ. ಊರು ಮನೆಗಳನ್ನು ಬಿಟ್ಟು ಕೆಲ ದಿವಸಗಳವರೆಗಾದರೂ ಬೇರೆ ಕಡೆಗೆ ಹೋಗುವದೆಂದರೆ ನಮಗೆ ಜೀವದ ಸುತ್ತು ಬರುತ್ತದೆ. ಪರದೇಶಗಳಿಗೆ ಹೋಗುವುದಂತಿರಲಿ; ನಮ್ಮ ಕರ್ನಾಟಕದೆಲ್ಲ ಭಾಗಗಳನ್ನು ನೋಡದೆ ಇದ್ದವರು ಪುಷ್ಕಳ ಜನರಿರುತ್ತಾರೆ. ಎಷ್ಟೋ ಮಂದಿ ಮೈಸೂರವರು ಧಾರವಾಡನ್ನು ನೋಡಿಲ್ಲ. ಮತ್ತು ನೋಡಲೆಳಸುವುದಿಲ್ಲ..... ಆದುದರಿಂದ ಮನೆ ಹಿಡಿದುಕೊಂಡಿರುವವರು ಹೆಡ್ಡರಾಗುವರೆಂಬ ಪಾಶ್ಚಿಮಾತ್ಯರ ಗಾದೆಯಂತೆ ನಮ್ಮ ಕನ್ನಡಿಗರು ಹೆಡ್ಡರೂ ಮುಂಗಾಣದವರೂ ಹೇಡಿಗಳೂ ಸ್ವಾರ್ಥಪರರೂ ಆಗಿರುತ್ತಾರೆ.... ಪಾಶ್ಚಮಾತ್ಯರ ಅನುಕರಣವನ್ನು ಮಾಡಲಿಕ್ಕೆ ಧೈರ್ಯ ಸಾಲದೆ ನಾವು, ಪಾಶ್ಚಮಾತ್ಯರು ದೇವತಾ ಮನುಷ್ಯರು ಅಥವಾ ಸೀತಾದೇವಿಯಿಂದ ವರವು ಪಡೆದ ವಾನರರ ವಂಶದವರೆಂದೆನಿಸಿ ನಮ್ಮ ಹೇಡಿತನವನ್ನೂ

ಹೆಡ್ಡತನವನ್ನೂ ಮುಚ್ಚಿಕೊಳ್ಳಲಿಕ್ಕೆತ್ತುಗಡೆ ಮಾಡುತ್ತೇವೆ. ಈ ತಪ್ಪು ತಿಳುವಳಿಕೆಯು ಹೋಗುವ ಬಗೆ ಹೇಗೆ? ಕನ್ನಡಿಗರೂ ಪಾಶ್ಚಿಮಾತ್ಯರಂತೆ ಸಾಹಸಿಕರೂ ಪರೋಪಕಾರಲೋಲುಪರೂ ಸಾಹಸಿಗಳೂ ಧೈರ್ಯಶಾಲಿಗಳೂ ಆಗಲಿಕ್ಕುಪಾಯಗಳಾವುವು?" (ಹೊಸಗನ್ನಡದ ಅರುಣೋದಯ–ಪು. ೩೨೦) ಎನ್ನುವಂತಹ ಪ್ರಶ್ನೆಗಳಿಗೆ ಉತ್ತರರೂಪದಲ್ಲಿ ಪಾಶ್ಚಾತ್ಯರಲ್ಲಿನ ಸಾಧಕರ ಕುರಿತ ವಿಚಾರಗಳನ್ನು ಅನುವಾದಗೊಳಿಸಿ ಜನರಲ್ಲಿ ಹೊಸವಿಚಾರಗಳನ್ನು ರೂಪಿಸಲು ಇಂತಹ ಜೀವನ ಚರಿತ್ರೆಗಳು ಮಾದರಿಯಾದವು. ಕೂಪಮಂಡೂಕದಂತೆ ಭಾರತೀಯರು ಬದುಕುತಿದ್ದ ಸಂದರ್ಭದಲ್ಲಿ ಹೊಸ ಆಲೋಚನೆಗಳು ನಿರ್ಮಾಣವಾಗಬೇಕಾದರೆ ಇಂತಹ ಜೀವನ ಚರಿತ್ರೆಗಳಿಂದ ಮಾತ್ರ ಸಾಧ್ಯ ಎಂದು ಭಾವಿಸಿದ್ದು ಈ ಪ್ರಕಾರವನ್ನು ಅನುವಾದಗಳ ಪ್ರವೇಶದೊಂದಿಗೆ ಸ್ವೀಕರಿಸಲು ಪ್ರೇರಣೆಯಾಯಿತು.

## ವಸ್ತು

ಪಾಶ್ಚಾತ್ಯರಲ್ಲಿ ಈ ಪ್ರಕಾರವು ಒಂದು ದೇಶದ ಚರಿತ್ರೆಯನ್ನು ಮತ್ತು ಒಬ್ಬ ಸಾಧಕನ ಜೀವನವನ್ನು ಸಮಾಜಕ್ಕೆ ಮಾದರಿಯಾಗಿ ನೀಡಬೇಕು ಎನ್ನುವ ಉದ್ದೇಶದಿಂದ ರೂಪಿತವಾಯಿತು. ಆದರೆ ಭಾರತೀಯರು ಅಂತಹ ಒಂದು ಪ್ರಕಾರವನ್ನು ಸ್ವೀಕರಿಸಲು ಅನೇಕ ಕಾರಣಗಳಿದ್ದವು. ದೇಶ, ಭಾಷೆಯಂತಹ ವಿಚಾರಗಳಲ್ಲಿ, ವೈಯಕ್ತಿಕ ಬದುಕಿನ ವಿಚಾರಗಳಲ್ಲಿ ಹೊಸ ವಿಚಾರಧಾರೆಯನ್ನು ನಿರ್ಮಿಸುವ ಪ್ರಚೋದನಕಾರಿಯಾದಂತಹ ವಾಸ್ತವ ಜಗತ್ತಿನ ಅನೇಕ ವಿಚಾರಗಳು ಸಾಹಿತ್ಯದ ಮೂಲಕ ಒಂದು ಪ್ರಕಾರವು ಅವಶ್ಯಕವಾಗಿತ್ತು. ಒಂದು ಸ್ಥಾಪಿತ ವ್ಯವಸ್ಥೆಯಿಂದ ಜನರನ್ನು ಹೊರತರುವಂತಹ ವಿಚಾರಗಳು ದೊರೆಯುವಂತಾಗಬೇಕಾಗಿತ್ತು. ಆದರೆ ಪರಂಪರಾಗತವಾದ ಸಮಾಜ, ಜೀವನ ಶೈಲಿ, ಆಲೋಚನಾ ಕ್ರಮ ಮುಂತಾದವುಗಳನ್ನು ಏಕಕಾಲಕ್ಕೆ ಬುಡಮೇಲು ಮಾಡಲು ಸಾಧ್ಯವಿಲ್ಲ. ಇದಕ್ಕೆ ಹೊರ ಜಗತ್ತಿನ ಜ್ಞಾನದ ಅವಶ್ಯಕತೆಯಿತ್ತು. ಕನ್ನಡಕ್ಕೆ ಆರಂಭದಲ್ಲಿ ಬಂದ ಕಾದಂಬರಿಗಳು ಹಾಗೂ ಸಣ್ಣಕಥೆಗಳು ಇಂತಹುದೇ ಆದ ವಿಚಾರಗಳನ್ನು ವ್ಯಕ್ತಪಡಿಸಿದರು. ಇಂತಹ ವಿಚಾರಗಳನ್ನು ಚರಿತ್ರೆಯ ವಿವಿಧ ಪ್ರಕಾರಗಳಲ್ಲಿ ತಿಳಿಸುವ ಪ್ರಯತ್ನ ೧೯ನೇ ಶತಮಾನದಲ್ಲಿ ನಡೆಯಿತು.

### ೧. ಜೀವನ ಚರಿತ್ರೆ

ವಾಸ್ತವ ಜಗತ್ತಿನ ಒಬ್ಬ ಮಹಾಪುರುಷನ ಜೀವನ ಸಾಧನೆಯನ್ನು ಮಕ್ಕಳಿಗೆ ತಿಳಿಸುವದರಿಂದ ಅವರ ಬೌದ್ಧಿಕ ಹಾಗೂ ಮಾನಸಿಕ ಬೆಳವಣಿಗೆಗೆ ಪೂರಕವಾಗಿತ್ತದೆ ಎಂದು ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಈ ಪ್ರಕಾರವನ್ನು ಪಾಶ್ಚಾತ್ಯ ಸಾಹಿತ್ಯದಿಂದ ಸ್ವೀಕರಿಸಿದರು. ಒಬ್ಬ ವಿಶಿಷ್ಟ ವ್ಯಕ್ತಿಯ ಜೀವನ ಸಾಧನೆಯ ವಿವರಣೆ ಇದರ ಲಕ್ಷಣ. ಭಾರತದ ಆರಂಭಿಕ ಕಾದಂಬರಿಗಳ ವಸ್ತು ಇದೇ ಮಾದರಿಯಲ್ಲಿವೆ. ಗಳಗನಾಥರು ಹೇಳುವಂತೆ 'ಜನತೆಯಲ್ಲಿ ದೇಶಾಭಿಮಾನವನ್ನು ಉಕ್ಕಿಸಬೇಕಾದರೆ, ಚಾರಿತ್ರಿಕ ಮಹಾ ಪುರುಷರ ರೋಚಕ ಸಾಹಸಗಳನ್ನು ಮನಮುಟ್ಟುವಂತೆ ಹೇಳಬೇಕು'(ಕನ್ನಡಿಗರ

ಕರ್ಮಕಥೆ–ಮುನ್ನುಡಿ)ಎಂದು. ಕನ್ನಡದಲ್ಲಿ ಈಗಾಗಲೇ ತಿಳಿಸಿದಂತೆ ಪುರಾಣ ಪ್ರಸಿದ್ಧ ಪಾತ್ರಗಳ ಹಾಗೂ ಕಾಲ್ಪನಿಕ ಪಾತ್ರಗಳನ್ನು ಇಟ್ಟುಕೊಂಡು ಚರಿತ್ರೆಗಳು ರೂಪಿತವಾಗಿದ್ದವು. ಬೆರಳೆಣಿಕೆಯಲ್ಲಿ ಚರಿತ್ರೆಗಳು ಅಲ್ಲಲ್ಲಿ ಕಾಣಿಸಿಕೊಂಡಿದ್ದವು. ಜೊತೆಗೆ ಹೊಸ ಮಾದರಿಯ ವಾಸ್ತವ ಸಮಾಜ ಮತ್ತು ಬದುಕಿಗೆ ಅನ್ವಯಿಸುವ ಚರಿತ್ರೆಗಳ ರಚನೆಯ ಅವಶ್ಯಕತೆಯಿತ್ತು. ಅಂತೆಯೇ ೧೯ ಹಾಗೂ ೨೦ನೆಯ ಶತಮಾನದಲ್ಲಿ ಇಂತಹ ವಿಚಾರಗಳನ್ನು ತಿಳಿಸುವ ಸಾಹಿತ್ಯ ಕೃತಿಗಳ ಅವಶ್ಯತೆಯಿತ್ತು.

ಪಾಶ್ಚಾತ್ಯರ ಪ್ರಕಾರವೂ ಜೀವನ ಚರಿತ್ರೆ ಎಂದರೆ 'A narrative which seeks conscivesly and artistically to pecord the actions and recreate the personality of an individual life.' (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು, ೧೩೭)ಎಂದಿದೆ.

ಈ ಹಿನ್ನೆಲೆಯಲ್ಲಿಯೇ ಜೀವನ ಚರಿತ್ರೆಯ ರಚನೆಯನ್ನು ಕುರಿತು ಕೆ.ಪಿ.ಶಿವಲಿಂಗಯ್ಯನವರ ಅಭಿಪ್ರಾಯವಿದೆ. "ಜೀವನ ಚರಿತ್ರೆ ಎನ್ನುವುದು ವ್ಯಕ್ತಿಯ ಜೀವನದ ಪ್ರತಿಕೃತಿ. ಯಾರು ತಮ್ಮ ಬದುಕಿನಿಂದ ಜನತೆಯ ಮೇಲೆ ಮತ್ತವರ ಜೀವನದ ಮೇಲೆ ಶಾಶ್ವತವಾದ, ಪರಿಣಾಮಕಾರಿಯಾದ ಪ್ರಭಾವ ಬೀರುತ್ತಾರೋ ಅಂತಹ ಉದಾತ್ತ ಜೀವಿಗಳನ್ನು ಅವರು ಕಣ್ಮರೆಯಾದ ಅನಂತರವೂ ಜನ ಸ್ಮರಿಸಿಕೊಳ್ಳುತ್ತಾರೆ. ಅಂತಹ ಮಹಾತ್ಮರ ಬಾಳೆ ಮುಂದಣ ಜನಾಂಗಕ್ಕೆ ಒಂದು ಬೆಳಕಾಗಿ, ಅವರ ಜೀವನದ ಸಂಗತಿಗಳೇ ಚೆನ್ನಾದ ಒಂದು ಕಥೆಯಾಗಿ ಗೋಚರವಾಗುತ್ತದೆ."(ಕನ್ನಡನುಡಿ ಬೆಳ್ಳಿಸಂಚಿಕೆ–೧೯೬೩–ಪು.೬೪) ಇಂತಹ ಮಹಾತ್ಮರ ಜೀವನ ಚರಿತ್ರೆಯ ಅಗತ್ಯತೆ ೧೯ನೇ ಶತಮಾನದ ಭಾರತೀಯ ಪರಿಸರದಲ್ಲಿ ಇತ್ತು. ಹೆಚ್ಚು ಕಡಿಮೆ ಈ ಕಾಲಘಟ್ಟದಲ್ಲಿಯೇ ಪಾಶ್ಚಾತ್ಯ ಸಾಹಿತ್ಯದಿಂದ ಬಂಗಾಳಿ, ಮರಾಠಿಯಂತಹ ಅನೇಕ ಭಾರತೀಯ ಭಾಷೆಗಳಿಗೆ ಜೀವನ ಚರಿತ್ರೆಗಳು ಅನುವಾದಗೊಂಡವು.

### ಇಂಗ್ಲಿಷ್‌ನಿಂದ ಅನುವಾದಗೊಂಡ ಚರಿತ್ರೆಗಳು

ಈಗಾಗಲೇ ತಿಳಿಸಿದಂತೆ 'ಬೂಸಿಯ ಕೊನೆಯ ದಿನಗಳು' ಜೀವನ ಚರಿತ್ರೆಯ ಅನುವಾದ ಪ್ರಕ್ರಿಯೆ ಕನ್ನಡದಲ್ಲಿ ಆರಂಭವಾಯಿತು. ನಂತರದಲ್ಲಿ ೧೮೮೮ರಲ್ಲಿ ಸೂರ್ಯನಾರಾಯಣರವರು ಇಂಗ್ಲೆಂಡಿನ ರಾಣಿಯನ್ನು ಕುರಿತು ಬರೆದಿದ್ದ ಇಂಗ್ಲಿಷ್‌ನ ಚರಿತ್ರೆಯಾದ 'ಶ್ರೀಮನ್‌ಮಹಾರಾಜ್ಞೆ ಇಂಡಿಯಾ ಚಕ್ರವರ್ತಿಯವರ ಸಚ್ಚರಿತ್ರೆ ಸಾರಸಂಗ್ರಹ'ವನ್ನು ಅನುವಾದಿಸಿದರು. ಇದರಲ್ಲಿ ಸ್ತ್ರೀಯೊಬ್ಬಳು ಇಡೀ ದೇಶದ ಅಧಿಕಾರವನ್ನು ನಡೆಸುವ ಸಾಮರ್ಥ್ಯವನ್ನು ಹೊಂದಿರುವ ಬಗೆ ಹಾಗು ಆಕೆಯ ಆಡಳಿತ ವ್ಯವಸ್ಥೆಯನ್ನು ಈ ಚರಿತ್ರೆಯು ತಿಳಿಸುತ್ತದೆ. ಅಲ್ಲದೆ ಆ ದೇಶದಲ್ಲಿ ಹೆಣ್ಣು ಮಕ್ಕಳಿಗಿರುವ ಸ್ಥಾನಮಾನ, ಸ್ತ್ರೀಯರ ಧೈರ್ಯದಂತಹ ವಿಚಾರಗಳು ಇದರಲ್ಲಿ ಅಭಿವ್ಯಕ್ತಗೊಳಿಸುವುದು ಅನುವಾದಕರ ಉದ್ದೇಶವಾದಂತಿದೆ. ನಮ್ಮ ನಾಡಿನಲ್ಲಿ ಇಂತಹ ಚರಿತ್ರೆಗಳ ಅವಶ್ಯಕತೆ ೧೯ನೇ ಶತಮಾನದಲ್ಲಿ ಇತ್ತು. ಸ್ತ್ರೀಯರಲ್ಲಿ ಆತ್ಮಸ್ಥೈರ್ಯವನ್ನು ತುಂಬುವಂತಹ ಕಾರ್ಯವನ್ನು ಅಂದಿನ ಸಾಹಿತ್ಯ ವರ್ಗ ಮಾಡಿತು.

೧೮೯೦ರ ನಂತರದಲ್ಲಿ ಯಥೇಚ್ಛವಾಗಿ ಇಂಗ್ಲಿಷ್‌ನ ಕೆಲವು ಮುಖ್ಯ ಸಾಧಕರ ಜೀವನ ಚರಿತ್ರೆಗಳು ಅನುವಾದಗೊಂಡಿವೆ. ಪಾಶ್ಚಾತ್ಯರನ್ನು ಕುರಿತು ೧೯೦೦ರಲ್ಲಿ ವಿದ್ಯಾದಾಯಿನಿ ಪತ್ರಿಕೆಯಲ್ಲಿ ಪೆಸ್ಟಲಾಟ್ಸ್‌ರವರ ಚರಿತ್ರೆ, ಆರ್ನಾಲ್ಡ್‌ರವರ ಚರಿತ್ರೆ, ೧೯೧೦ರಲ್ಲಿ ಆನವಟ್ಟಿಯರಾಮರಾಯರಿಂದ ಕ್ರಿಸ್ಟಾಫರ್ ಕೊಲಂಬಸ್‌ನ ಜೀವನಚರಿತ್ರೆ, ೧೯೯೯ರಲ್ಲಿ ಫ.ಗು.ಹಳಕಟ್ಟಿಯವರು 'ನಾಮದಾರ ಎವರ್ಟ್ ಗ್ಲ್ಯಾಡ್ಸ್ಟನ್ನ' ದೊರೆಗಳ ಚರಿತ್ರೆಗಳನ್ನು ರಚಿಸಿದರು. ಫ.ಗು.ಹಳಕಟ್ಟಿಯವರು ಇದರ ಪ್ರಸ್ತಾವನೆಯಲ್ಲಿ ಆತನನ್ನು ಹೀಗೆ ಹಾಡಿ ಹೊಗಳಿದ್ದಾರೆ.

ಅತ್ಯುಚ್ಚತರಾಂಗ್ಲೇಯಾ
ಮಾತ್ಯಪದದೆ ತನ್ನಗರಿಮೆಯಂ ಮೆರೆದುರ್ವೀ
ನುತ್ಯನೆನಿಸಿದಾ ಗ್ಲಾಡ್ ಸ್ಟ
ನ್ಸತ್ಯಾತ್ಮಕವನೆ ಜಗದೆ ಧನ್ಯಂ ಮಾನ್ಯಂ.(ವಿದ್ಯಾದಾಯಿನಿ ಪತ್ರಿಕೆ)

ಇಲ್ಲಿ ಒಬ್ಬ ದೊರೆ ತನ್ನ ಆಳ್ವಿಕೆಯಲ್ಲಿ ಮಾಡಿದ ಉತ್ತಮ ಕಾರ್ಯಗಳಿಂದ ಆತನು ಶ್ರೇಷ್ಠತೆಯನ್ನು ಮೆರೆದನು ಎಂದು ಹಾಡಿ ಹೊಗಳಿದ್ದಾರೆ. ಈ ಎಲ್ಲಾ ಜೀವನ ಚರಿತ್ರೆಗಳ ಹಿನ್ನೆಲೆಗಳನ್ನು ಕುರಿತು ಗಮನಿಸಿದಾಗ ಅವುಗಳಲ್ಲಿ ಪಾಶ್ಚಾತ್ಯರಲ್ಲಿ ಇರುವ ದೇಶಭಕ್ತಿ, ನಿಸ್ವಾರ್ಥಸೇವೆ, ಕರ್ತವ್ಯನಿಷ್ಠೆ, ಸಾಮಾಜಿಕ ಕಳಕಳಿಗಳು ವ್ಯಕ್ತಗೊಂಡ ಬಗೆಯನ್ನು ವಿವರಿಸಲಾಗಿದೆ. ಈ ಮಾದರಿಯಲ್ಲೇ ಅಂದಿನ ಭಾರತೀಯ ಸಮಾಜದಲ್ಲಿ ಇದ್ದಂತಹ ಮಹನೀಯರ ವ್ಯಕ್ತಿತ್ವಗಳನ್ನು ವಿವರಿಸುವ ಪ್ರಯತ್ನವನ್ನು ಮಾಡಿದರು.

ಇಂತಹ ಒಂದು ಪ್ರಕಾರವು ರೂಪುಗೊಳ್ಳಲು ಭಾರತದ ಪರಿಸರವೂ ಪೂರಕವಾಗಿತ್ತು. ಇಡೀ ದೇಶ ಅನ್ಯರ ಆಳ್ವಿಕೆಗೆ ಒಳಗಾಗಿತ್ತು. ಒಬ್ಬ ಶ್ರೇಷ್ಠ ನಾಯಕನ ಅನಿವಾರ್ಯ ಈ ದೇಶಕ್ಕಿತ್ತು. ಅಧಿಕಾರದಲ್ಲಿರುವವರು ಸ್ವಾರ್ಥ ಸಾಧನೆಯ ಹಾದಿಯಲ್ಲಿದ್ದರು. ವ್ಯಕ್ತಿಗಳು ವೈಯಕ್ತಿಕ ಬದುಕಿನ ಕಡೆಗೆ ಮಾತ್ರ ಒಲವು ತೋರಿದ್ದರು. ಎಲ್ಲೆಲ್ಲೂ ಸ್ವಾತಂತ್ರ್ಯದ ಕುರಿತ ಹೋರಾಟ ಆರಂಭವಾಗಿದ್ದರೂ ಪೂರ್ಣ ಬೆಂಬಲದೊಂದಿಗೆ ಹೋರಾಡುವಂತಹ ಸಮಾಜ ನಿರ್ಮಾಣದ ಅವಶ್ಯಕತೆ ಇತ್ತು. ಸಮಾಜದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ವಿಷಯಗಳಲ್ಲಿ ಅನೇಕ ಸಲ್ಲದ ವಿಚಾರಗಳು ಬೇರೂರಿದ್ದವು. ಇಂತಹ ಸಂದರ್ಭದಲ್ಲಿ ಈ ಪ್ರಕಾರವು ಉತ್ತಮ ವೇದಿಕೆಯಾಯಿತು.

ಪಾಶ್ಚಿಮಾತ್ಯರಾದ ಪೆಸ್ಟಲಾಟ್ಸ್‌ನ ಜೀವನ ಚರಿತ್ರೆಯು ಒಬ್ಬ ಸರ್ಕಾರಿ ನೌಕರ ಸಂಬಳ ಸಿಗಲಿ ಬಿಡಲಿ ತನ್ನ ಕರ್ತವ್ಯವೇ ಮುಖ್ಯವೆಂದು ದುಡಿಯುವ ವ್ಯಕ್ತಿಯ ಕುರಿತದ್ದಾಗಿದೆ. ಇದರಲ್ಲಿ ಒಬ್ಬ ಸಹಾಯೋಪಾಧ್ಯಾಯನಾಗಿ ಕೆಲಸ ಮಾಡುತ್ತಿದ್ದ ಈತನ ಕಾರ್ಯನಿಷ್ಠೆಯನ್ನು ಜನರಿಗೆ ತಿಳಿಸುವುದೇ ಈ ಲೇಖನದ ಉದ್ದೇಶವಾಗಿದೆ. ಸಂಬಳ ತೆಗೆದುಕೊಂಡು ಸರಿಯಾಗಿ ಕರ್ತವ್ಯ ಮಾಡದೆ ಇರುವವರಿಗೆ ಇವರ ಜೀವನಚರಿತ್ರೆಯು ಕರ್ತವ್ಯನಿರತರನ್ನಾಗಿಸಲು ಪ್ರೇರಣೆಯಾಗುವಂತಿದೆ. (ವಿದ್ಯಾದಾಯಿನಿ–೧೯೦೦)

ಮಹಾದೇವ ಗೋವಿಂದ ರಾನಡೆಯವರು ದೇಶದ ಅಭಿವೃದ್ಧಿಯನ್ನು ಕುರಿತು ಹೇಳುವಾಗ "ಮಧ್ಯಮ ವರ್ಗದವರಿಂದಲೇ ದೇಶಾಭ್ಯುದಯ ಸಾಧ್ಯ" ಎಂದಿದ್ದಾರೆ. ಈ ವಿಚಾರಗಳೇ ಕನ್ನಡದಲ್ಲಿ ಈ ಪ್ರಕಾರವು ಸ್ಥಾನವನ್ನು ಪಡೆಯಲು ಕಾರಣವಾಯಿತು. ಈ ಸಂದರ್ಭದಲ್ಲಿ ಅನುವಾದಗೊಂಡ ಚರಿತ್ರೆಗಳಲ್ಲಿನ ಪಾಶ್ಚಿಮಾತ್ಯ ಸಾಧಕರು ಹೆಚ್ಚು ಮಧ್ಯಮ ವರ್ಗಕ್ಕೇ ಸೇರಿದವರಾಗಿದ್ದಾರೆ. ಆರ್ನಾಲ್ಡ್‌ರವರ ಚರಿತ್ರೆಯು ಇಂತಹ ವಿಶಿಷ್ಟವಾದ ನೀತಿಯನ್ನು ಬೋಧಿಸುವಂತಹುದೇ ಆಗಿದೆ. ಈ ಚರಿತ್ರೆಯನ್ನು ಬರೆದುದರ ಉದ್ದೇಶವನ್ನು ಲೇಖಕರು ಹೀಗೆ ಹೇಳಿದ್ದಾರೆ "....ಪ್ರಪಂಚದಲ್ಲಿ ಅನೇಕ ವಿಷಯಗಳಲ್ಲಿ ರೂಢಮೂಲವಾಗಿರುವ ಅಜ್ಞಾನಾಂಧಕಾರವನ್ನು ಜ್ಞಾನೋದಯಕ್ಕೆ ಸಾಧನಗಳಾದ ಪಾಠ ಪ್ರವಚನಗಳಿಂದಲೂ, ಹಿತೋಪದೇಶಗಳಿಂದಲೂ ನಿರ್ಮೂಲನ ಮಾಡಿಕೊಳ್ಳಬೇಕು, ಎಂಬ ಅಭಿಲಾಷೆಯೂ ಇವರ ಚರಿತ್ರೆಯ ಶ್ರವಣದಿಂದ ಹುಟ್ಟುವುದು. ಯಾವ ದೇಶದಲ್ಲಿ ಇಂಥಾ ಅಭಿಪ್ರಾಯಗಳು ವಿಶೇಷವಾಗಿ ಹುಟ್ಟುವುವೋ, ಆ ದೇಶವು ಬಹು ಅಭಿವೃದ್ಧಿ ಸ್ಥಿತಿಯಲ್ಲಿರುವುದು. ಬ್ರಿಟೀಶ್ ಜನರು ಸ್ವಶಕ್ತಿಯಿಂದ ಜೀವಿಸುವುದಕ್ಕೂ ಇಂಥಾ ಪಾಠಕರ ಬಾಹುಳ್ಯವೇ ಮುಖ್ಯ ಕಾರಣವು."(ವಿದ್ಯಾದಾಯಿನಿ) ಆರ್ನಲ್ಡ್‌ರವರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಒಳ್ಳೆಯ ವಿದ್ಯಾರ್ಥಿಯಾಗಿದ್ದವರು. ನಂತರ ಶಿಕ್ಷಕ ವೃತಿಯನ್ನು ಆಯ್ದುಕೊಂಡ ಇವರು ಎಲ್ಲರ ಮೆಚ್ಚಿನ ಹಾಗೂ ಉತ್ತಮ ಗುರುವಾಗಿದ್ದರು. ದೇಶಪ್ರೇಮ, ನಿಸ್ವಾರ್ಥ ಸೇವೆಯ ಹಿನ್ನೆಲೆಯಲ್ಲಿ ಉತ್ತಮ ಪ್ರಜೆಗಳನ್ನು ರೂಪಿಸುವ ಕಾರ್ಯವನ್ನು ಮಾಡಿದವರು.  ಇಂತಹ ವ್ಯಕ್ತಿಗಳ ಪರಿಚಯವು ಅಂದಿನ ದೇಶದ ಸ್ಥಿತಿಯ ಸಂದರ್ಭದಲ್ಲಿ ಇದೆ ಎಂದು ಲೇಖಕರು ಇದನ್ನು ಅನುವಾದಿಸಿದರು. ಒಂದು ದೇಶದ ಪ್ರಗತಿಗೆ ಉತ್ತಮ ಗುರುವಿನ ಅಗತ್ಯ ಮುಖ್ಯವಾಗಿದೆ. ಇಂತಹ ಚರಿತ್ರೆಗಳು ಅಂತಹ ಗುರುವಿನ ನಿರ್ಮಾಣಕ್ಕೆ ಪ್ರೇರಣೆಯಾಗಬಲ್ಲದು ಎಂಬುದು ಅನುವಾದಕರ ಚಿಂತನೆಯಾಗಿದೆ.

ಇದೇ ಸಂದರ್ಭದಲ್ಲಿ ವೆಂಕಟರಂಗೋ ಕಟ್ಟಿಯವರು ಬರ್ಥೋಲ್ಡನ ಚರಿತ್ರೆಯನ್ನು ಅನುವಾದಿಸಿದ್ದಾರೆ. ಇದನ್ನು ಮರಾಠಿಯಿಂದ ಅನುವಾದಿಸಿದ್ದಾರೆ. "ತಮ್ಮ ಕಾಲದ ಕಥಾ ಸಾಹಿತ್ಯಾಭಿರುಚಿಗಾಗಿಯೂ, ವಿನೋದವೃತ್ತಿ ಪರಿಪುಷ್ಟಿಗಾಗಿಯೂ ಬರ್ಥೋಲ್ಡನೆಂಬ ವಿದೂಷಕನ ಹಾಸ್ಯಮಯ ಕಥೆಗಳನ್ನು ಅವರು ಕನ್ನಡಿಸಿದರು" ಎಂದು ದ.ರಾ ಬೇಂದ್ರೆಯವರು ಹೇಳಿದ್ದಾರೆ. ಇದರ ಒಂದು ಭಾಗವನ್ನು ಕ್ರಮಿಕ ಪಠ್ಯ ಪುಸ್ತಕದಲ್ಲಿ ಸೇರಿಸಿದ್ದರು. (ಬರ್ಥೋಲ್ಡನು ನಾಯಿಗಳ ಕೈಯೊಳಗಿಂದ ಪಾರಾದದ್ದು.) ಇದು ನೀತಿ ಪ್ರಧಾನವೂ ಆಗಿದೆ. ಆದರೆ ಬೇಂದ್ರೆ ಹೇಳಿರುವ ಹೇಳಿಕೆಯನ್ನೂ ಮೀರಿ ಹೊಸ ಚಿಂತನೆಯನ್ನು ಈ ಚರಿತ್ರೆ ನೀಡುತ್ತದೆ. ಇದು ಕಥನ ಶೈಲಿಯಲ್ಲಿದೆ. ಚರಿತ್ರೆಗಳಲ್ಲಿನ ಪಾತ್ರಗಳ ಸಾಧನೆ ವಿವಿಧ ಕ್ಷೇತ್ರಕ್ಕೆ ಸಂಬಂಧಿಸಿದರಾದರೂ ಅದರ ಉದ್ದೇಶಗಳೆಲ್ಲ ಒಂದೇ ಆಗಿವೆ.

**ಭಾರತದ ಇತರೆ ಭಾಷೆಗಳಿಂದ ಅನುವಾದಗೊಂಡ ಜೀವನ ಚರಿತ್ರೆ**

ಇತರ ಭಾರತೀಯ ಭಾಷೆಗಳಲ್ಲೂ ಜೀವನ ಚರಿತ್ರೆಗಳು ಅಚನೆಯಾಗಿದ್ದರೂ ಅವು ಕೂಡ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವದಿಂದಲೇ ರಚನೆಯಾದದ್ದು. ಮರಾಠಿಯಲ್ಲಿ ೧೮೪೦ರ ವೇಳೆಗಾಗಲೇ

ಸ್ವತಂತ್ರ ಜೀವನ ಚರಿತ್ರೆ ರಚನೆಯಾಗಿತ್ತು. ದತ್ತಾತ್ರೇಯ ಬಲವಂತ ಪಾರ್ಸನೆಸ್ ಅವರು ರಚಿಸಿದ ಕೃತಿಯನ್ನು ಆಧರಿಸಿ ಕೆರೋಡಿ ರಾಮರಾಯರು ೧೯೦೩ರಲ್ಲಿ ಝೂನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರೆಯನ್ನು ಅನುವಾದಿಸಿದರು. ಇದರ ಅನುವಾದದ ಉದ್ದೇಶವನ್ನು ಕೆರೋಡಿಯವರು ಹೀಗೆ ಹೇಳಿದ್ದಾರೆ.

"......ಮಹಾರಾಷ್ಟ್ರ ಭಾಷೆಯಲ್ಲಿ ಪ್ರಸಿದ್ಧಿಯಾಗುವುದಕ್ಕೆ ಮುಂಚೆ ಪ್ರಾಯಶಃ ನಮ್ಮ ದೇಶದವರಿಗೆ ಈ ಶ್ರೇಷ್ಠ ಸ್ತ್ರೀಯೋರ್ವಳ ಮಹಿಮೆಯು ಸರಿಯಾಗಿ ತಿಳಿದಿರಲಿಲ್ಲವೆಂತಲೇ ಭಾವಿಸಬೇಕು. ಮೂಲ ಗ್ರಂಥದಲ್ಲಿರುವ ಯಾವ ಸಂಗತಿಯನ್ನು ಬಿಡದೆ ನನ್ನ ಅಲ್ಪ ಯೋಗ್ಯಾನುಸಾರವಾಗಿ ಕನ್ನಡ ಭಾಷೆಯಲ್ಲಿ ಈ ಚರಿತ್ರೆಯನ್ನು ಬರೆದಿರುತ್ತೇನೆ."(ಹೊಸಗನ್ನಡದ ಅರುಣೋದಯ-ಪು. ೨೭೦) ಎಂದಿದ್ದಾರೆ.

ಬಂಗಾಳಿಯಿಂದ ಜೀವನ ಚರಿತ್ರೆಗಳು ಅನುವಾದಗೊಂಡಿದ್ದು ೧೮೯೬ರಲ್ಲಿ, ಸತ್ಯ ಚರಣ ಶಾಸ್ತ್ರಿಯವರ ಕೃತಿಯನ್ನಾಧರಿಸಿ ಚ. ವಾಸುದೇವಯ್ಯನವರು ಎರಡು ಕೃತಿಗಳನ್ನು ಅನುವಾದಿಸಿದರು. ೧೮೯೬ರಲ್ಲಿ 'ಆರ್ಯಕೀರ್ತಿ'ಯ ಮೊದಲ ಭಾಗ, ೧೮೧೮ರಲ್ಲಿ ಎರಡನೆಯ ಭಾಗ ಪ್ರಕಟವಾಯಿತು. ಇದರಲ್ಲಿ ಮೊಗಲ್ ಸಾಮ್ರಾಜ್ಯದ ಉಚ್ಛ್ರಾಯ ಸ್ಥಿತಿ ಹಾಗೂ ಅವನತಿಗಳ ಕುರಿತು ಚಿತ್ರಿಸುತ್ತ ಶಿವಾಜಿಯ ಜೀವನ ಚರಿತ್ರೆಯನ್ನು ಇದರಲ್ಲಿ ಕೊಡುತ್ತಾರೆ.

ತೆಲುಗಿನಲ್ಲಿ ೧೯೧೮ರಲ್ಲಿ ಕಮಲಾಂಬಾರವರು ಭಂಡಾರು ಅಚ್ಚಮಾಂಬರವರು ರಚಿಸಿದ್ದ "ಅಬಲಾ ಸಚ್ಚರಿತ್ರ ರತ್ನ ಮಾಲವಿದೂಷೀಮಣಿಲು' ಎಂಬ ಜೀವನ ಚರಿತ್ರೆಯನ್ನು ಅನುವಾದಿಸಿದರು. ಅದರಲ್ಲಿರುವ ಅಂಶಗಳು ಹೀಗಿವೆ "ಇದರಲ್ಲಿ ಮುಖ್ಯವಾಗಿ ಮೂರು ವಿಭಾಗಗಳಿದ್ದು, ಒಂದರಲ್ಲಿ ಮೂಲ ಲೇಖಕಿ ಭಂಡಾರು ಅಚ್ಚಮಾಂಬ, ಅಹಲ್ಯಾಬಾಯಿ ಹೋಳ್ಕರ್,ತೋರುದತ್ತ, ಮೀರಾಬಾಯಿ ಮೊದಲಾದ ೬೨ ಮಂದಿ ಮಹಿಳೆಯರ ಬಗೆಗೂ ಎರಡನೇ ಭಾಗದಲ್ಲಿ ಭಾಮತಿ, ಲೀಲಾವತಿ, ಜೀಜಾಬಾಯಿ, ಮುಕ್ತಾಬಾಯಿ ಮೊದಲಾದ ೫೫ ಮಂದಿ ಚಾರಿತ್ರಿಕ ಮಾತೆಯರ ಬಗೆಗೂ, ಮೂರನೆಯ ಭಾಗದಲ್ಲಿ ಮಾದಲಾಸೆ, ಊರ್ವಶಿ, ವಾಗ್ದೇವಿ, ಗಾರ್ಗಿ ಮೊದಲಾದ ಪುರಾಣದಲ್ಲಿ ಉಕ್ತವಾಗಿರುವ ಮಹಿಳೆಯರ ಬಗೆಗೂ, ರಚಿಸಲಾದ ಚರಿತ್ರೆಯ ವಿವರಗಳಿವೆ."(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು. ೧೪೦)

ಈ ಕೃತಿಯ ಅನುವಾದದ ಭಾಷೆ ಮತ್ತು ನಿರೂಪಣಾ ಶೈಲಿ ಈ ರೀತಿ ಇದೆ- "ಪ್ರತಿಯೊಂದು ಕೆಲಸದಲ್ಲಿಯೂ ತೋರುದತ್ತನ ಸೂಕ್ಷ್ಮ ಬುದ್ಧಿಯು ಪ್ರಕಾಶವಾಗುತ್ತಾ ಇತ್ತು. ಗೋವಿಂದ ಚಂದ್ರನು ಪುತ್ರಿಯ ಸೂಕ್ಷ್ಮ ಬುದ್ಧಿಯನ್ನೂ ಜ್ಞಾಪಕಬುದ್ಧಿಯನ್ನೂ ನೋಡಿ ಆಶ್ಚರ್ಯವನ್ನು ಹೊಂದುತ್ತ ಇದ್ದನು. ಈಕೆಗೆ ತಾನು ರಚಿಸಿದ ಪದ್ಯಗಳು ಎಲ್ಲವೂ ಕಂಠಪಾಠವಾಗಿ ಇತ್ತಂತೆ. ಈಕೆಯು ಯಾವುದಾದರೂ ಒಂದು ಪುಸ್ತಕವನ್ನು ಓದುವಾಗ ಅದರಲ್ಲಿ ತನಗೆ ಅರ್ಥವಾಗದ ವಿಷಯವನ್ನು ಪುನಃ ಪುನಃ ಓದಿ ಅರ್ಥವನ್ನು ತಿಳಿದುಕೊಂಡ ಹೊರತು ಮುಂದಕ್ಕೆ ಓದುತ್ತ ಇರಲಿಲ್ಲ....." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ-ಪು, ೧೪೧)

ರಾಮಚಂದ್ರ ಹನುಮಂತ ದೇಶಪಾಂಡೆಯವರು ೧೮೯೧ರಲ್ಲಿ ರಚಿಸಿ 'ಹಿತಬೋಧಿನಿ'ಯಲ್ಲಿ ಪ್ರಕಟಿಸಿದ 'ಚೈತನ್ಯನ ಚರಿತ್ರವು' ಕೃತಿಗೆ ಸಂಬಂಧಿಸಿದಂತೆ ಹೇಳುವಾಗ ಜೀವನ ಚರಿತ್ರೆಯ ಅಗತ್ಯತೆಯನ್ನು ಹೀಗೆ ಹೇಳಿದ್ದಾರೆ "ಲೋಕದ ಜನರು ಏಳ್ಗೆಗೆ ಬರುವ ದಾರಿಯನ್ನು ತೋರಿಸಿಕೊಡುವುದರಲ್ಲಿ, ಸನ್ಮಾರ್ಗವನ್ನು ಹಿಡಿದ ಮಹಾತ್ಮರ ಚರಿತ್ರೆಯನ್ನು ಬರೆಯುವುದಕ್ಕಿಂತಲೂ ಉತ್ತಮವಾದ ಮಾರ್ಗವೂ ಯಾವುದೂ ಇಲ್ಲವು. ಆದರೆ ಒಬ್ಬರ ಚರಿತ್ರೆಯನ್ನು ಎರಡು ವಿಧವಾಗಿ ಬರೆಯಬಹುದು. ಅವರು ಹುಟ್ಟಿದ್ದು ಮೊದಲುಗೊಂಡು ಸಾಯುವವರೆಗೂ ಮಾಡಿದ ಕೆಲಸಗಳನ್ನು ಕ್ರಮವಾಗಿ ವಿವರಿಸುವುದು ಒಂದು ವಿಧವು. ಅವರು ಮಾಡಿದ ಕೆಲಸಗಳಿಗೆ ಉದ್ದೇಶವನ್ನು ಕಂಡು ಹಿಡಿದು ವಿವರಿಸುವುದು ಮತ್ತೊಂದು ವಿಧವು. ಆದರೆ ಅವರು ಮಾಡಿದ ಕೆಲಸಗಳನ್ನು ಮಾತ್ರ ವಿವರಿಸುವುದರಿಂದ ಲೋಕಕ್ಕೆ ವಿಶೇಷ ಪ್ರಯೋಜನವಾಗಲಾರದು. ಆ ಕೆಲಸಗಳಿಗೆ ಅವರ ಶೀಲವು ಗೊತ್ತಾಗುತ್ತದೆ. ಅವರು ಪ್ರಖ್ಯಾತಿಯನ್ನು ಹೊಂದಿದ ಮಾರ್ಗವು ಚೆನ್ನಾಗಿ ತಿಳಿದು ಬರುತ್ತದೆ." (ನವೀನ ಪುಸ್ತಕಗಳು – ಚೈತನ್ಯ ಚರಿತ್ರವು – ಹಿತಬೋಧಿಸಿ –ಪು. ೩೯೫.) ಒಬ್ಬ ವ್ಯಕ್ತಿಯ ಸಾಧನೆಯ ಜೊತೆಯಲ್ಲಿಯೇ ಅವನ ವ್ಯಕ್ತಿತ್ವದ ಪರಿಚಯದ ಅನಿವಾರ್ಯತೆ ನಿಜವಾಗಿಯೂ ಅನಿವಾರ್ಯವಾದುದು. ಏಕೆಂದರೆ ಆತನ ಸಾಧನೆಯಲ್ಲಿ ಅವನ ಶೀಲತೆ ಎಷ್ಟರ ಮಟ್ಟಿಗೆ ಪೂರಕವಾಯಿತು ಎಂಬುದರ ಅರಿವಿನ ಜೊತೆಗೆ ವಿದ್ಯಾರ್ಥಿಗಳು ಅಂತಹ ವ್ಯಕ್ತಿತ್ವ ರೂಪಿಸಿಕೊಳ್ಳುವಂತೆ ಈ ಪ್ರಕಾರವು ಪ್ರೇರಣೆಯಾಗುತ್ತದೆ ಎಂಬುದು ಅವರ ಅಭಿಮತ.

ಇವರ ಇನ್ನೊಂದು ಜೀವನ ಚರಿತ್ರೆ ೧೮೯೭ರಲ್ಲಿ 'ಟಿಪ್ಪು ಸುಲ್ತಾನನ ಚರಿತ್ರೆ'. ಇದು ಕರ್ನಾಟಕದ ಐತಿಹಾಸಿಕ ವ್ಯಕ್ತಿ ಕುರಿತ ಮೊದಲ ಜೀವನ ಚರಿತ್ರೆ. ಇದಕ್ಕೆ ಪೂರ್ವದಲ್ಲಿ ಗಣೇಶ್‌ರಾವ್ ಪಾಲ್ ಎಂಬುವರು ಜಹಾಂಗೀರನ ಚರಿತ್ರೆಯನ್ನು ರಚಿಸಿದ್ದಾರೆ. ಇದು ಭಾರತೀಯ ಚಾರಿತ್ರಿಕ ವ್ಯಕ್ತಿಯನ್ನು ಕುರಿತು ಬರೆದ ಮೊದಲ ಚರಿತ್ರೆಯಾಗಿದೆ. ಟಿಪ್ಪುವಿನ ಚರಿತ್ರೆಯ ನಂತರದಲ್ಲಿ ಎಂ.ಶಿಂಗ್ರಯ್ಯನವರು ೧೯೦೪ರಲ್ಲಿ 'ಶ್ರೀ ಚಾಮರಾಜೇಂದ್ರ ಒಡೆಯರರ ಚರಿತ್ರೆ'ಯನ್ನು ರಚಿಸಿದ್ದಾರೆ. ಈ ಕೃತಿಯ ಮುನ್ನುಡಿಯಲ್ಲಿ "ಇದು ಲಕ್ಷಣ ಗ್ರಂಥವಲ್ಲ, ಪಂಡಿತ ರಂಜನೆಗೋಸ್ಕರ ಬರೆದುದಲ್ಲ ಅಥವಾ ಆತ್ಮಪ್ರೌಢಿಮೆಯನ್ನೂ ಪ್ರದರ್ಶಿಸುವುದಕ್ಕೂ ಬರೆದುದಲ್ಲ" ಎಂದಿದ್ದಾರೆ.

"....ಮೈಸೂರು ಸಂಸ್ಥಾನವು ಪುರಾಣ ಪ್ರಸಿದ್ಧವಾದ ಜಂಬೂ ದ್ವೀಪಕ್ಕೆ ಸೇರಿದ ಭರತ ವರ್ಷದ ದಕ್ಷಿಣ ಭಾಗದಲ್ಲಿ ಪೂರ್ವಪಶ್ಚಿಮ ಘಟ್ಟಗಳ ನಡುವೆ ಸ್ವಲ್ಪ ಹೆಚ್ಚು ಕಡಿಮೆ ತ್ರಿಕೋಣಾಕೃತಿಯನ್ನೈದಿ ಕಂಗೊಳಿಸುತ್ತಾ, ವಿಸ್ತಾರವಾದ ದಕ್ಷಿಣೋತ್ತರ ೨೩೦ ಮೈಲುಗಳಾಗಿಯೂ ಪೂರ್ವ ಪಶ್ಚಿಮ ೨೯೦ ಮೈಲುಗಳಾಗಿಯೂ, ಒಟ್ಟು ೨೯,೩೦೫ ಚದರ ಮೈಲಿಗಳುಷ್ಟುಳ್ಳದ್ದಾಗಿಯೂ ಇರುವುದು. ಈ ಸಂಸ್ಥಾನದ ಉತ್ತರದಲ್ಲಿ ಬಳ್ಳಾರಿ, ಅನಂತಪುರ, ಧಾರವಾಡ ಜಿಲ್ಲೆಗಳೂ, ಪೂರ್ವದಲ್ಲಿ ಕಡಪ ಉತ್ತರ ಆರ್ಕಾಟ್ ಶಾಲ್ಯ ಜಿಲ್ಲೆಗಳೂ, ದಕ್ಷಿಣದಲ್ಲಿ ಕೊಯಮುತ್ತೂರು, ನೀಲಗಿರಿ, ಮಲಬಾರ್

ಜಿಲ್ಲೆಗಳೂ, ಪಶ್ಚಿಮದಲ್ಲಿ ದಕ್ಷಿಣ ಕನ್ನಡ, ಉತ್ತರಕನ್ನಡ ಜಿಲ್ಲೆಗಳೂ ಇರುವುವು. ಈಜನಪದದಲ್ಲಿ ಈಗ ೫೫ ಲಕ್ಷ ಪ್ರಜೆಗಳಿಗೇನೂ ಕಡಿಮೆಯಿಲ್ಲ." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೪೩)

ಫ.ಗು.ಹಳಕಟ್ಟಿಯವರು ೧೯೧೪ರಲ್ಲಿ 'ಸಿಕಂದರ ಬಾದಶಹರ ಚರಿತ್ರೆ'ಯನ್ನು ಬರೆದರು. ಅದರ ಪ್ರಸ್ತಾವನೆಯಲ್ಲಿ "ಕನ್ನಡ ಭಾಷೆಯಲ್ಲಿ ಇತಿಹಾಸ ಪ್ರಸಿದ್ಧರಾದ ಪುರುಷರ ಚರಿತ್ರೆಗಳು ತೀರ ತುಸು ಇರುತ್ತದೆ. ಒಂದು ವೇಳೆ ಇಲ್ಲವೆಂದರೂ ಸಲ್ಲುವುದು. ಈ ಕೊರತೆಯನ್ನು ನನ್ನಂಥ ಅಲ್ಪಜ್ಞನು ದೂರ ಮಾಡುವದು ಅಸಾಧ್ಯವಾಗಿದ್ದರೂ, ಕೈಲಾದ ಮಟ್ಟಿಗೆ ಪ್ರಯತ್ನ ಮಾಡದೆ ಬಿಡುವದು ತಕ್ಕದ್ದಲ್ಲವೆಂದು ಗ್ರಹಿಸಿ, ಪ್ರಾಚೀನ ಇತಿಹಾಸದಲ್ಲಿ ಹೆಸರಾದ ಸಿಕಂದರ ಬಾದಶಹನ ಚರಿತ್ರೆಯನ್ನು ಹಲವು ಇಂಗ್ಲಿಷ್–ಮರಾಠಿ ಗ್ರಂಥಗಳ ಆಧಾರದಿಂದ ಬರೆದನು"(ಹೊಸಗನ್ನಡ ಸಾಹಿತ್ಯದ ಉದಯಕಾಲ–ಪು. ೧೯೮) ಎಂದು ಹೇಳಿದ್ದಾರೆ. ಅವನ ವ್ಯಕ್ತಿತ್ವವನ್ನು ಕುರಿತು "ಸಿಕಂದರ ಬಾದಶಹನು ಸಿಟ್ಟಿನ ಸ್ವಭಾವದವನಿದ್ದನು. ಒಮ್ಮೊಮ್ಮೆ ಈ ಸಿಟ್ಟಿನಿಂದ ಕೆಟ್ಟ ಪರಿಣಾಮಗಳು ಆಗುತ್ತಿದ್ದವು. ಇದು ಅವನಲ್ಲಿ ಒಂದು ದೊಡ್ಡ ದೋಷವಿತ್ತೆಂದು ಹೇಳಬಹುದು. ಕಾಲಿಸ್ತೀನೀಸನೆಂಬ ಪಂಡಿತನನ್ನು ವಿಶೇಷ ಕಾರಣವಿಲ್ಲದೆ ಸಿಟ್ಟಿನ ಭರದಲ್ಲಿಯೇ ಕೊಲ್ಲಿಸಿದನು........ಆತ್ಮ ಸಂಯಮನ ಮಾಡುವುದಕ್ಕೆ ಅವನ ಗುರುವಾದ ಅರಿಸ್ತಾಲನು ಅವನಿಗೆ ಉಪದೇಶ ಮಾಡಿದ್ದಿಲ್ಲೆಂದು ಹೇಳಲಿಕ್ಕೆ ಬರುವುದಿಲ್ಲ......ಆದರೆ ಮೈಯಲ್ಲಿ ತಾರುಣ್ಯದ ಮತ್ತು ರಾಜ್ಯಾಧಿಕಾರದ ಮದಗಳು ಸೇರಿದವೆಂದರೆ, ಚಿಕ್ಕಂದಿನಲ್ಲಿ ಹೇಳಿದ ಬೋಧಗಳೆಲ್ಲ ಇಲ್ಲದಂತೆ ಆಗಿ, ಅಂತಃಕರಣದಲ್ಲಿ ಇಚ್ಛೆಯ ಪ್ರಾಬಲ್ಯವೇ ಬೆಳೆಯುತ್ತ ಹೋಗುತ್ತದೆಂದು ಮೇಲಿಂದ ಮೇಲೆ ಅನುಭವಕ್ಕೆ ಬರುತ್ತದೆ. ಅದೇ ಮಾತು ಸಿಕಂದರನಿಗೆ ಸರಿಯಾಗಿ ಹತ್ತುತ್ತದೆ." "(ಹೊಸಗನ್ನಡ ಸಾಹಿತ್ಯಹದ ಉದಯಕಾಲ–ಪು. ೧೯೮) ಇದಲ್ಲದೆ ಹಳಕಟ್ಟಿಯವರು 'ನೆಪೋಲಿಯನ್ನನ ಚರಿತ್ರೆ, ಡ್ಯೂಕ್ ಆಫ್ ವೆಲ್ಲಿಂಗ್ಟನ್ನನ ಚರಿತ್ರೆ'ಗಳನ್ನು ಅನುವಾದಿಸಿದರು.

೧೯೦೫ರ ಫೆಬ್ರವರಿ ತಿಂಗಳಲ್ಲಿ ಹಿತವಾದಿ ಪತ್ರಿಕೆಯಲ್ಲಿ ಜೆ.ಎನ್.ತಾತಾಚಾರ್ಯ ಚರಿತ್ರೆಯು ಪ್ರಕಟವಾಗಿದೆ. ೧೯೧೯ರ ವೇಳೆಗೆ ವಿದ್ಯಾದಾಯಿನಿಯಲ್ಲಿಯೇ ಜಹಿರುದ್ದೀನ್ ಮಹಮ್ಮದ್ ಬಾಬರನ ಚರಿತ್ರೆಯನ್ನು ಪ್ರಕಟಿಸಲಾಯಿತು. ೧೯೨೨ರಲ್ಲಿ ಪ್ರಕಟಗೊಂಡ ಚರಿತ್ರೆ ಮತ್ತು ಕಥೆಗಳ ಪದ್ಯಾವಳಿ ಎಂಬ ಕೃತಿಯು ವಿಶಿಷ್ಟವಾದದ್ದು. ಕಾಸರಗೋಡು ಬೋರ್ಡು ಹೈಸ್ಕೂಲ್ ಅಸಿಸ್ಟಂಟ್ ಮಾಸ್ಟರ್ ಮ.ರಾ.ಕೊರಡ್ಕಲ್ ಶ್ರೀನಿವಾಸ್‌ರಾಯರವರಿಂದ ರಚಿತವಾಗಿದೆ.

೧೯೧೦ರಲ್ಲಿ ಪಾಂಗಾಳ ವೈಕುಂಠ ನಾಯಕರು ಬರೆದ 'ಸಾಧುವರ್ಯ ಅಮ್ಮೆಂಬಳ ಸುಬ್ರಾಯ ಪೈಗಳ ಜೀವನಚರಿತ್ರೆ' ವಿಶಿಷ್ಟವಾದದ್ದು. ಈ ಕೃತಿಯ ಉದ್ದೇಶ ಹಾಗೂ ಚರಿತ್ರೆಯನ್ನು ಓದುವುದರಿಂದಾಗುವ ಪ್ರಯೋಜನವನ್ನು ಕುರಿತು– ".....ದಂಡುಗಳ ಸಹಾಯದಿಂದ ನಾವೆಯು ಹ್ಯಾಗೆ ಮುಂದೆ ಹೋಗುತ್ತದೋ, ಆ ರೀತಿಯಲ್ಲಿಯೇ ಸಾಧು ಚರಿತ್ರ ಪಠಣವು ಭಕ್ತಿಯನ್ನು

ಪ್ರಬಲಪಡಿಸುತ್ತದೆಂಬುದನ್ನು ಎಲ್ಲರೂ ಒಪ್ಪತಕ್ಕ ವಿಚಾರ...."(ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೪೦)

೧೯೧೩ರಲ್ಲಿ ಎಸ್.ಕೆ.ರೊದ್ದರವರು ಭಾರತದ ಚರಿತ್ರಾರ್ಹ ವ್ಯಕ್ತಿಗಳ ಬಗೆಗೆ 'ಹಿಂದೂಸ್ಥಾನದ ಇತಿಹಾಸದೊಳಗಿನ ಸುಲಭವಾದ ಕಥೆಗಳು' ಎಂಬ ಕೃತಿಯನ್ನು ರಚಿಸಿದರು. ಇದು 'Easy stories from indian history' ಯನ್ನು ಆಧರಿಸಿ ರಚಿಸಿದ್ದಾಗಿದೆ. ಇದರಲ್ಲಿ ಐತಿಹಾಸಿಕ ವ್ಯಕ್ತಿಗಳಾದ ಪೃಥ್ವಿರಾಜ, ಚಾಂದ್ ಬೀಬಿ, ಬಾಬರ, ವಾರನ್ ಹೆಸ್ಟಿಂಗ್ಸ್ ಕುರಿತಂತೆ, ಜೊತೆಗೆ ಮರೆತುಹೋದ ಸಾಮ್ರಾಜ್ಯ, ವಿಜಯನಗರದ ಅಳಿಗಾಲ, ಪಾಣಿಪತ್ ೩ನೆಯ ಯುದ್ಧದಂತಹ ವಿಚಾರಗಳ ಬಗ್ಗೆ ಲೇಖನಗಳಿವೆ.

೧೯೧೭ರಲ್ಲಿ ಪ್ರಕಟವಾದ ಗೋಖಲೆಯವರ ಜೀವನ ಚರಿತೆಯ ಸಾರದಲ್ಲಿ ಚರಿತ್ರೆಯ ಉದ್ದೇಶ ಹಾಗೂ ಪ್ರಸ್ತುತ ಸಮಾಜದ ಮೇಲೆ ಉಂಟುಮಾಡುವ ಪ್ರಭಾವವನ್ನು ಹೀಗೆ ಹೇಳಿದ್ದಾರೆ "ಸ್ವದೇಶ ಪ್ರೀತಿಯನ್ನು ಗುರುತರ ಧರ್ಮವೆಂದೆಣಿಸಿ ಸ್ವದೇಶ ಹಿತಸಾಧನೆಗಾಗಿ ಸ್ವಾರ್ಥವನ್ನಿ ಬಿಟ್ಟು ಜೀವನಪಥವನ್ನು ನಡೆದ ಮಹಾತ್ಮರ ವೃತ್ತಾಂತವು ಎಲ್ಲರೂ ಆಧರಿಸತಕ್ಕುದಾಗಿರುವುದು. ಭರತಖಂಡದ ಇತಿಹಾಸವು ಇಂತಹ ಮಹಾತ್ಮರ ಮಹಿಮೆಯಿಂದ ಪರಿಪೂರ್ಣವಾಗಿರುವುದು. ಇಂತಹ ದೇಶವತ್ಸಲರ ಚರಿತೆಯನ್ನು ಕೇಳಿದೊಡನೆಯೇ ನಮ್ಮ ದೇಹದಲ್ಲಿ ರಕ್ತವು ವೇಗವಾಗಿ ಹರಿಯುವುದು. ನಮ್ಮ ಮನಸ್ಸು ಉತ್ಸಾಹದಿಂದ ಕಂಪಿಸುವುದು. ಅವರ ಕೀರ್ತಿಗೂ, ಗೌರವಕ್ಕೂ ನಾವೂ ಪಾತ್ರರಾಗಲು ಪ್ರಯತ್ನಶೀಲರಾಗುವೆವು. ಗೋಪಾಲಕೃಷ್ಣಗೋಖಲೆಯವರು ಇಂತಹ ದೇಶವತ್ಸಲರಲ್ಲೊಬ್ಬರು." ಎಂದಿದ್ದಾರೆ.(ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ–ಪು.೧೮೫) ೧೯೧೯ರಲ್ಲಿ ಎಂ. ವೆಂಕಟಕೃಷ್ಣಯ್ಯನವರು 'ಟೆಲಿಮಾಕಪ್ಪನ ಚರಿತ್ರೆ' (೧೯೧೯)ಯಲ್ಲಿ ಆತನ ಸಾಹಸ ಕಾರ್ಯಗಳ ಚರಿತ್ರೆ ಇದೆ. ಅಲ್ಲದೆ ಇವರು ವಾಷಿಂಗ್ಟನ್ನನ ಚರಿತ್ರೆಯನ್ನೂ ಬರೆದಿದ್ದಾರೆ.

'ಚರಿತ್ರೆ ಮತ್ತು ಕಥೆಗಳ ಪದ್ಯಾವಳಿ' ಎಂಬ ಕೃತಿಯನ್ನು ಕಾಸರಗೋಡು ಬೋರ್ಡು ಹೈಸ್ಕೂಲ್ ಅಸಿಸ್ಟಂಟ್ ಮಾಸ್ಟರ್ ಮ.ರಾ.ಕೊರಡ್ಕಲ್ ಶ್ರೀನಿವಾಸರಾಯರವರಿಂದ ರಚಿತವಾಗಿದ್ದು..... ಈ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆ ಭಾಗದಲ್ಲಿ ಧಾತ್ರಿ ಪನ್ನೆ, ಆರ್ಗಳದ ವೀರರಾಣಿ, ಪದ್ಮಿಸನಿ, ಭೀಮಸಿಂಹ, ಘಜನಿಯ ಮಹಮೊದ, ನೂರ್ಜಹಾನ್, ಪೃಥ್ವಿರಾಜ ಮತ್ತು ಜಯಚಂದ, ನಾದರ್ ಷಾಹ ಮುಂತಾದ ಹಿಂದುಸ್ಥಾನದ ಇತಿಹಾಸದಲ್ಲಿ ಪ್ರಸಿದ್ಧರಾದ ಪುರುಷರ ಜೀವನ ಚರಿತ್ರೆಯುಲ್ಲಿ ಒಂದೊಂದು ಸಂಗತಿಯುನ್ನು ಎತ್ತಿಕೊಂಡು ಬರೆದ ಪದ್ಯಗಳಿವೆ" (ವಿದ್ಯಾದಾಯಿನಿ–ಜೂನ್–೧೯೨೨–ಪು. ೬೫) ಎಂದಿದ್ದಾರೆ.

ಇದರ ಸಂದೇಶ ಕುರಿತಂತೆ "ಚರಿತ್ರೆಯ ಭಾಗವು – ಮಕ್ಕಳಲ್ಲಿ ಹಿಂದುಸ್ಥಾನದ ಇತಿಹಾಸ ವಿಷಯವಾಗಿ ಅಭಿರುಚಿಯು ಅಂಕುರಿಸುವಂತೆ ಮಾಡುವುದು. ಪೃಥ್ವಿರಾಜನೂ ಜಯಚಂದ್ರನೂ" ಎಂಬ ಪದ್ಯಗಳು ಹಿಂದೂಸ್ಥಾನದಲ್ಲಿ ಮುಸಲ್ಮಾನರು ರಾಜ್ಯ ಸ್ಥಾಪನೆ ಮಾಡುವುದಕ್ಕೆ ನಮ್ಮ

ಉದ್ಧಟತನವೂ, ಪರಸ್ಪರ ದ್ವೇಷವೂ ಹೇಗೆ ಕಾರಣವಾಯಿತು ಎಂಬುದನ್ನು ಹೃದಯ ಭೇದನವಾಗುವಂತೆ ಬಣ್ಣಿಸಿದೆ. ರಾಣಿ ಪದ್ಮಿನಿಯ ಸಾಹಸವೂ ಅಪ್ರತಿಮ ವೀರ ಪತ್ನಿಯಾದ ಅರ್ಗಳದ ರಾಣಿಯ ಶೌರ್ಯವೂ ಇರುವ ಪದ್ಯಗಳನ್ನು ಓದುವಾಗ ನಮ್ಮ ಕಣ್ಣೆದುರಿಗೆ ಮೂರ್ತಿವತ್ತಾಗಿ ನಿಲ್ಲುವುದು. ಹೀಗೆ ಸಾಧಕರ ಜೀವನ ಚರಿತ್ರೆಯು ಮನುಷ್ಯನ ಬೌದ್ಧಿಕ ಬೆಳವಣಿಗೆಗೆ ಪೂರಕವಾಗಿ ಇರುವಂತಹುದು. ಇದರಿಂದ ಸ್ತ್ರೀ ಪುರುಷರಂತೆ ಸಮಾನಳು ಎಂಬ ಭಾವನೆಯನ್ನು ತರುವಂತಹುದು ಈ ಪ್ರಕಾರದ ಮೂಲೋದ್ದೇಶ.

## ೨.ಆತ್ಮ ಚರಿತ್ರೆ

ಒಬ್ಬ ಸಾಧಕ ತನ್ನ ಜೀವಮಾನದಲ್ಲಿ ಮಾಡಿದ ಸಾಧನೆಯ ಬಗ್ಗೆ ಆತ್ಮ ಗೌರವದಿಂದ ಮತ್ತೊಬ್ಬರಿಗೆ ತಿಳಿಸಲು ಬರೆದುಕೊಳ್ಳು ಕಥೆಯೇ ಆತ್ಮಚರಿತ್ರೆ. ಆದರೆ ಇಂತಹ ಒಂದು ಪ್ರಕಾರವು ಕನ್ನಡದಲ್ಲಿ ಬಹಳ ತಡವಾಗಿ ಬಂದಿತು. ಸಾಧಕರಿಗೆ ಆತ್ಮಪ್ರಶಂಸೆ ಹಿತವಾದುದಲ್ಲ. 'ಆತ್ಮಕಥೆ'ಯ ಸ್ವರೂಪ ಕುರಿತು ತಿರುಮಲೆ ತಾತಾಚಾರ್ಯರವರು ಹೀಗೆ ಹೇಳಿದ್ದಾರೆ "ಆತ್ಮಕಥೆಯೆಂದರೆ ಚಿತ್ತಾಕರ್ಷಕವೇನೋ ನಿಜ. ಆದರೆ ಭಯಂಕರ ಸಾಹಿತ್ಯವದು. ಆತ್ಮಸಂರಕ್ಷಣೋಪಾಯ ಚತುರರು ಈ ಕೆಲಸಕ್ಕೆ ಕೈ ಹಾಕುವುದಿಲ್ಲ. ಹಾಗೆ ಅವರು ಮಾಡುವುದೂ ಒಳ್ಳೆಯದೆ ಆತ್ಮಕಥೆಗಳನ್ನು ಬರೆದ ಭಾರತೀಯರಲ್ಲಿ ಸರ್ ಸುರೇಂದ್ರನಾಥ ಬ್ಯಾನರ್ಜಿಯವರೊಬ್ಬರು; ಅಪೂರ್ವ ಅಪವಾದಗಳಿವು. ಸರ್ ಸುರೇದ್ರನಾಥರ ಪ್ರಯತ್ನವು ಚೂರುಪಾರಾಗಿದೆ. ನೆಹರೂಗಳ ಆತ್ಮಕಥೆ ಮಹಾ ಲಕ್ಷಣಗಳಿಂದ ಕೂಡಿದೆ..... 'ಇದೇ ಈತನ ಸ್ಥಾನ' ಎಂದು ಹೇಳುವ ಕಾಲವಿನ್ನೂ ಬಂದಿಲ್ಲ. ಆತ್ಮ ಶೋಧಕ ಆತ್ಮ ವಿಮರ್ಶಕ ಮಹಾತ್ಮಾ ಗಾಂಧಿಯ ಸ್ಥಾನವೇ ಬೇರೆ.

ಇವರು ಶ್ರೀ ನರಸಿಂಹಾಚಾರರನ್ನು ಆತ್ಮಕಥೆ ಬರೆಯುವಂತೆ ಪ್ರೇರೇಪಿಸುವಾಗ ಹಿರಿಯರು ಆತ್ಮಕಥೆಗಳನ್ನು ಏಕೆ ಬರೆಯಬೇಕು ಎಂಬುದನ್ನು ಕುರಿತು ಹೀಗೆ ಹೇಳಿದ್ದಾರೆ "....ತಮ್ಮಂತಹವರು ದೀರ್ಘಕಾಲ ದುಡಿದು, ಸಂಶೋಧನೆಗಳನ್ನು ನಡೆಸಿ, ವಸ್ತು ಸಂಗ್ರಹಮಾಡಿ ಎಲ್ಲ ಒದಗಿಸಿದ್ದೀರಿ. ತಾವಿಷ್ಟನ್ನು ಹೇಗೆ ನಿರ್ವಹಿಸಿದಿರೆಂಬುದನ್ನು ನಮಗೆ ಊಹಿಸುವುದಕ್ಕೇ ಕಷ್ಟವಾಗಿದೆಯಲ್ಲಾ ಆ ಕಾಲದಲ್ಲಿ ತಮಗೆ ಯಾವ ಯಾವ ವಿದ್ವಾಂಸರ ಪರಿಚಯವಾಯಿತು; ಎಲ್ಲೆಲ್ಲಿ ಸಂಚಾರ ಮಾಡಿದಿರಿ; ಇವೆಲ್ಲ ವಿವರಗಳೂ ನಮಗೆ ಗೊತ್ತಾಗಬೇಡವೇ? ನೀವಲ್ಲದೆ ನಮಗೆ ಮತ್ತಿನ್ನಾರು ಹೇಳಬಲ್ಲರು? ಒಂದು ಜನಪದದ ಮಧ್ಯೆ ತಮ್ಮಂತಹವರು ಜನ್ಮಧಾರಣ ಮಾಡುವುದೊಮ್ಮೆ ತಮ್ಮ ಮೇಧಾಶಕ್ತಿಯ, ಪ್ರತಿಭೆಯ, ಕರ್ಮಕೌಶಲದ, ಹಾಸ್ಯ ಮನೋಧರ್ಮದ, ಕನ್ನಡ ಭಾಷಾ ಸಾಹಿತ್ಯ ಪ್ರೇಮದ ಪೂರ್ಣಪರಿಚಯ ನಮ್ಮವರಿಗೆಲ್ಲ ಆಗಬೇಕು. ಹಾಗೆ ಆಗಬೇಕಾದರೆ ತಾವು ತಮ್ಮ ಆತ್ಮಕಥೆಯನ್ನು ಬರೆಯಬೇಕು."(ಕನ್ನಡನುಡಿ ಪತ್ರಿಕೆ)ಆದರೆ ತಾತಾಚಾರ್ಯರು ಅನೇಕರನ್ನು ಆತ್ಮಕಥೆ ಬರೆಯಲು ಪ್ರೇರೆಪಿಸಿದರೂ ಅದನ್ನು ನಿರಾಕರಿಸಿದವರೇ ಹೆಚ್ಚು.

ಮಹಮ್ಮದ್ ಶುಕ್ರಿಯ ಎಂಬುವನು ತನ್ನದೇ ಹೆಸರಿನಲ್ಲಿ ಆತ್ಮ ಚರಿತ್ರೆಯನ್ನು ರಚಿಸಿಕೊಂಡಿದ್ದಾನೆ. ಇದು ಲಭ್ಯವಾಗಿರುವ ಆತ್ಮಚರಿತೆಗಳಲ್ಲಿ ಮೊದಲನೆಯದೆನ್ನಬಹುದು. ಈ ಕೃತಿಯನ್ನು ಕುರಿತು

"ಮಹಮ್ಮದ ಶುಕ್ರಿ ಯಾನೆ ಯೋಹಾನ ಅವೆತರಣಿಯಾನನ ಜೀವಚರಿತ್ರೆ ಇದು. ಬಾಲ್ಯದಲ್ಲಿ ಯೊರೋಪ್ಲಿ ಎಂಬ ಮತಭೇದ ಹುಟ್ಟಿ ಕುರುಬನಿಲ್ಲದ ಕುರಿಯಂತಿರಲು, ಹೋರಾಟದಲ್ಲಿ ಜ್ಞಾನೋದಯವಾದುದು; ಮುಲ್ಲನೋ? ಕ್ರೈಸ್ತನೋ? ಎಂಬೀ ಸ್ಥಿರತ್ವವು ವಿಶ್ವಾಸದ ಪರೀಕ್ಷೆಯಲ್ಲಿ ದೃಢವಾಗಿ ಯೇಸುವಿನ ಸೇವೆಗೆ ಸಿದ್ಧನಾದದ್ದು; ಸೇವೆಯ ಪ್ರಾರಂಭದಲ್ಲಿ ಕಷ್ಟಾಗರಕ್ಕೆ ಹೋಗಿ, ಅಲ್ಲಿ ಮಿಶನ್ ಕೆಲಸಕ್ಕೆ ತೊಡಗಿದ್ದು; ಅಭ್ಯಂತರಗಳು ಅಲ್ಲಿದ್ದರೂ ಮೊದಲನೇ ಫಲ ಕಂಡದ್ದು; ಬೇರೆ ಬೇರೆ ಜೊತೆಗಾರರ ಸಂಸರ್ಗದಲ್ಲಿರಯವಾಗ್ಯೆ ಅಸ್ವಸ್ಥದಲ್ಲಿ ಬಿದ್ದ ಕಾರಣ ಸ್ವದೇಶಕ್ಕೆ ತೆರಳಿ, ಶುಮ್ಲದಲ್ಲಿ ಅಮೂಲ್ಯ ಸುವಾರ್ತೆ ಪ್ರಸರಿಸುವಿಕೆಯಾದದ್ದು ಈ ಪುಸ್ತಕದಲ್ಲಿರುತ್ತದೆ."(ವಿದ್ಯಾದಾಯಿನಿ) ಇದರಲ್ಲಿ ತಾನು ಮತಾಂತರಕ್ಕೆ ತೊಡಗಿದರ ಕಾರಣ ಮತ್ತು ತನ್ನ ಜೀವನವನ್ನು ಕ್ರೈಸ್ತಧರ್ಮ ಸೇವೆಗಾಗಿ ತೊಡಗಿಸಿಕೊಂಡ ವ್ಯಕ್ತಿಯ ಕಥೆ ಇದಾಗಿದೆ.

### ೩. ದೇಶದ ಚರಿತ್ರೆ

ಒಂದು ದೇಶದ ಚರಿತ್ರೆ ರಚನೆ ಅಷ್ಟೇ ಮುಖ್ಯವಾದುದು. ಇದರ ಪ್ರಯೋಜನ ಕುರಿತು "ನಾಡಿನ ಇತಿಹಾಸವೇ ಜನಜೀವನದ ಜೀವಾಳ. ಕಾಲನ ಹೊಡೆತದಿಂದ ಕೆಳಕ್ಕೆ ಕುಕ್ಕರಿಸಿದ ಯಾವುದೊಂದು ನಾಡು ಮರಳಿ ಮೇಲಕ್ಕೆ ಮೊಗವೆತ್ತಬೇಕಾದರೆ, ಹುರುಳಿನಿಂದ ತುಂಬಿರುವ ಆ ನಾಡಿನ ಇತಿಹಾಸವು ನಾಡಿಗರೆಲ್ಲರಿಗೂ ಗೊತ್ತಿರಬೇಕು.ತಮ್ಮ ಮೊದಲಿಗರ ಕೀರ್ತಿ–ಸ್ಫೂರ್ತಿಗಳನ್ನು ಕೊಂಡಾಡಿದರೆ, ಕೇಳಿ ಅಭಿಮಾನ ಪಡದವರಾರು? ಹಿರಿಯರ ಧೈರ್ಯ ಶೌರ್ಯಗಳನ್ನು ಕಂಡು, ಹುರುಪುಗೊಳದವರಾರು? ಈ ಭೂತಕಾಲದ ಚರಿತ್ರೆಯೇ ಭವಿಷ್ಯತ್ಕಾಲದ ಸವಿಯಾದ ಫಲಗಳ ಆಶೆಯನ್ನು ತೋರಿಸಿ, ವರ್ತಮಾನದಲ್ಲಿ ಜನರನ್ನು ಕರ್ತವ್ಯ ಜಾಗರೂಕರನ್ನಾಗಿ ಮಾಡುವುದು. "ನಮ್ಮ ಕೈಯಿಂದೇನಾಗುವುದು?" ಎಂಬ ಹೇಡಿತನದ ಹುಸಿ ವೇದಾಂತವನ್ನು ದೂರಕ್ಕೆ ತೊಲಗಿಸುವುದು. ಮರವೆಯ ತೆರೆಯನ್ನು ಹರಿದು, ತಿಳಿಗಣ್ಣಿಗೆ ಹೊಸನೋಟವನ್ನು ಕೊಡುವುದು. "ನಾಡಿಗರು ನಾವೆಲ್ಲರೊಂದೇ ಎಲ್ಲರೊಂದೇ" ಎಂಬ ಬೀಜಮಂತ್ರವನ್ನು ಉಪದೇಶಿಸುವುದು. "ನನ್ನ ನಾಡು ನನ್ನ ನುಡಿ" ಎಂಬ ಸದಭಿಮಾನವನ್ನು ಉಂಟುಮಾಡಿ, "ತನ್ನ ನಾಡಿನ ಹಿತಕ್ಕಾಗಿ ತನು–ಮನ–ಧನಗಳನ್ನು ಮುಡಿಪಾಗಿಡುವುದು ಕರ್ತವ್ಯ" ಎಂಬ ಅರಿವನ್ನು ಹುಟ್ಟಿಸಲು, ಆ ನಾಡಿನ ಉಜ್ವಲವಾದ ಚರಿತ್ರೆಯೇ ಮೇಲಾದ ಸಾಧನ. ಅಂತಹ ಚರಿತ್ರೆಯು ಹಸುಗೂಸಿನ ಜೋಗುಳವಾಗಿ, ಹುಡುಗರ ಕಿರಿಗತೆಗಳಾಗಿ, ಮಕ್ಕಳ ಪಾಠಪುಸ್ತಕಗಳಾಗಿ, ತರುಣರ ವಾಚನಗ್ರಂಥವಾಗಿ, ಮುದುಕರ ಮನೋರಂಜಕ ಮಾತಾಗಿ, ಹರಿದಾಸರ ಕೀರ್ತನವಾಗಿ, ಗಾಯಕರ ಗಾಯನವಾಗಿ, ನಟರ ನಾಟಕವಾಗಿ, ಹೊಗಳುಭಟರ ಪವಾಡವಾಗಿ, ಹಳ್ಳಿಗರ ಹಂತಿಯ ಹಾಡು–ಲಾವಣಿಗಳಾಗಿ, ಹೆಣ್ಣುಮಕ್ಕಳ ಬೀಸುವಕಲ್ಲಿನ ಪದವಾಗಿ, ಇನ್ನೂ ಹಲವು ಬಗೆಯಾಗಿ, ನಾಡಿಗರ ಕಿವಿಗೆ ಆಗಾಗ ಕೇಳಿಸುತ್ತಿರಲೇಬೇಕು. ಮೊದಲಿಗರ ಮೇಲ್ಮೆಯ ಪವಾಡಗಳನ್ನು ಆ ನಾಡೆಲ್ಲವೂ ಏಕಕಂಠದಿಂದ ಹಾಡುತ್ತಿರಬೇಕು. ಹೀಗಿರುವುದೇ ಆ ನಾಡಿನ ಉನ್ನತಿಯ ಚಿಹ್ನವು."(ಅರುಣೋದಯ–೧೯೨೭–ಮುನ್ನುಡಿ) ಆನಂದಕಂದ ಫೀನಿಕ್ಸ್ ಪ್ರಿಂಟಿಂಗ್ ಹೌಸ್, ಬೆಂಗಳೂರು.

ಕನ್ನಡದಲ್ಲಿ ದೇಶ, ಸ್ಥಳಗಳ ಬಗೆಗೆ ಮೊದಲು ಬಂದ ಚರಿತ್ರೆ ಸೂರಿ ವೆಂಕಟರಮಣ ಶಾಸ್ತ್ರಿಯವರು ೧೮೮೫ರಲ್ಲಿ ಬರೆದ 'ದಕ್ಷಿಣ ಯಾತ್ರಾ ಚರಿತ್ರೆ". ಇದೊಂದು ಪ್ರವಾಸ ಕಥನವೂ ಹೌದು. ಇದರಲ್ಲಿ ಉಡುಪಿ, ಸುಬ್ರಮಣ್ಯದಂತಹ ಕ್ಷೇತ್ರದ ವರ್ಣನೆಯಿದೆ. ೧೯೦೦ರ ವಿದ್ಯಾದಾಯಿನಿ ಪತ್ರಿಕೆಯಲ್ಲಿ 'ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಚರಿತ್ರೆಯನ್ನು ಮ.ರಾ.ರಾ.ಯಮ್.ಬಾಬು ಎಂಬುವರು ರಚಿಸಿದ್ದಾರೆ. ಇದರಲ್ಲಿ ವಿಜಯ ನಗರದ ಸ್ಥಾಪನೆ ಕುರಿತಂತೆ ಇರುವ ಅನೇಕ ಕಥೆಗಳ ಮಾಹಿತಿಯನ್ನು ನೀಡಿದ್ದಾರೆ. ಅದರ ಒಂದು ಕಥೆ ಹಾಗೂ ಶೈಲಿ ಹೀಗಿದೆ "ಮೊಹಮ್ಮದ್ ಬಿನ್ ತೊಘಲಕನು ಆನೆಗುಂದಿಯನ್ನು ವಶಪಡಿಸಿಕೊಂಡು ದೇವರಾಯನಿಗೆ ವಹಿಸಿಕೊಟ್ಟನು. ಆ ಅರಸನು ಒಂದು ದಿನ ಮೃಗ ಬೇಟೆಯಾಡಲಿಕ್ಕೆ ಕಾಡಿಗೆ ಹೋಗಲು 'ಅಲ್ಲಿ ಒಂದು ಗುಡ್ಡೆಯ ಬಳಿಯಲ್ಲಿ ಒಂದು ಮೊಲವು ಅವನ ಬೇಟೆನಾಯಿಗಳಿಗೆ ಹೆದರದೆ ಕಚ್ಚಿತು. ಈ ವಿಚಿತ್ರವನ್ನು ನೋಡಿ ಆಶ್ಚರ್ಯಪಟ್ಟು ಪುಸ್ತಕದ ಪ್ರಾರಂಭದಲ್ಲಿ ಇಂಗ್ಲಿಷ್‌ನಲ್ಲಿ ಬರುವ ಹಲವು ಪದಗಳ ತುಂಬಾ ಉಪಯುಕ್ತವಾದ ಅರ್ಥವನ್ನು ಕೊಟ್ಟಿದ್ದಾರೆ. ಇದರಿಂದ ಲೇಖಕರ ಪರಿಶ್ರಮವನ್ನು ಕಾಣಬಹುದಾಗಿದೆ:

"ನೋಬಲ್ಲರು – ಇವರು ದೊಡ್ಡ ಜನರು. ಇವರು ವಾಡಿಕೆಯಾಗಿ ದೊಡ್ಡ ದೊಡ್ಡ ಜಮೀನುದಾರರಿರುತ್ತಾರೆ. ಇವರಲ್ಲಿ ಡ್ಯೂಕ್, ಮಾರ್ಕ್ವಿಸ್, ಅರ್ಲ್, ವಾಯ್‌ಕೌಂಟ್, ಬ್ಯಾರನ್ ಎಂಬ ದರ್ಜೆಗಳಿರುತ್ತವೆ.

ಡ್ಯೂಕ್ – ಈ ದರ್ಜೆಯವನು ಅರಸನ ಹಿರಿಯ ಮಗನನ್ನು ಬಿಟ್ಟು ಉಳಿದ ನೋಬಲ್ಲರೊಳಗೆ ಮೊದಲನೆಯವನು. ಈ ದರ್ಜೆಯವರು ವಾಡಿಕೆಯಾಗಿ ಅರಸುಮನೆತನದವರಿರುತ್ತಾರೆ. ಡ್ಯೂಕ್ ಎಂಬ ಪದವಿಯು ಯೂರೋಪ್ ಖಂಡದೊಳಗಿನ ಕೆಲವು ಸೀಮೆಗಳ ಅರಸರಿಗೆ ಇರುತ್ತದೆ.

ನಾಯಿಟ್ (ಸರದಾರ) – ಇದು ಒಂದು ಪದವಿಯು. ಇದು ಇಂಗ್ಲೆಂಡಿನಲ್ಲಿ ಜಹಗೀರ ದಾರಿಯ ಕ್ರಮವು ನಡೆಯುತ್ತಿದ್ದಾಗ್ಗೆ, ಯುದ್ದವನ್ನು ಕೈಕೊಳ್ಳುವ ಬಂಟನಿಗೆ ಕೊಡಲ್ಪಡುತ್ತಿತ್ತು. ಆದರೆ ಈಗ ಅದು ಬಹುಮಾನಾರ್ಥವಾಗಿ ಕೊಡಲ್ಪಡುತ್ತದೆ. (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ –ಪು, ೧೩೮)

ಇದಲ್ಲದೆ ಹಾಡಿನ ರೂಪದ ಜೀವನ ಚರಿತ್ರೆಗಳು ರಚನೆಯಾಗಿವೆ. ೧೯೨೪ರ ಸ್ವಧರ್ಮದಲ್ಲಿ ವೆ.ಪ.ಹೆಗ್ಗಡೆ ಕಡೇಕೋಡಿಯವರು 'ವಿದ್ಯಾರಣ್ಯರ ಚರಿತ್ರೆಯನ್ನು' ಬರೆದಿದ್ದಾರೆ. ಅದರ ಶೈಲಿ ಹೀಗಿದೆ. –

ಭರದಿಂ ಸ್ವರಾಜ್ಯವಂ ಸ್ಥಾಪಿಸಿ ಸ್ವಧರ್ಮಮಂ
ಪೊತಿದಪೇಂ ಭುವನೇಶ್ವರಿಯ ಕುರಿತು ತಪನಾ
ಚರಿಸಿ ಬಯಸಿದ ತಾಣದೊಳ್ ಸುವರ್ಣದ ಮಳೆಯು ಬೀಳ್ವೊಲೆಸಗುತ್ತೆನ್ನತೆ
ಪರಮಂ ಪಡೆಯಲೆಂದು ಸತತ ಭುವನೇಶ್ವರಿಯ॥
ಕುರಿತು ಗ್ರತ ಪವನಾಚರಿಸುತಿರೆ ಬಹ್ರದಿನಂ

ಪರಿಯಲಾ ಮೇಲೆ ದೇವಿಯು ದಯವೆಮ್ಮೆದೋರಿ ನಿನ್ನಿಷ್ಟಮಿಭವದೊಳು॥೪॥(೧೪ ಪದ್ಯಗಳು ಇವೆ.) – (ಸ್ವಧರ್ಮ ೧೯೨೪ (೧೮೪೬)

ಬಂಡೋ ರಾಮಚಂದ್ರ ಕೌಶಲಗಿಯವರ ವೇನರಾಜನ ಚರಿತ್ರೆಯು ಹಾಡಿನ ರೂಪದಲ್ಲಿದೆ. ಎಂ. ಎಸ್. ಪುಟ್ಟಣ್ಣನವರು ಜೀವನ ಚರಿತ್ರೆಯನ್ನು ಕಾದಂಬರಿಯ ಮಾದರಿಗೆ ಅನ್ವಯಿಸಿ ಬರೆದರು. ಅವರು 'ಸುಮತಿ ಮದನ ಕುಮಾರ ಚರಿತ್ರೆ'ಯು ಥಾಮಸ್ ಡೇಯ '' ಎಂಬ ಕೃತಿಯ ಮಾದರಿಯಲ್ಲಿ ರಚಿಸಿದ್ದು, ಪಾಳೇಗಾರರ ಚರಿತ್ರೆಯನ್ನು ಇದರಲ್ಲಿ ನೀಡಿದ್ದಾರೆ. ಆದರೆ ಇದು ಪೂರ್ಣ ಚರಿತ್ರೆಯ ಮಾದರಿಯಲ್ಲಿ ಗಳಗನಾಥರ 'ಮಾಧವ ಕರುಣಾ ವಿಲಾಸ'ವು ಒಂದು ಮಾದರಿಯಲ್ಲಿ ಜೀವನ ಚರಿತ್ರೆಯೆ ಆಗಿದೆ. ಅವರು ಇದನು ಕಾದಂಬರಿ ಎಂದು ಹೇಳಿದ್ದರೂ ವಿಜಯನಗರ ಸಾಮ್ರಾಜ್ಯದ ಸಂಸ್ಥಾಪನೆಗೆ ಕಾರಣರಾದ ಮಾಧವಚಾರ್ಯರ ಜೀವನ ಕುರಿತದ್ದಾಗಿದೆ. ಹೆಚ್ಚು ಕಲ್ಪನೆಯ ಅಂಶಗಳೇ ಅದರಲ್ಲಿದೆ.

'ಕರ್ನಾಟಕ ಸಾಮ್ರಾಜ್ಯ' ಕೃತಿಯು ಚರಿತ್ರೆಯ ಪುಸ್ತಕವಾಗಿದೆ. ಇದನ್ನು ೧೮೯೬ ರಚಿಸಲಾಯಿತು. ಈ ಹೊತ್ತಗೆಗಳ ರಚನೆಗಾಗಿ ಲೇಖಕರು ತುಂಬಾ ಪರಿಶ್ರಮಿಸಿದರು. ಮೊದಲನೆಯ ಸಂಪುಟದಲ್ಲಿ ಆಳುಪ– ಕದಂಬರವರೆಗೂ, ಎರಡನೆಯ ಸಂಪುಟದಲ್ಲಿ ಬಾದಾಮಿಯ ಚಾಳುಕ್ಯರವರೆಗೂ ಕರ್ನಾಟಕದ ಇತಿಹಾಸವನ್ನು ರೂಪಿಸಲಾಗಿದೆ. ಮೂರನೆಯ ಸಂಪುಟದಲ್ಲಿ ವಿಜಯನಗರದ ಕಾಲದವರೆಗೆ ಈ ಇತಿಹಾಸವನ್ನು ಮುಂದುವರಿಸಿಕೊಂಡು ಹೋಗಿದ್ದು, ಅದು ಪ್ರಕಟವಾಗಿರದೆ ಹಸ್ತ ಪ್ರತಿಯ ರೂಪದಲ್ಲಿಯೆ ಇದೆ. ಈ ಸಂಪುಟಗಳನ್ನು ರಚಿಸುವಲ್ಲಿ ತಾವು ಪಟ್ಟ ಪರಿಶ್ರಮದ

"ಈ ಇತಿಹಾಸವನ್ನು ಬರೆಯಲಿಕ್ಕೆ ನಾನು ಪಟ್ಟಷ್ಟು ಶ್ರಮವನ್ನು ಬೇರೆ ಯಾವ ಪುಸ್ತಕವನ್ನು ಬರೆಯುವಾಗ ಪಡಲಿಲ್ಲೆಂದು ನಿಸ್ಸಂದೇಹವಾಗಿ ಹೇಳುತ್ತೇನೆ. ಇತಿಹಾಸ ಬರೆಯುವುದೇ ಕಷ್ಟದ ಕೆಲಸವು. ಏಕೆಂದರೆ ನಡೆದ ಸಂಗತಿಯು ಒಂದೇ ಆದರೂ ಅದನ್ನು ನೋಡುವವರು ತಂತಮ್ಮ ಮನಸ್ಸಿನ ವರ್ಣನೆಯಿಂದ ತೀರ ಭಿನ್ನವಾಗಬಹುದು."

'ಛತ್ರಪತಿ ಶಿವಾಜಿ ಮಹಾರಾಜ ಚರಿತ್ರೆ'ಯನ್ನು ೧೯೨೩ ಕನ್ನಡದ ಕಟ್ಟಾಭಿಮಾನಿಗಳಾಗಿದ್ದ ದೇಶಪಾಂಡೆಯವರು ರಚಿಸಿದರು. ಮಹಾರಾಷ್ಟ್ರ ಛತ್ರಪತಿ ಶಿವಾಜಿಯ ಬಗೆಗೆ ೪೩೨ ಪುಟದ ಈ ಪುಸ್ತಕವನ್ನು ಬರೆಯಬಹುದೇ ಎಂದು ಅನೇಕರಿಗೆ ಸಂದೇಹ ಉಂಟಾಗುತ್ತದೆ. ಕನ್ನಡದ ವೀರಾಗ್ರಣಿ ಮಹಾರಾಷ್ಟ್ರದ ಚರಿತ್ರೆಯನ್ನು ಬರೆಯುವದೆಂದರೆ?– ಇದನ್ನು ಊಹಿಸಿಯೇ ಲೇಖಕರೂ ಕೂಡ ತಮ್ಮ ಪ್ರಸ್ತಾವನೆಯಲ್ಲಿ ಹೀಗೆ ಬರೆದಿದ್ದಾರೆ:

ಶಿವಾಜಿಯು ಮರಾಠಿಗನಾದ್ದರಿಂದ ಅವನ ಚರಿತ್ರೆಯಿಂದ ಕನ್ನಡಿಗರಿಗೆ ಹೆಚ್ಚು ಪ್ರಯೋಜನವಿಲ್ಲೆಂದು ಕೆಲವರು ಆಕ್ಷೇಪಿಸಬಹುದು. ಈ ಆಕ್ಷೇಪಣೆಯಲ್ಲಿ ತಥ್ಯಾಂಶವು ಅತ್ಯಲ್ಪ ಪ್ರಮಾಣದಲ್ಲಿರುತ್ತದೆಂದು ಎಲ್ಲರೂ ಒಡಂಬಡುವರು. ಮರಾಠಿ ಮಹನೀಯರು, ಕನ್ನಡ ಮಹಾಪುರುಷರಷ್ಟು ಪೂಜ್ಯರೂ ಪ್ರೀತ್ಯಾಸ್ಪದರೂ ಆಗದಿದ್ದರೂ, ಕನ್ನಡಿಗರ ತರುವಾಯ ಅವರು

ನಮಗೆ ಬೇಕಾದವರೇ ಸರಿ. ತಾಯಿಯ ತರುವಾಯ ಸೋದರಮಾವನೇ ಕಕ್ಕುಲತೆಯುಳ್ಳವನಲ್ಲವೇ? ೧೮೮೧ರಲ್ಲಿ ಎಂ.ಎಸ್.ಪುಟ್ಟಣ್ಣರವರಿಂದ ರಚಿತವಾದ ಜಯಸಿಂಹ ರಾಜ ಚರಿತ್ರೆಯು ಷೇಕ್ಸ್‌ಪಿಯರನ 'ಸಿಂಬೆಲೈನ್'ಅನ್ನು ಆಧರಿಸಿ ರಚಿಸಿದ್ದಾರೆ. ಈ ಕೃತಿಯ ಭಾಷೆ ಕುರಿತಂತೆ "ಜನಗಳು ಸಾಧಾರಣವಾಗಿ ಅರ್ಥಮಾಡಿಕೊಳ್ಳುವಂತೆ ಕನ್ನಡದಲ್ಲಿ ರೂಢವಾಗಿರುವ ಸಂಸ್ಕೃತ ಪದಗಳು ಪ್ರಯೋಗಿಸಲ್ಪಟ್ಟಿವೆ." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೩೨.) ಹೊಸಗನ್ನಡದಲ್ಲಿ ಈ ಪ್ರಕಾರವು ಯಶಸ್ವಿಯಾದದ್ದು ಈ ಅಂಶದಿಂದಲೇ. ಗದ್ಯದ ಜೊತೆಗೆ ಸರಳವಾದ ಭಾಷೆಯನ್ನು ಅನುವಾದ ಮತ್ತು ಸ್ವತಂತ್ರ ಕೃತಿಗಳೆರಡರಲ್ಲೂ ಕಾಣಬಹುದು. ಈ ಪ್ರಕಾರದ ಉದ್ದೇಶವು ಸಾಮಾನ್ಯ ಜನರಲ್ಲಿ ಪ್ರಜ್ಞೆಯನ್ನು ಉಂಟುಮಾಡುವುದಾದ್ದರಿಂದ ಅನುವಾದಕರು ಹಾಗೂ ಸ್ವತಂತ್ರ ಬರಹಗಾರಗೂ ಭಾಷೆಯ ಬಗ್ಗೆ ಹೆಚ್ಚು ಗಮನ ಹರಿಸಿದಂತೆ ಕಾಣುತ್ತದೆ.

೧೯೧೯ರಲ್ಲಿ ಎ.ವೆಂಕಟರಾಯರು ಅನುವಾದಿಸಿದ "ಚಂದ್ರಗುಪ್ತ ಚಕ್ರವರ್ತಿ"ಯಲ್ಲಿ ಮಗಧರಾಜ್ಯದ ವರ್ತನೆ, ಆತನು ರಾಜ್ಯಪಾಲನೆ ಮಾಡಿದ ವಿಚಾರಗಳಿವೆ. ಇದರ ಭಾಷೆ ಪೂರ್ಣವಾಗಿ ಹೊಸಗನ್ನಡದಲ್ಲಿದೆ

"ಸೆಲ್ಯೂಕಸ್ : ಅಲೆಗ್ಸಾಂಡರ್‌ನಿಂದ ಜಯಿಸಲ್ಪಟ್ಟು ಸ್ವಲ್ಪ ಕಾಲ ಆತನ ಪಾಲನೆಗೊಳಗಾಗಿದ್ದು, ಆತನ ಮರಣಾನಂತರದಲ್ಲಿ ದಿಕ್ಕುಪಾಲಾಗಿ, ಚದುರಿ ಹೋಗಿದ್ದ ರಾಜ್ಯ ಶಕಲಗಳನ್ನು ಚಂದ್ರಗುಪ್ತನು ಭರತ ಖಂಡದಲ್ಲಿ ಏಕಚ್ಛತ್ರಾಧಿಪತ್ಯದ ಕೆಳಗೆ ತರುತ್ತಿದ್ದ ಕಾಲದಲ್ಲಿಯೂ, ಏಕಚ್ಛತ್ರಾಧಿಪತ್ಯಕ್ಕೆ ತಾನೂ ಸೇರಲು ಪ್ರಯತ್ನಿಸಿ, ಜಯವನ್ನು ಹೊಂದಿ, ಚಂದ್ರಗುಪ್ತನನ್ನು ಇದಿರಿಸಿ, ನಿಲ್ಲಲಾರದೆ, ಆತನಿಗೆ ಮಗಳನ್ನು ಕೊಟ್ಟು ಸಖ್ಯವನ್ನು ಮಾಡಿಕೊಂಡ ಮಹಾವೀರನು ಈ ಸೆಲ್ಯೂಕಸನು....." (ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ–ಪು. ೧೪೨)

ಇದರಲ್ಲಿ ಸರಳವಾದ ಭಾಷೆಯ ಜೊತೆಗೆ ವಾಕ್ಯ ರಚನೆಯೂ ಸರಳವಾಗಿದೆ. ಒಟ್ಟಾರೆ ಈ ಪ್ರಕಾರವನ್ನು ಗಮನಿಸಿದಾಗ ಚರಿತ್ರೆಯು ತನ್ನ ಸರಳವಾದ ಭಾಷೆ ಹಾಗೂ ಶೈಲಿಯಿಂದ ಜನರಿಗೆ ಮೆಚ್ಚಿನ ಸಾಹಿತ್ಯ ಪ್ರಕಾರವಾಯಿತು.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕನ್ನಡದಲ್ಲಿ ಚರಿತ್ರೆಯೆಂಬ ಪ್ರಕಾರವು ಇತರೆ ಹೊಸಗನ್ನಡ ಸಾಹಿತ್ಯ ಪ್ರಕಾರಗಳ ನಿರ್ಮಾಣ ಸಂದರ್ಭದಲ್ಲಿಯೇ ಪ್ರವೇಶವನ್ನು ಪಡೆದಿದೆ. ಮೊದಲು ಪಾಶ್ಚಾತ್ಯ ಚರಿತ್ರೆಗಳ ಅನುವಾದವಾಗುವುದರ ಮೂಲಕ ವಿಶಿಷ್ಟವಾದ ಪ್ರಕಾರದ ಜೊತೆಗೆ ಹೊಸ ಚಿಂತನೆಯೊಂದನ್ನು ರೂಪಿಸಿತು ಎಂಬುದು ಸ್ಪಷ್ಟ. ಗದ್ಯ ಪ್ರಕಾರಗಳಲ್ಲಿ ಒಂದಾದ ಈ ಪ್ರಕಾರವು ಸಾಧಕರ ಬದುಕಿನ ಅನಾವರಣಕ್ಕೆ ಉತ್ತಮ ಸಾಧನವೆಂದು ಭಾವಿಸಿ ಅನುವಾದದ ಜೊತೆಗೆ ಸ್ಥಳೀಯ ಸಾಧಕರ ಜೀವನ ಚರಿತ್ರೆಗಳನ್ನು ರಚಿಸಲು ಮುಂದಾದುದು ಹೊಸ ಚಿಂತನೆಯೇ ಆಗಿದೆ.

* * * * *

# ಸಮಾರೋಪ–ಅನುವಾದಗಳ ಮೂಲಕ ಸೃಜನಶೀಲ ಚಿಂತನೆ

ಹೊಸಗನ್ನಡ ಸಾಹಿತ್ಯಚಿಂತನೆ ರೂಪುಗೊಳ್ಳುವಲ್ಲಿ ಅನುವಾದ ಪ್ರಕ್ರಿಯೆಯು ಮಹತ್ವದ ಪಾತ್ರವನ್ನು ವಹಿಸಿದೆ. ೧೯ನೇ ಶತಮಾನದಲ್ಲಿ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಬದಲಾವಣೆಗಳು ನಡೆದವು. ಪರಂಪರಾಗತವಾದ ಸಾಹಿತ್ಯದ ಆಲೋಚನೆಗಳು ಬದಲಾದವು. ಸಾಹಿತ್ಯದ ವಸ್ತು, ಪ್ರಕಾರ, ಭಾಷೆ, ಶೈಲಿ, ಛಂದಸ್ಸು ಮುಂತಾದ ವಿಚಾರಗಳಲ್ಲಿ ಹೊಸತನವು ಕಾಣಿಸಿಕೊಂಡಿತು. ಇಂತಹ ಹೊಸತನವು ಏಕ ಕಾಲದಲ್ಲಿ ಸಾಹಿತ್ಯದಲ್ಲಿ ಆವಿರ್ಭವಿಸಲು ಕಾರಣವಾದ ಅನೇಕ ಅಂಶಗಳಲ್ಲಿ ಪಾಶ್ಚಾತ್ಯ ಸಾಹಿತ್ಯಗಳ ಅನುವಾದ ಪ್ರಕ್ರಿಯೆ ಮಹತ್ವಪೂರ್ಣವಾದುದು.

ಈ ಕಾಲದಲ್ಲಿ ಇಂತಹ ಹೊಸತನವು ಸ್ವೀಕಾರಗೊಳ್ಳುವಲ್ಲಿ ಅನೇಕ ಗೊಂದಲಗಳು ಕಾಣಿಸಿಕೊಂಡವು. ಪರಂಪರಾಗತವಾಗಿ ಇದ್ದಂತಹ ಸಾಹಿತ್ಯದ ನೆಲೆಯನ್ನು ಬಿಟ್ಟು ಹೊಸ ಮಾದರಿಯಲ್ಲಿ ಕಾವ್ಯ ರಚನೆಗೆ ತೊಡಗಿಕೊಳ್ಳಲು ಅನೇಕರು ಸಿದ್ಧರಾಗಿರಲಿಲ್ಲ. ಅಲ್ಲದೆ ಹೊಸತನಕ್ಕೆ ಒಗ್ಗಿಕೊಳ್ಳಲು ಪ್ರಯತ್ನಿಸುತ್ತಿದ್ದವರು ಅನೇಕ ಟೀಕೆಗಳಿಗೆ ಗುರಿಯಾದರು. ಇಂತಹ ಅನೇಕ ಗೊಂದಲಗಳ ನಡುವೆ ಹೊಸಗನ್ನಡ ಸಾಹಿತ್ಯ ರೂಪುಗೊಳ್ಳಲು ಅನುವಾದ ಕೃತಿಗಳು ಪ್ರೇರಣೆಯಾದವು. ಇದಲ್ಲದೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಹೊಸ ಕ್ರಾಂತಿಯನ್ನು ಹುಟ್ಟಿ ಹಾಕಲು ಬೇಕಾದ ಜ್ಞಾನ ಇಂತಹ ಅನುವಾದಿತ ಕೃತಿಗಳಿಂದ ಲಭ್ಯವಾಯಿತು.

ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವವು ನೇರವಾಗಿ ಇಲ್ಲವೆ ಭಾರತೀಯ ಅನ್ಯ ಭಾಷೆಗಳ ಮೂಲಕ ನಡೆಯಿತು. ಬಂಗಾಳಿ ಮತ್ತು ಮರಾಠಿ ಭಾಷೆಗಳ ಸಾಹಿತ್ಯ ಕೃತಿಗಳು ಆರಂಭದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನುವಾದಗೊಂಡವು. ಇದು ಕೇವಲ ಸಾಹಿತ್ಯ ಕೃತಿಗಳ ಅನುವಾದವಾಗಿರದೆ ಒಟ್ಟಾರೆ ಅಂದಿನ ಸಾಹಿತ್ಯ ಚಿಂತನೆಗಳ ಅನುವಾದವೇ ಆಗಿದೆ. ಹೊಸ ಮಾದರಿಯ ಸಾಹಿತ್ಯ ಪ್ರಕಾರಗಳು ಹೊಸ ಚಿಂತನೆಗಳನ್ನು ರೂಪಿಸಿದವು. ಒಂದು ನಿರ್ದಿಷ್ಟ ಧೋರಣೆ ಅಡಿಯಲ್ಲಿ ನಿರ್ಮಾಣವಾಗುತ್ತಿದ್ದ ಕನ್ನಡ ಸಾಹಿತ್ಯ ಹೊಸ ಸ್ವರೂಪವನ್ನು ಮೈಗೂಡಿಸಿಕೊಳ್ಳಲು ಅನುವಾದ ಕೃತಿಗಳು ಮಾಧ್ಯಮವಾದವು.

ಭಾರತೀಯ ಪರಿಸರದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದದ್ದು ಬಂಗಾಳ. ಬ್ರಿಟಿಷ್‌ರ ಕಾಲೋನಿಗಳು ನಿರ್ಮಾಣವಾಗಿ ಅಧಿಕಾರ ಚುಕ್ಕಾಣಿ ಹಿಡಿದ ಬ್ರಿಟಿಷರು ತಮ್ಮ ಅನುಕೂಲಕ್ಕಾಗಿ ಇಂಗ್ಲಿಷ್ ಶಿಕ್ಷಣ, ಇಂಗ್ಲಿಷ್ ಸಾಹಿತ್ಯವನ್ನು ಪರಿಚಯಿಸಿದರು. ಇದಲ್ಲದೆ ರಾಜಕೀಯವಾಗಿ, ಸಾಮಾಜಿಕವಾಗಿ ಅನೇಕ ಕಾಯ್ದೆಗಳನ್ನು ತಂದರು. ಇದರ ಪರಿಣಾಮವೇ ಹೊಸ ಸಾಹಿತ್ಯದ ಉಗಮ. ಅಲ್ಲಿಂದ ಆರಂಭವಾದ ಹೊಸ ಕಿರಣಗಳು ಭಾರತದ ಎಲ್ಲಾ ಭಾಗಗಳನ್ನು ಆಕ್ರಮಿಸಿತು. ಉಳಿದ ಎಲ್ಲಾ ಭಾಷೆಗಳಲ್ಲೂ ಇದರ ಪ್ರಭಾವವನ್ನು ಕಾಣಬಹುದಾಗಿದೆ.

೧೯ನೇ ಶತಮಾನದಲ್ಲಿ ಅನುವಾದ ಕೃತಿಗಳ ಪ್ರೇರಣೆಯಿಂದ ಹುಟ್ಟಿಕೊಂಡ ಚಿಂತನೆಗಳಲ್ಲಿ ಪ್ರಮುಖವಾದುದು ಪ್ರಕಾರ. ಕನ್ನಡದಲ್ಲಿ ಕಾವ್ಯ ರೂಪದ ಸಾಹಿತ್ಯ ರಚನೆಗೆ ಭಿನ್ನವಾಗಿ ಹೊಸ ಮಾದರಿಯ ಪ್ರಕಾರಗಳಾದ ಕಾದಂಬರಿ, ಸಣ್ಣಕತೆ, ಭಾವಗೀತೆ, ನಾಟಕ, ಜೀವನ ಮತ್ತು ಆತ್ಮಚರಿತ್ರೆಗಳು ಮುಖ್ಯವಾದುವು. ಕಬ್ಬಿಣದ ಕಡಲೆಯಂತಿದ್ದ ಹಾಗು ಕೇವಲ ಪಂಡಿತ ವರ್ಗಕ್ಕೆ ಮಾತ್ರ ಸೀಮಿತವಾದಂತಿದ್ದ ಕಾವ್ಯ ಪ್ರಕಾರಕ್ಕಿಂತ ಈ ಗದ್ಯ ಹಾಗೂ ಸರಳವಾದ ಕವಿತೆಯಂತಹ ಹೊಸ ಪ್ರಕಾರಗಳು ಹೆಚ್ಚು ಪ್ರಿಯವಾದುವು. ಸರಳವಾದ ಛಂದೋ ರಹಿತವಾದ ರೂಪವು ಸಾಮಾನ್ಯರನ್ನೂ ಆಕರ್ಷಿಸಿತು. ಪ್ರಾಸ, ಅಷ್ಟಾದಶ ವರ್ಣನೆಯಂತಹ ತೊಡಕಿಲ್ಲದೆ ಕಾವ್ಯ ರಚಿಸುವ ಹೊಸ ಮಾರ್ಗವು ತಾವೂ ಕೂಡ ಹೊಸ ಮಾದರಿಗಳಲ್ಲಿ ಅನುವಾದ ಇಲ್ಲವೆ ಹೊಸ ಕೃತಿ ರಚನೆಯಾದವು.

ಪ್ರಕಾರದ ಜೊತೆಗೆ ಜನರು ಹೆಚ್ಚು ಆಕರ್ಷಿತರಾದದ್ದು ಇಂಗ್ಲಿಷ್ ಕೃತಿಗಳ ಭಾಷಾಶೈಲಿ. ಜನರಾಡುವ ಭಾಷೆಯೇ ಸಾಹಿತ್ಯದ ಭಾಷೆಯಾಗಬಹುದು ಎಂಬ ಚಿಂತನೆ. ವಚನ ಸಾಹಿತ್ಯ, ದಾಸ ಸಾಹಿತ್ಯದ ಸರಳ ರೂಪಕ್ಕಿಂತಲೂ ಸರಳವಾದ ಭಾಷಾಸ್ವರೂಪವು ಹೊಸ ಮಾದರಿಯ ಸಾಹಿತ್ಯವನ್ನು ರಚಿಸುವಂತೆ ಉತ್ತೇಜಿಸಿತು. ಗದ್ಯ ಸಾಹಿತ್ಯದ ಭಾಷೆ, ಕತೆ ಸಾಗುವ ಕ್ರಮವು ಬಹಳ ಸುಲಭ ಮಾರ್ಗವನ್ನು ನೀಡಿತು.

ಪಾಶ್ಚಾತ್ಯ ಸಾಹಿತ್ಯದ ಮತ್ತೊಂದು ಪ್ರಮುಖ ಅಂಶವೆಂದರೆ ಅದರ ವಸ್ತು. ಭಾರತೀಯ ಪರಿಸರದಲ್ಲಿದ್ದ ಪೌರಾಣಿಕ, ಐತಿಹಾಸಿಕ, ಧಾರ್ಮಿಕ ಕಾವ್ಯ ಪರಂಪರೆಗೆ ಭಿನ್ನವಾದ ವಸ್ತು ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದು ಪಾಶ್ಚಾತ್ಯ ಸಾಹಿತ್ಯದಲ್ಲಿ. ಧೀರೋದಾತ್ತ ನಾಯಕ, ಪ್ರತಿನಾಯಕರ ಬದಲಿಗೆ ಸಾಮಾನ್ಯ ಮನುಷ್ಯನ ಜೀವನವೂ ಸಾಹಿತ್ಯದ ವಸ್ತುವಾಗಬಹುದೆಂಬುದರ ಅರಿವು ಇದರಿಂದ ನಮಗೆ ದೊರೆಯಿತು. ಸಣ್ಣ ಘಟನೆಗಳೂ ಕೃತಿ ರೂಪವನ್ನು ಪಡೆದುವು. ದೇಶ ಭಕ್ತಿ, ಸ್ವಾತಂತ್ರ್ಯದ ಕಲ್ಪನೆ, ಸ್ತ್ರೀ ಸ್ವಾತಂತ್ರ್ಯದಂತಹ ಹೊಸ ಆಲೋಚನೆಗಳನ್ನು, ಪ್ರತಿಭಟನೆಗಳನ್ನೂ ತಮ್ಮ ಸಾಹಿತ್ಯದ ಮೂಲಕ ವ್ಯಕ್ತಪಡಿಸಲು ಕಾರಣವಾಯಿತು.

ಹೊಸಗನ್ನಡ ಸಾಹಿತ್ಯವು ಪ್ರಕಾರ, ಆಶಯಗಳ ಮೂಲಕ ದಾಖಲಿಸಿದ ಚಿಂತನೆಗಳಿಗೆ ಅನುವಾದಗಳು ಮೂಲ ತಳಹದಿಯನ್ನು ಒದಗಿಸಿವೆ. ಅನುವಾದ ಕೃತಿಗಳನ್ನು ಅವುಗಳ ಹಿಂದಿನ ಕಾಳಜಿಗಳ ಪರಿಶೀಲನೆಯಿಂದ ಸ್ವಂತ ವಿಧಾನಗಳು ರೂಪುತಳೆಯಲು ಪೂರಕ ಶಕ್ತಿಯಾಗಿ ಒದಗಿವೆ ಎಂಬುದನ್ನು ಮನಗಾಣಲಾಗಿದೆ. ಒಟ್ಟಾರೆಯಾಗಿ ಅನುವಾದಿತ ಕೃತಿಗಳು ೧೯ನೇ ಶತಮಾನದ ಹೊಸಗನ್ನಡ ಸಾಹಿತ್ಯದ ಒಟ್ಟು ಸ್ವರೂಪ ಬದಲಾಗುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಇಡೀ ದೇಶದ ವ್ಯವಸ್ಥೆಯ ಬದಲಾವಣೆ ಮತ್ತು ಮನೋಧರ್ಮ ಹೊಸತನವನ್ನು ಪಡೆಯುವಲ್ಲಿ ಕೂಡ ಸಹಕಾರಿಯಾಗಿದೆ.

ಪಾಶ್ಚಾತ್ಯ ಸಾಹಿತ್ಯದ ಅನುವಾದ ಪ್ರಕ್ರಿಯೆ ೧೯ನೇ ಶತಮಾನದ ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದಂತೆ ನಂತರದಲ್ಲಿ ಅಂದರೆ ೨೦ನೇ ಶತಮಾನದಲ್ಲಿ ಅನುವಾದಗೊಂಡ ಸಾಹಿತ್ಯ

ಕೃತಿಗಳು ಮುಂದಿನ ಕನ್ನಡ ಸಾಹಿತ್ಯದಲ್ಲಿ ರೂಪಿಸಿದ ಹೊಸಚಿಂತನೆಗಳ ಬಗ್ಗೆ ಅಧ್ಯಯನ ನಡೆಸಲು ಅವಕಾಶವಿದೆ. ಕಾಲದಿಂದ ಕಾಲಕ್ಕೆ ಸಾಹಿತ್ಯದ ಸ್ವರೂಪ, ವಸ್ತು, ಧೋರಣೆಗಳು ಬದಲಾವಣೆ ಹೊಂದುತ್ತಲೇ ಇರುತ್ತವೆ. ಇವು ಹೊಸಗನ್ನಡ ಸಾಹಿತ್ಯದಲ್ಲಿ ಮೂಡಿಬಂದಿರುವ ಬಗೆಯನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಜಾಗತೀಕರಣ ಹಾಗೂ ಮಾಹಿತಿ ತಂತ್ರಜ್ಞಾನದ ಯುಗದ ಸಂದರ್ಭದಲ್ಲಿ ಇಂತಹ ಅಧ್ಯಯನಗಳ ಅವಶ್ಯಕತೆ ಇದೆ.

* * * * *

# ಅನುಬಂಧಗಳು

## ಅನುಬಂಧ – ೧

**ಪ್ರಾಥಮಿಕ ಆಕರ ಗ್ರಂಥಗಳು:–**

ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ, ೧೯೪೯, ಕರ್ಣಾಟಕ ಶಾಕುಂತಲ ನಾಟಕಂ, ಶ್ರೀ ಚಾಮುಂಡೇಶ್ವರೀ ಇಲೆಕ್ಟ್ರಿಕ್ ಪ್ರೆಸ್, ಮೈಸೂರು

ಇಂಗ್ಲಿಷ್ ಗೀತೆಗಳು – ೧೯೮೩ – ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಮಾಲೆ ಬೆಂಗಳೂರು

ಕೆರೂರ ವಾಸುದೇವಾಚಾರ್ಯ, ೧೯೭೮, ಇಂದಿರಾ, ಉಷಾ ಸಾಹಿತ್ಯಮಾಲೆ, ಮೈಸೂರು

ಕೆರೂರ ವಾಸುದೇವಾಚಾರ್ಯ, ೧೯೫೨, ಯವನಸ್ಯೈರಂಧ್ರೀ, ಮನೋಹರ ಗ್ರಂಥಮಾಲೆ, ಧಾರವಾಡ.

ಗಳಗನಾಥ, ೧೯೧೩, ಕುಮುದಿನ, ಸಮಾಜ ಪುಸ್ತಕಾಲಯ, ಧಾರವಾಡ.

ಗಳಗನಾಥ, ಮಾಧವ ಕರುಣಾ ವಿಲಾಸ, ಸಮಾಜ ಪುಸ್ತಕಾಲಯ, ಧಾರವಾಡ

ಗಳಗನಾಥ, ಈಶ್ವರೀ ಸೂತ್ರ, ೧೯೩೯, ಕರ್ನಾಟಕ ಪ್ರಿಂಟಿಂಗ್ ವರ್ಕ್ ಪ್ರೆಸ್, ಹಾವೇರಿ

ಗಳಗನಾಥ, ಕನ್ನಡಿಗರ ಕರ್ಮಕಥೆ

ಗಳಗನಾಥ, ಧರ್ಮ ರಹಸ್ಯ, ೧೯೧೪, ಶ್ರೀ ಶೇಷಾಚಲ ಸದ್ಬೋಧ ಚಂದ್ರಿಕೆ ಗ್ರಂಥಮಾಲೆ

ಗುಲ್ವಾಡಿ ವೆಂಕಟರಾಯರು, ೧೮೯೯, ಇಂದಿರಾಬಾಯಿ,

ತಾತಾಆರ್, ೧೯೧೩, ಮರುನ್ನಂದನ ಶತಕಂ ——

ನಂಜನಗೂಡು ಅನಂತ ನಾರಾಯಣಶಾಸ್ತ್ರೀ, ಕರ್ನಾಟಕ ನಾಗಾನಂದ ನಾಟಕಂ, ೧೯೫೬, ಹಿಂದುಸ್ಥಾನ್ ಪ್ರೆಸ್, ಮೈಸೂರು.

ಪುಟ್ಟಣ್ಣ.ಎಂ.ಎಸ್, ಮಾಡಿದುಣ್ಣೋ ಮಹಾರಾಯ,——

ಪುಟ್ಟಣ್ಣ.ಎಂ.ಎಸ್, ಮುಸುಕು ತೆಗೆಯೇ ಮಾಯಾಂಗನೆ, ೧೯೧೫, ಕಾವ್ಯಾಲಯ, ಮೈಸೂರು.

ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ, ರಾಷ್ಟ್ರಗೀತ ರತ್ನಾಕರ, ೧೯೨೪, ಸರಸ್ವತೀ ಪ್ರಿಂಟಿಂಗ್ ಪ್ರೆಸ್, ಮಂಗಳೂರು.

ಬೇಂದ್ರೆ,ದ.ರಾ, ೧೯೬೫ ಸಖೀಗೀತ, ಸಮಾಜ ಪುಸ್ತಕಾಲನು, ಧಾರವಾಡ

ಮಾಸ್ತಿ ವೆಂಕಟೇಶ ಅಯ್ಯಂಗಾರ್, ನವರಾತ್ರಿ,

ಮಾಳವಾಡ.ಎಸ್.ಎನ್, ಗದ್ಯ ಕನ್ನಡಮಾಲೆ ೨, ೧೯೪೨, ಸ್ಟುಡೆಂಟ್ಸ್ ಓನ್ ಬುಕ್ ಡಿಪೋ, ಧಾರವಾಡ.

ಮಂಗೇಶ ರಾವ್.ಪಿ, ಕನ್ನಡ ಎರಡನೆಯ ಪದ್ಯ ಪುಸ್ತಕ, ೧೯೧೯, ಬಾಸಲ್ ಮಿಷನ್, ಮಂಗಳೂರು.

ವೆಂಕಟಾಚಾರ್ಯ.ಬಿ, ಅಮೃತ ಪುಲಿನ, ೧೯೫೮, ಕಲ್ಯಾಣ್ ಪ್ರಿಂಟರ್ಸ್, ಬೆಂಗಳೂರು

ವೆಂಕಟಾಚಾರ್ಯ.ಬಿ, ಆನಂದಮಠ, ೧೮೯೭, ಜಿ.ಕೆ.ಅಂಡ್ ಬ್ರದರ್ಸ್, ಬೆಂಗಳೂರು.

ವೆಂಕಟಾಚಾರ್ಯ.ಬಿ, ವಿಷವೃಕ್ಷ, ——

ವೆಂಕಟಾಚಾರ್ಯ.ಬಿ, ವಂಗವಿಜೇತ, ——

ವೆಂಕಟಾಚಾರ್ಯ.ಬಿ, ೧೯೩೦, ಕೋಹಿನೂರು, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ, ಬೆಂಗಳೂರು

ವೆಂಕಟಾಚಾರ್ಯ.ಬಿ, ೧೮೯೯, ದೇವಿಚೌಧುರಾಣಿ, ಬೆಂಗಳೂರು ಪ್ರೆಸ್, ಬೆಂಗಳೂರು

ವೆಂಕಟಾಚಾರ್ಯ.ಬಿ, ೧೯೩೦, ದುರ್ಗೇಶ ನಂದಿನಿ, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ, ಬೆಂಗಳೂರು

ವೆಂಕಟಾಚಾರ್ಯ.ಬಿ, ೧೯೨೮, ಕಪಾಲಕುಂಡಲ, ಸಾಹಿತ್ಯಮಂದಿರ – ಬೆಂಗಳೂರು

ವೆಂಕಟಾಚಾರ್ಯ.ಬಿ, ೧೯೧೩, ಯುಗಳಾಂಗುರೀಯ, ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಶ್ವ ಪ್ರೆಸ್–ಮೈಸೂರು

ವೆಂಕಟಾಚಾರ್ಯ.ಬಿ, ರಾಮೇಶ್ವರನ ಅದೃಷ್ಟ, ——

ವೆಂಕಟಾಚಾರ್ಯ.ಬಿ, ೧೮೯೯, ಅಡವಿಯ ಹುಡುಗಿ, ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋನಯೇಶ್ವ ಪ್ರೆಸ್ ——

ವೆಂಕಟಾಚಾರ್ಯ.ಬಿ, ನವಾಬನಂದಿನಿ, ೧೯೧೩, ——

ವೆಂಕಟಾಚಾರ್ಯ.ಬಿ, ರಾಧಾರಾಣಿ, ——

ವೆಂಕಟೇಶ ಅಯ್ಯಂಗಾರ್ ಮಾಸ್ತಿ, ಆರು ಸಣ್ಣ ಕತೆಗಳು, ೧೯೫೭, ಜೀವನ ಕಾರ್ಯಾಲಯ,ಬೆಂಗಳೂರು.

ಶ್ರೀಕಂಠಯ್ಯ.ಬಿ.ಎಂ, ೧೯೬೮, ಅಶ್ವತ್ಥಾಮನ್, ——

ಶ್ರೀಕಂಠಯ್ಯ.ಬಿ.ಎಂ, ೧೯೭೬, ಪಾರಸಿಕರು, ಶಾರದಾ ಮಂದಿರ, ಮೈಸೂರು.

ಶ್ರೀನಿವಾಸ, ೧೯೭೦, ನವರಾತ್ರಿ, ಜೀವನ ಕಾರ್ಯಾಲಯ, ಬೆಂಗಳೂರು.

ಸಂಗಪ್ಪ ಸಾಸನೂರ, ಆಧುನಿಕ ಕನ್ನಡ ಕವಿತೆ

**ಪತ್ರಿಕೆಗಳು**

**ಚರಿತ್ರೆ**

ಆರ್ನಾಲ್ಡರವರ ಚರಿತ್ರೆ, ಜೂನ್ ೧೯೦೦, ವಿದ್ಯಾದಾಯಿನಿ

ಕನ್ನಡಿಗರ ಪೂರ್ವೇತಿಹಾಸ, ೧೮೬೬, ಕೆ. ಹನುಮಾನ್, ಸ್ವಧರ್ಮ

ಕ್ರಿಸ್ಟಾಫರ್ ಕೊಲಂಬಸ್‌ನ ಜೀವನಚರಿತ್ರೆ, ೧೯೧೦, ಆನವಟ್ಟಿಯ ರಾಮರಾಯ, ವಿದ್ಯಾದಾಯಿನಿ

ಕೌಂಟ ಟಾಲ್‌ಸ್ಟಾಯ್ ಜೀವನ, ೧೯೧೮, ಸ್ವಧರ್ಮ

ಗೋಖಲೆಯವರ ಜೀವನ ಚರಿತ್ರೆ, ೧೯೧೭

ಚೈತನ್ಯ ಚರಿತ್ರೆ, ಆಗಸ್ಟ್ ೧೮೯೧, ಹಿತಬೋಧಿನಿ.

ಜಹಿರುದ್ದೀನ್ ಮಹಮ್ಮದ್ ಬಾಬರನ ಚರಿತ್ರೆ, ಆಗಸ್ಟ್ ೧೯೧೯, ವಿದ್ಯಾದಾಯಿನಿ.

ಟಿಪ್ಪು ಸುಲ್ತಾನನ ಚರಿತ್ರೆ, ೧೮೯೬,

ಟೆಲಿಮಾಕಪ್ಪನ ಚರಿತ್ರೆ, ೧೯೧೯, ಎಂ. ವೆಂಕಟಕೃಷ್ಣಯ್ಯ.

ತಾತಾಸಾಹೇಬರ ಚರಿತ್ರೆ, ಜನವರಿ ೧೯೦೫, ಹಿತವಾದಿ.

ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಚರಿತ್ರೆ, ಸೆಪ್ಟೆಂಬರ್ ೧೯೨೨, ಕನ್ನಡ ಸಹಕಾರಿ.

ನಾಮದಾರ ಎವರ್ಟ್ ಗ್ಲ್ಯಾಡ್ಸ್ಟನ್ನ ದೊರೆಗಳ ಚರಿತ್ರೆ, ೧೯೦೯, ಫ.ಗು.ಹಳಕಟ್ಟಿ, ವಿದ್ಯಾದಾಯಿನಿ.

ಪೆಸ್ಟಲಾಟ್ಸರವರ ಚರಿತ್ರೆ, ೧೯೦೦, ವಿದ್ಯಾದಾಯಿನಿ.

ಬರ್ಥೋಲ್ಡನ ಚರಿತ್ರೆ, ೧೯೦೦, ವೆಂಕಟರಂಗೋ ಕಟ್ಟಿ, ವಿದ್ಯಾದಾಯಿನಿ.

ಬುದ್ಧ ಚರಿತೆ, ಸೆಪ್ಟೆಂಬರ್ ೧೯೦೦, ಸುವಾಸಿನಿ.

ಮಹಮ್ಮದ್ ಶುಕ್ರಿಯ ಚರಿತ್ರೆ, ಆಗಸ್ಟ್, ಸತ್ಯದೀಪಿಕೆ.

ಮಹಾದೇವ ಗೋವಿಂದ ರಾನಡೆ, ೧೯೧೦, ಶ್ರೀಕೃಷ್ಣ ಸೂಕ್ತಿ.

ಮಾರ್ಕಸ್ ಅರೇಲಿಯಸಿಸ್, ಮೇ ೧೯೦೫, ಹಿತವಾದಿ.

ರಾಜರಾಮ್ ಮೋಹನರಾಯಾನ ಚರಿತ್ರೆ, ಮೇ ೧೯೦೫, ಹಿತವಾದಿ.

ರಾವ್ ಬಹದ್ದೂರ್ ವೀರೇಶಲಿಂಗ ಪಂತರ ಚರಿತ್ರೆ, ಆಗಸ್ಟ್ ೧೯೦೨, ಸುಹಾಸಿನಿ.

ವೇನರಾಜನ ಚರಿತ್ರೆ, ಬಂಡೋರಾಮಚಂದ್ರ ಕೌಶಲಗಿ, ಸ್ವಧರ್ಮ.

ವಿದ್ಯಾರಣ್ಯರ ಚರಿತ್ರೆ, ಸ್ವಧರ್ಮ.

ಸಿಕಂದರ ಬಾದಶಹರ ಚರಿತ್ರೆ, ೧೯೧೪, ಫ.ಗು.ಹಳಕಟ್ಟಿ

**ಇತರೆ ಲೇಖನಗಳು**

ಅಬಲೋನ್ನತಿ ಲೇಖಮಾಲ, ೧೮೯೧, ಮ.ಸೂ.ನಾರಾಯಣರಾವ್(ಅನು), ಹಿತಬೋಧಿನಿ.

ಆಂಗ್ಲೇಯರ ಗದ್ಯದ ಆರಂಭ ಚರಿತ್ರೆ, ಜನವರಿ ೧೯೨೭, ಮಾಸ್ತಿ ವೆಂಕಟೇಶ ಐಯ್ಯಂಗಾರ್, ಸತ್ಯ ದೀಪಿಕೆ.

ಇಂಡಿಯಾ ದೇಶದ ಪುರಾತನ ನಾಗರೀಕತೆ ಮತ್ತು ನವೀನ ವಿದ್ಯಾಭ್ಯಾಸ, ಡಿಸೆಂಬರ್ ೧೮೯೦, ಸರ್ ವಿಲಿಯಂ ಹಂಟರ್, ಹಿತಬೋಧಿನಿ.

ಕನ್ನಡದಲ್ಲಿ ಕನ್ನಡಿಗರ ಆತ್ಮಕಥೆ, ಆಗಸ್ಟ್ ೧೩ ೧೯೪೮, ತಿರುಮಲೆ ತಾತಾಶರ್ಮ- ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ.

ಕನ್ನಡದಲ್ಲಿ ನವೀನ ವೃತ್ತಗಳು, ನವೆಂಬರ್ ೧೯೨೮, ಮಲ್ಲಾರಿ, ಜಯಕರ್ನಾಟಕ.

ಕರ್ನಾಟಕದ ನಾಟಕಗಳು, ನವೆಂಬರ್ ೧೯೨೮, ಶಿವಮೂರ್ತಿ ಶಾಸ್ತ್ರಿ, ಜಯಕರ್ನಾಟಕ.

ಭಾಗೀರಥಿ, ೧೯೦೧, ಗುಲ್ವಾಡಿ ವೆಂಕಟರಾಯರು, ಸುಹಾಸಿನಿ.

ಗೇರುಸೊಪ್ಪು ಜೋಗ, ಮಾರ್ಚ್ ೧೯೦೦, ——, ವಿದ್ಯಾದಾಯಿನಿ.

ಚಂದ್ರಲೀಲೆ, ಜನವರಿ ೧೯೦೦, ——, ಸತ್ಯ ದೀಪಿಕೆ.

ಚರಿತ್ರೆ ಮತ್ತು ಕಥೆಗಳ ಪದ್ಯಾವಳಿ, ಜೂನ್ ೧೯೨೨,——, ಕನ್ನಡ ಸಹಕಾರಿ.

ದೇಶ ಭಾಷೆಯ ಮೂಲಕ ವಿದ್ಯಾಭ್ಯಾಸ ಮಾಡುವುದು, ಜೂನ್ ೧೯೧೯, ವಿದ್ಯಾದಾಯಿನಿ.

ದೇಶ ಭಾಷೆಗಳೂ ಆಂಗ್ಲಭಾಷೆಯೂ, ಮೇ ೧೯೦೫, ——, ಹಿತವಾದಿ

ನನ್ನ ಚಿಕ್ಕತಾಯಿ, ೧೯೦೦, ಪಂಜೆ ಮಂಗೇಶರಾಯ, ಸುಹಾಸಿನಿ.

ನನ್ನ ಹೆಂಡತಿ, ೧೯೦೦, ಪಂಜೆ ಮಂಗೇಶರಾಯ, ಸುಹಾಸಿನಿ.

ನನ್ನ ಚಿಕ್ಕತಂದೆ, ೧೯೦೦, ಪಂಜೆ ಮಂಗೇಶರಾಯ, ಸುಹಾಸಿನಿ.

ನನ್ನ ಚಿಕ್ಕತಂದೆಯ ಉಯಿಲ್, ೧೯೦೦, ಪಂಜೆ ಮಂಗೇಶರಾಯ, ಸುಹಾಸಿನಿ.

ನನ್ನ ಅಜ್ಜ, ಜನವರಿ ೧೯೦೯, ——, ಸತ್ಯದೀಪಿಕೆ.

ಪಾಶ್ಚಾತ್ಯರ ವಿದ್ಯಾಪ್ರಚಾರ, ಜೂನ್, ೧೯೦೦ ವಿದ್ಯಾದಾಯಿನಿ.

ಬರೋಡಾ ಸಂಸ್ಥಾನದಲ್ಲಿನ ವಿದ್ಯಾಭ್ಯಾಸ, ಏಪ್ರಿಲ್ ೧೯೦೦, ——, ವಿದ್ಯಾದಾಯಿನಿ.

ಬಂಗಾರದ ಆಮೆ, ಜೂನ್ ೧೯೦೦, ——, ವಿದ್ಯಾದಾಯಿನಿ.

ಭಾಷಾಭಿವೃದ್ಧಿಯ ಪ್ರಶ್ನೆ, ಜುಲೈ ೧೯೧೨, ——, ಶ್ರೀಕೃಷ್ಣಸೂಕ್ತಿ.

ಮಂಗೂನಾಗೂ, ಫೆಬ್ರವರಿ ೧೮೯೬, ——, ಸುದರ್ಶನ.

ರಮಾಮಾಧವ, ೧೯೦೦, ——, ಸುವಾಸಿನಿ.

ವಿದ್ಯಾಭ್ಯಾಸ, ನವೆಂಬರ್ ೧೮೯೦, ಎಸ್.ವಿ.ನಂಜುಂಡಯ್ಯ, ಹಿತಬೋದಿನಿ.

ವಿಧವಾ ವಪನ ಅನಾಚಾರ ಮಂಡನ, ೧೮೮೯, ವೆಂಕಟರಂಗೋಕಟ್ಟಿ, ——.

ಸಣ್ಣಕತೆ, ಆಗಸ್ಟ್ ೧೫ ೧೯೪೮, ನಂಜುಂಡಾರಾಧ್ಯ ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಸಂಧ್ಯಾಭ್ರಲೇಖೆ, ೧೮೯೯, ——, ಸತ್ಯದೀಪಿಕೆ

ಹೆಣ್ಣು ಮಕ್ಕಳ ಬಲತ್ಕಾರದ ವಿದ್ಯಾಭ್ಯಾಸ, ನವೆಂಬರ್ ೧೯೧೯, ——, ವಿದ್ಯಾದಾಯಿನಿ

## ಅನುಬಂಧ – ೨

**ಆನುಷಂಗಿಕ ಆಕರ ಗ್ರಂಥಗಳು**

ಅನಂತ ನಾರಾಯಣ.ಎಸ್, ೧೯೬೨, ಕನ್ನಡ ಕವಿತೆಗಳ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಗಂಗಾ ತರಂಗ, ಮೈಸೂರು.

ಐತಾಳ.ಶಂ.ಸ., ೧೯೯೫, ಭಾಷಾಂತರ ಕೈಪಿಡಿ, ತಳಗವಾದಿ ಪ್ರಕಾಶನ, ಮೈಸೂರು

ಕರಿಗೌಡ ಬೀಚನಹಳ್ಳಿ, ೨೦೦೩, ಶತಮಾನದ ಸಣ್ಣ ಕಥೆಗಳ ಸಮೀಕ್ಷೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಕೀರ್ತಿನಾಥ ಕುರ್ತಕೋಟಿ, ೧೯೬೨, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥಮಾಲೆ, ಧಾರವಾಡ.

ಕೀರ್ತಿನಾಥ ಕುರ್ತುಕೋಟಿ, ೧೯೯೬, ವಿಮರ್ಶೆಯ ವಿನಯ ಕಾದಂಬರಿ, ಮನೋಹರ ಗ್ರಂಥಮಾಲೆ, ಧಾರವಾಡ.

ಕುಳ್ಳಿ.ಜೆ.ಎಸ್ ಮತ್ತು ಜಿ.ಪಿ.ಮುರಡಿ, ೧೯೭೫, ಅನುವಾದ ಕಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕೃಷ್ಣಮೂರ್ತಿ ಕಿತ್ತೂರ, ೧೯೭೮, ಗಳಗನಾಥ ಮತ್ತು ಅವರ ಕಾದಂಬರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗಿರಡ್ಡಿ ಗೋವಿಂದ ರಾಜು, ೧೯೭೮, ಸಣ್ಣ ಕಥೆಯ ಹೊಸ ಒಲವುಗಳು, ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಗಿರಡ್ಡಿ ಗೋವಿಂದ ರಾಜು, ೧೯೭೬, ಕಾದಂಬರಿ:ವಸ್ತು ಮತ್ತು ತಂತ್ರ, ಬಾಪ್ಕೋ ಪ್ರಕಾಶನ, ಬೆಂಗಳೂರು

ಗೀತಾ ಪ್ರಸಾದ್ ಮತ್ತು ಎಸ್ ಪ್ರಸಾದ್ ಸ್ವಾಮಿ, ೨೦೧೧, ಅಸ್ಮಿತೆ, ಕಣ್ವ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು.

ತಾರಕೇಶ್ವರ್.ವಿ.ಬಿ.ಡಾ. ೨೦೦೬, ವಸಾಹತುಶಾಹಿ ಅನುಭವ ಮತ್ತು ಭಾಷಾಂತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಧಾರವಾಡ್ಕರ್.ರಾ.ಯ, ೧೯೭೫, ಹೊಸಗನ್ನಡ ಸಾಹಿತ್ಯದ ಉದಯಕಾಲ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನಂಜುಂಡಾರಾಧ್ಯ.ಎಂ.ಜಿ,(ಸಂ) ೧೯೯೭, ಅಭಿನವ ಕಾಳಿದಾಸ ಬಸಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು, ಪ್ರಬೋಧ ಮಸ್ತಕಮಾಲೆ,ಮೈಸೂರು.

ನಾಗರಾಜ.ಡಿ.ಆರ್, ೨೦೧೧, ಸಾಹಿತ್ಯ ಕಥನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ನಾಡಿಗ ಕೃಷ್ಣಮೂರ್ತಿ, ೧೯೭೯, ಬ್ರಿಟೀಷ್ ಪತ್ರಿಕೋದ್ಯಮ, ಸ್ನಾತಕೋತ್ತರ ಪತ್ರಿಕೋದ್ಯಮ ಇಲಾಖೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಾಯಕ್.ಜಿ.ಎಚ್, ೨೦೦೦ ಶತಮಾನದ ಕನ್ನಡ ಸಾಹಿತ್ಯ,

ಪರಮೇಶ್ವರ ಭಟ್.ಎಸ್.ವಿ, ಭಾವಗೀತೆ, ಪ್ರಸಾರಾಂಗ, ಮೈಸೂರು ವಿ.ವಿ, ಮೈಸೂರು

ಪ್ರಭುಶಂಕರ, ೧೯೬೬, ಕನ್ನಡದಲ್ಲಿ ಭಾವಗೀತೆ, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

ಬುರ್ಲಿ ಬಿಂದುಮಾಧವ, ೧೯೫೩, ಕಂನಾಡ ಸಾಹಿತ್ಯಜ್ಞರ ಆತ್ಮಕಥನ, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

ಭಟ್ಟ.ಜಿ.ಎಸ್, ೧೯೯೦, ರುದ್ರನಾಟಕ ಒಂದು ಅವಲೋಕನ, ಚೇತನ ಬುಕ್.ಹೌಸ್ ಮೈಸೂರು.

ಮರುಳಸಿದ್ದಪ್ಪ.ಕೆ, ೨೦೦೨, ಆಧುನಕ ಕನ್ನಡ ನಾಟಕ, ಅಂಕಿತ ಪುಸ್ತಕ, ಬೆಂಗಳೂರು.

ಮುತ್ತಣ್ಣ.ಐ.ಮಾ, ೧೯೬೯, ಹತ್ತೊಂಬತ್ತನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಆರ್.ಎನ್.ಹಬ್ಬು ಪ್ರಕಾಶನ,ಮೈಸೂರು

ಮ್ಯಾಗೇರಿ.ಐ.ಜಿ, ೨೦೦೮, ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಂಗನಾಥ ರಾವ್.ಜಿ.ಎಸ್, ೨೦೧೧, ಕನ್ನಡದ ಮೊದಲ ಕಾದಂಬರಿಗಳು, ವಸಂತ ಪ್ರಕಾಶನ ಬೆಂಗಳೂರು

ರಾಮಚಂದ್ರನ್.ಸಿ.ಎನ್, ೨೦೦೭, ರಕ್ತಿ- ರೂಪಣೆ, ಕನ್ನಡ ವಿಶ್ವಾವಿದ್ಯಾಲಯ, ಹಂಪಿ.

ವಾಸುದೇವ ಶಾಸ್ತ್ರೀ, ೨೦೦೮, ಆಧುನಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ವಿಜಯಹರನ್.ಎಂ.ಎಸ್, ೧೯೯೮, ಆನಂದರ ಬದುಕು ಬರಹ: ಒಂದು ಅಧ್ಯಯನ, ಕಾವ್ಯಾಲಯ ಪ್ರಕಾಶನ, ಮೈಸೂರು

ವೆಂಕಟೇಶ್ ಮೂರ್ತಿ.ಎಚ್.ಎಸ್, ೧೯೮೭, ಕನ್ನಡದಲ್ಲಿ ಕಥನ ಕವನಗಳು, ಕೃತಿ ಪ್ರಕಾಶನ ಬೆಂಗಳೂರು

ಶಾಮ್ಮರಾಯ.ತಾ.ಸು, ೧೯೬೧, ಕನ್ನಡ ನಾಟಕ, ಗೀತಾ ಬುಕ್ ಹೌಸ್,ಮೈಸೂರು.

ಶಾಂತಲಕ್ಷ್ಮೀ, ೨೦೦೮, ಆಧುನಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

ಶಿವರುದ್ರಪ್ಪ.ಜಿ.ಎಸ್. ೧೯೯೧, ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು, ಪ್ರಸಾರಾಂಗ, ಬೆಂ.ವಿ.ವಿ

ಶಿವಲಿಂಗಪ್ಪ ಭಂಡಾರಿ, ೨೦೧೧, ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ.

ಶ್ರೀಕಂಠಯ್ಯ.ಬಿ.ಎಂ, ೧೯೭೦, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಕಾವ್ಯಾಲಯ, ಮೈಸೂರು.

ಶ್ರೀಕಂಠಯ್ಯ.ತಿ.ನಂ, ೧೯೫೮, ಸಮಾಲೋಕನ, ವೆಸ್ಲಿ ಪ್ರೆಸ್, ಮಂಗಳೂರು.

ಶ್ರೀನಿವಾಸ ರಾಘವಾಚಾರ್ಯ, ೧೮೯೫, ಛಂದೋಮಾಲಿಕೆ, ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷ್ಸ್ ಪ್ರೆಸ್, ಮೈಸೂರು.

ಶ್ರೀನಿವಾಸ ಹಾವನೂರ, ೨೦೦೦, ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

ಸಂಗಪ್ಪ ಸಾಸನೂರ, ೧೯೩೦, ಆಧುನಿಕ ಕನ್ನಡ ಕವಿತೆ, ಲಾ ಕಾಲೇಜು, ಪುಣೆ

ಸುಜಾತ.ಹೆಚ್.ಎಸ್, ೧೯೮೧, ಎಂ.ಎಸ್.ಪುಟ್ಟಣ್ಣ; ಒಂದು ಆಧ್ಯಯನ, ಐ.ಬಿ.ಹೆಚ್,ಪ್ರಕಾಶನ, ಬೆಂಗಳೂರು.

ಸುರೇಶ ಪಾಡಿಲು, ೨೦೦೮ ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ,

ಹರಿಕೃಷ್ಣ ಭರಣ್ಯ, ೧೯೯೦, ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ, ಪ್ರಭಾಸ ಬಿಡುಗೊಡೆ ಮಧುರೈ

ಹರಿಕೃಷ್ಣ ಭರಣ್ಯ, ೨೦೧೬, ಓದಿದ್ದು ಬರೆದದ್ದು, ಮಧು ಪಬ್ಲಿಕೇಷನ್ಸ್ ಅಂಡ್ ಎಂಟರ್ ಪ್ರೈಸಸ್– ರಾಮನಗರ.

* * * * *

## ಕೆಲವು ಅಮೂಲ್ಯವಾದ ಪತ್ರಿಕೆ ಹಾಗು ಗ್ರಂಥಗಳ ಛಾಯಾಚಿತ್ರ



# SUVASINI

*A Monthly Journal*

*In Canarese*

*Devoted to*

*Education, Science and Art.*

Edited by B. Rama Rau, M. A., Christian College, Madras.

Vol. I. 1st JULY 1900. No. 1.


Contents.




Published by

B. Vittal Rau, Proprietor and Manager.

Canara Book Depôt, Mangalore.

1900

Rate of Subscription: Rs. 2 per annum including postage.

Single copy As. 4.

